# "ನನ್ನ ಸ್ವಾದಿಷ್ಟಮಯ ಆಯ್ಕೆ... ಎಲ್‌ವಿಟಿ"

LVT

Glucose LVT

ಎಲ್‌ವಿಟಿ ಗ್ಲೂಕೋಸ್:-
ರುಚಿಕರ ಮತ್ತು ಆಹ್ಲಾದಮಯ
ಪುಷ್ಟಿದಾಯಕ ತಿನಿಸು.

LVT MARIE

ಎಲ್‌ವಿಟಿ ಮಾರಿ:-
ಅತಿ ಸಿಹಿಯಲ್ಲ, ಕಾಫಿಯೊಂದಿಗೂ
ಚೆನ್ನಾಗಿ ಹೊಂದಿಕೆಯಾಗುತ್ತದೆ.

PICK

ಎಲ್‌ವಿಟಿ ಪಿಕ್‌ಮಿ:-
ಮಧುರ ಉಪ್ಪಿನ ರುಚಿಗಾಗಿ

NOCH

ಎಲ್‌ವಿಟಿ ಟಾಪ್‌ನಾಚ್-
ಏಲಕ್ಕಿ ಕ್ರೀಮ್ ಬಿಸ್ಕಟ್,
ಆರೆಂಜ್, ಪೈನಾಪಲ್
ಸ್ವಾದಗಳಲ್ಲೂ ಸಹ ಲಭ್ಯ

## "ಹಾಲೂ ಇಷ್ಟು ರುಚಿಯಾಗಿಲ್ಲ"

Rich Bite

ತಿನ್ನಲು ಚೆನ್ನ
ಆಡಲು
ಮಜ

"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾಲೂ ಇಷ್ಟು ರುಚಿಯಾಗಿಲ್ಲ"
"ಹಾ ಹಾ ಹಾ ಹಾಲು!"

LVT ಬಿಸ್ಕಟ್‌ಗಳ ಜನತೆ



# ಕಸ್ತೂರಿ

ಕನ್ನಡ ಡೈಜೆಸ್ಟ್




ವ್ಯವಸ್ಥಾಪಕ ಸಂಪಾದಕ :

ಕೆ. ಶಾಮರಾವ್

**

ಸಹಸಂಪಾದಕ :

ಮಾಧವ ನಾ. ಮಹಿಷಿ

**

ಕಲೆ :

ಪಿ. ಆರ್. ಪಾಟೀಲ

**

ಮುಖಪುಟ :

ಕಿರಣ ಸಂಭ್ರಮ

**

ಛಾಯಾಚಿತ್ರ :

ಮಧುಸೂದನ ಜವಳಿ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

KASTURI. November 1986


# ಬೆಳಕಿಂಡಿ

ಹಂಚಿನಿಂದ ಜಾರಿದ ರೊಟ್ಟಿ "ಪಾರಾದೆ" ಎಂದುಕೊಂಡಿತಂತೆ, ಆದರೆ ಬಿದ್ದದ್ದು ಒಲೆಯೊಳಗೆ. ನಾವೂ ಹಾಗೆಯೆ. ಒಂದು ತೊಂದರೆಯಿಂದ ಪಾರಾಗಿ ಇನ್ನೊಂದು ತೊಂದರೆಗೆ ಸಿಕ್ಕಿಕೊಳ್ಳುತ್ತೇವೆ.

–ಎರಿಕ್ ಹಾಫರ್

•

ನಾಯಿಯ ನಂತರ, ಮನುಷ್ಯನ ಪರಮ ಮಿತ್ರನೆಂದರೆ ಕಸದ ಬುಟ್ಟಿ.

–'ಬಿಸಿನೆಸ್ ವೀಕ್'ನಿಂದ

•

ಅನುಭವಗಳಿಂದ ನಮಗೆ ಬುದ್ಧಿ ಬರುತ್ತದೆ. ಆದರೆ ಅನುಭವಗಳು ನಮ್ಮ ಮೂರ್ಖತನದಿಂದ ಬರುತ್ತವೆ.

–ಸಾಶಾ ಗಿಟ್ರಿ

•

ನಿನ್ನೊಂದಿಗಿರುವ ನಿರಂತರ ತೊಂದರೆ ಎಂದರೆ ನಾನು.

–ಜೀನ್ ಫಾರಿಸ್

---

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



ಪುಸ್ತಕ ವಿಭಾಗ

ಶ್ರೀ ದೇಶಪಾಂಡೆ ಸುಬ್ಬರಾಯರ ಅಭಿವ್ಯಕ್ತಿ ಅಭಿಜಾತವಾಗಿದೆ. ಆದರೆ ನನ್ನ ಬರಹಗಳಲ್ಲಿ ಬಂದ **ತನು**-ಜ ಮತ್ತು **ಮನು**-ಜ ಈ ವಿಭೇದವು ಇನ್ನೂ ಯಾರ ಗಮನ ಸೆಳೆದಂತಿಲ್ಲ. 'ಕಸ್ತೂರಿ'ಯಲ್ಲಿ ನಮೂದೂ ಆಗಲಿ ಎಂದು ಮನೀಷೆ.

ಧಾರವಾಡ —ಶಂ. ಬಾ. ಜೋಶಿ

**ಡಾ. ತೋರೋ**

ಅಕ್ಟೋಬರ್ 'ಕಸ್ತೂರಿ'ಯಲ್ಲಿ ಮೂಡಿ ಬಂದ ಡಾಕ್ಟರ್ ತೋರೋ ಅವರೊಂದಿಗಿನ ರಸನಿಮಿಷಗಳನ್ನು ಓದುತ್ತಿದಂತೆ ನಿಜವಾಗಿ ನಮಗೂ ಅವರ ಪ್ರಶ್ನೋತ್ತರಗಳು ರಸನಿಮಿಷಗಳೇ ಆದವು.

ಐನಾಪುರ —ಕೆ. ಬಿ. ಪಾಟೀಲ

ಅಕ್ಟೋಬರ್ 'ಕಸ್ತೂರಿ'ಯಲ್ಲಿ ಆತ್ಮೀಯ ಡಾ. ತೋರೋ ಅವರನ್ನು ಸಂದರ್ಶನದ ಮೂಲಕ ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟು ಉಪಕರಿಸಿದ್ದೀರಿ. ಡಾ. ಅ. ರಾ. ತೋರೋ ಉಭಯ ಸಾಹಿತ್ಯ ವಿಮರ್ಶಕರಾದಂತೆ ವೈಚಾರಿಕ ಸಾಹಿತ್ಯದ ಪ್ರವರ್ತಕರೂ ಆಗಿದ್ದಾರೆ. ಅವರ ಸಂದರ್ಶನ-ಪರಿಚಯ ಸಕಾಲಿಕವಾಗಿದೆ.

ಬನಹಟ್ಟಿ —ದು. ನಿಂ. ಬೆಳಗಲಿ

ಅಕ್ಟೋಬರ್ 'ಕಸ್ತೂರಿ'ಯಲ್ಲಿ ಡಾ. ತೋರೋರವರ ಸಂಗಡ ನಿಮ್ಮ ಸಂದರ್ಶನದ ಲೇಖನ ಸದ್ಯ ನಡೆದಿರುವ ಗಡಿ ನದಿಗಳ ಬಗ್ಗೆ ಜಗಳ ಮಾಡುವ ಜನರ ಕಣ್ಣು ತೆರೆಸುತ್ತದೆ. ಡಾ. ವರದರಾಜರ ಲೇಖನ ತ. ಸು. ವೆಂಕಣ್ಣಯನವರ ಬಗ್ಗೆ ಅಜ್ಞಾತ ಕತ್ತಲೆಯಲ್ಲಿದ್ದ ಅವರ ಒಂದು ಪೂರ್ವಭಾವಿ ಚರಿತ್ರಾಂಶವನ್ನು ಹೊರಗೆಡವಿದೆ. ಡಾ. ಹಾವನೂರವರ ಹೊಸಗನ್ನಡದ ಅರುಣೋದಯದ ಸಮೀಕ್ಷೆಯ ಪಕ್ಷಿನೋಟ ದಿಗ್ದರ್ಶನವಾಗಿದೆ.

ಇನ್ನು ಶ್ರೀ ಖಜಾನೆ ಕೃಷ್ಣಮೂರ್ತಿಯವರ 'ಪ್ರಿಯ ಸಂಪಾದಕರಿಗೆ' ಎಂಬ ಲೇಖನವು ಹೃದಯಸ್ಪರ್ಶಿಯಾಗಿದೆ.

ಉಪನಾಳ —ಎಸ್. ಬಿ. ಸಾಸನೂರ

**ನಿಜವಾದ ಅರ್ಥ**

ತಮ್ಮ ಸಪ್ಟೆಂಬರ್ ಸಂಚಿಕೆಯಲ್ಲಿನ 'ಪದಾರ್ಥ ಚಿಂತಾಮಣಿಯಲ್ಲಿ' ಪಾವೆಂರವರು, ಭಗವದ್ಗೀತೆ ಸ್ತ್ರೀ, ಶೂದ್ರರೊಡನೆ ವೈಶ್ಯರನ್ನೂ 'ಪಾಪಯೋನಿ'ಗಳಲ್ಲಿ ಸೇರಿಸಿತ್ತು (ಗೀತಾ ೯-೩೨) ಎಂದು ಬರೆದು ಗೀತೆಗಲ್ಲದೇ ಐತಿಹಾಸ ಹಾಗೂ ವ್ಯಾಕರಣಕ್ಕೂ ಅಪಚಾರವೆಸಗಿದ್ದಾರೆ. ಮೇಲೆ ಹೇಳಿದ ಶ್ಲೋಕವನ್ನು ಓದಿದರೆ 'ಪಾಪಯೋನಿಗಳಾದ ಸ್ತ್ರೀ, ಶೂದ್ರ, ವೈಶ್ಯರು ಎನ್ನುವ ಅರ್ಥ ಹಾಗೂ ಭಾವನೆ ಯಾವ ರೀತಿಯಿಂದಲೂ ಬರುವುದಿಲ್ಲ. 'ಪಾಪಯೋನಯಃ' ಎನ್ನುವುದು ಪ್ರಥಮಾ ವಿಭಕ್ತಿ ಬಹುವಚನದಲ್ಲಿದೆಯೆ ಹೊರತು ಪಾವೆಂರವರು ಭಾವಿಸಿದಂತೆ ಷಷ್ಠೀ ವಿಭಕ್ತಿಯಲ್ಲಿ ಇಲ್ಲ. ಆದ್ದರಿಂದ ಅದರ ಸರಿಯಾದ ಅರ್ಥ ಹಾಗೂ ಭಾವ 'ಸ್ತ್ರೀಯರು, ಶೂದ್ರರು, ವೈಶ್ಯರು ಹಾಗೂ ಒಂದು ವೇಳೆ ಇನ್ನೂ ಯಾರಾದರೂ ಕನಿಷ್ಠ ವರ್ಗದವರು (ಪಾಪಯೋನಯಃ) ಇದ್ದಲ್ಲಿ' ಎಂದಾಗುತ್ತದೆ. ಇಲ್ಲಿ ಪಾಪಯೋನಿಗಳೆಂದರೆ, ನಾಲ್ಕೂ ವರ್ಗಗಳಲ್ಲಿ ಸಿಗಬಹುದಾದ, ಸದಾ ಪಾಪಕರ್ಮಗಳಲ್ಲಿ ಮುಳುಗಿರುವ, ಪಾಪಕೂಪದಿಂದ ಹೊರಬರಲಾಗದ ವ್ಯಕ್ತಿಗಳಿಗೆ ಅನ್ವಯವಾಗುತ್ತದೆ.

ಹಳ್ಳಿಖೇಡ —ಸಿ. ಎನ್. ಎಸ್. ಆದಿಶೇಷ

ನಾನು 'ಪಾಪಯೋನಯಃ' ಷಷ್ಠಿಯಲ್ಲಿದೆಯೆಂದು ಭ್ರಮಿಸಿಲ್ಲ. ಶ್ಲೋಕ ಹೀಗಿದೆ: "ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇऽಪಿ ಸ್ಯುಃ ಪಾಪಯೋನಯಃ। ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇऽಪಿ ಯಾಂತಿ ಪರಾಂ ಗತಿಂ॥" ಇದಕ್ಕೆ ಪಂಡಿತರಾದ ಮಾಧ್ವರೊಬ್ಬರು ಕೊಟ್ಟ ಅರ್ಥವನ್ನೇ ಉದ್ಧರಿಸುತ್ತೇನೆ. "ಎಲೈ ಅರ್ಜುನ, ಪಾಪಯೋನಿಜರಾದ ಸ್ತ್ರೀಯರೂ ವೈಶ್ಯರೂ ಶೂದ್ರರೂ ಕೂಡ ನನ್ನನ್ನು ಆಶ್ರಯಿಸಿ ಪರಮ ಗತಿಯನ್ನು ಹೊಂದುತ್ತಾರೆ." (ಬನ್ನಂಜೆ ರಾಮಾಚಾರ್ಯರ ಭಗವದ್ಗೀತಾನುವಾದ) ನಮ್ಮ ಪೂರ್ವಜರನ್ನು ಸಮರ್ಥಿಸಲು ಸರಳವಾಗಿರುವುದನ್ನು ತಿರುಪುವುದು ಅನವಶ್ಯಕ.

ಧಾರವಾಡ —ಪಾ.ವೆಂ. ಆಚಾರ್ಯ

**ಸ್ಪಷ್ಟೀಕರಣ**

ಆಗಸ್ಟ್ ೮೬ರ ಸಂಚಿಕೆಯಲ್ಲಿ 'ಪಂದ್ಯ' ಕತೆ

ಪ್ರಕಟಿಸಿ ಪ್ರೋತ್ಸಾಹ ನೀಡಿದ್ದೀರಿ. ಧನ್ಯವಾದಗಳು!

ಸಪ್ಟಂಬರ್ ಮತ್ತು ಅಕ್ಟೋಬರ್ ಸಂಚಿಕೆಗಳಲ್ಲಿ ಪ್ರಕಟವಾದ ಪ್ರತಿಕ್ರಿಯೆಗಳನ್ನು ವೀಕ್ಷಿಸಿದ್ದೇನೆ. ಇದೇ ಕತೆ ಬೇರೆ ಬೇರೆ ಹೆಸರಿಂದ ಬೇರೆ ಬೇರೆ ಲೇಖಕರು ಅನುವಾದಿಸಿರುವುದು 'ಕಸ್ತೂರಿ'ಯಲ್ಲಿ ಪ್ರಕಟವಾಗಿರುವುದು ನನಗೆ ತಿಳಿಯದ ವಿಷಯ. ೧೯೬೫ ರಲ್ಲಿ ನಾನು ಪ್ರೈಮರಿ ಶಾಲೆಯಲ್ಲಿ ಓದುತ್ತಿದ್ದೆ. ಆಗ ಕತೆ ಓದುವಷ್ಟು ಶಕ್ತಿ ನನ್ನಲ್ಲಿ ಬೆಳೆದಿರಲಿಲ್ಲ. ೧೯೭೭ರ ಸಂಚಿಕೆಯುನ್ನೂ ನಾನು ನೋಡಿಲ್ಲ. ಈ ಕತೆಯನ್ನು ನಾನು ಖಂಡಿತವಾಗಿಯೂ ಕನ್ನಡದಲ್ಲಿ ಓದಿಲ್ಲ. ಹೈಸ್ಕೂಲಿನಲ್ಲಿದ್ದಾಗ ಇಂಗ್ಲೀಷ್‌ನಲ್ಲಿ ಓದಿದ ನೆನಪು. ಆ ಕತೆಗೂ ಈ ಪಂದ್ಯಕ್ಕೂ ಯಾವ ಸಂಬಂಧವಿಲ್ಲ. ಹಿಂದೆ ಇದೇ ಕತೆ ಪ್ರಕಟವಾಗಿದ್ದರೆ, ಅದಕ್ಕಿಂತ ವಿಭಿನ್ನವಾಗಿರುವುದರಲ್ಲಿ ಸಂದೇಹವಿಲ್ಲ. ಓದುಗರು ವೀಕ್ಷಿಸಬಹುದು.

ಮಂಡ್ಯ —ಎಚ್. ಎಸ್. ಜಾಫರ್

**ಖಜಾನೆ**

ಅಕ್ಟೋಬರ್ 'ಕಸ್ತೂರಿ'ಯಲ್ಲಿ ಪ್ರಕಟವಾದ ಶ್ರೀ ಖಜಾನೆ ಕೃಷ್ಣಮೂರ್ತಿಯವರ 'ಪ್ರಿಯ ಸಂಪಾದಕರೇ...' ಪತ್ರ ನೇರವಾಗಿ ಮನಸ್ಸನ್ನು ತಟ್ಟಿದೆ. ಅವರ ಸುಸಂಸ್ಕೃತ, ಸರಳ ಹೃದಯಕ್ಕೆ ಎಂಥವರೂ ಮಾರು ಹೋಗಲೇ ಬೇಕು. ಇಂಥ ಪ್ರಭಾವೀ ಲೇಖಕರೂ ನಿರಾಶೆ, ಹತಾಶೆ, ಅಧೈರ್ಯಗಳಿಂದ ಬಳಲಿರುವುದು ನಮ್ಮ ಸಮಾಜದಲ್ಲಿ ಇರುವ ಪರಿಸ್ಥಿತಿಯನ್ನು ತೋರಿಸುತ್ತದೆ. ನಿಜವಾದ ಪ್ರತಿಭೆ ಎಂದಾದರೂ ಹೇಗಾದರೂ ಹೊರ ಬರಲೇಬೇಕು, ಬರುತ್ತದೆ ಎನ್ನುವದಕ್ಕೆ ಶ್ರೀ ಕೃಷ್ಣಮೂರ್ತಿಯವರೇ ಸಾಕ್ಷಿ! ಅವರಿಂದ ಇನ್ನಷ್ಟು ಲೇಖನಗಳು ಹೊರಬಂದು ಬೆಳಕು ಕಾಣಲಿ ಎಂದು ಹಾರೈಸುವೆ.

ಶಿವಮೊಗ್ಗ —ವಿಜಯಾ ಶ್ರೀಧರ

**'ಚಾಚೂ' ಏಕೆ?**

ಶ್ರೀ ಖಜಾನೆ ಕೃಷ್ಣಮೂರ್ತಿಯವರು ಬರೆದ ವಿ. ಸೀ. ಸ್ಮರಣೆಗಳನ್ನು (ಕಸ್ತೂರಿ ಸಪ್ಟೆಂಬರ್ ೮೬) ಓದಿ ಬಹುವಾಗಿ ಸಂತೋಷಿಸಿದ್ದೇನೆ. ಆದರೂ ಬಾಸ್ಮತೀ ಅಕ್ಕಿಯ ಅನ್ನದಲ್ಲಿ ಬಂದ ಒಂದೇ ಹರಳಿನಂತೆ ನನ್ನ ಹಲ್ಲಿಗೆ ಸಿಕ್ಕಿದ ಒಂದು ಅಂಶವನ್ನು ಇಲ್ಲಿ ವಿವರಿಸಬೇಕು. ವಿ.ಸೀ. ಯವರೊಡನೆ ಮಾತಾಡುವಾಗಲೂ ನಾನು ಇದನ್ನು ಮಾಡುತ್ತಿದ್ದೆ.

ಇಲ್ಲಿ ವಿವರಿಸಬೇಕಾದದ್ದು "ಚಾಚೂ ತಪ್ಪದೆ" ಎಂಬ ಪ್ರಯೋಗ. ಅದು ಕಾಗುಣಿತದ ಅನುಕರಣೆಯಾಗಿದ್ದರೆ "ಕಾ ಕು" ಅಥವಾ "ಕ-ಕಾ" ಏಕಾಗಲಿಲ್ಲ? ಅದು ಕಾಗುಣಿತದ ಅನುಕರಣೆಯಲ್ಲ. ಅದರ ನಿಜವಾದ ರೂಪ "ಚ ತು" ಎಂದಿರಬೇಕು. ಸಂಸ್ಕೃತ ರಚನೆಯಲ್ಲಿ ಚ ವೈ ತು ಹಿ ಇತ್ಯಾದಿ ಅಸಂಲಗ್ನ ಏಕಾಕ್ಷರ ಪದಗಳು ಬರುತ್ತವೆ. ಅವುಗಳನ್ನು ನಿಪಾತಗಳೆಂದು ಕರೆಯುತ್ತಾರೆ. ಸಾಮಾನ್ಯ ಬರಹಗಾರರೂ ಅರ್ಥಗಾರರೂ ಅವುಗಳಿರುವದು ವಾಗಲಂಕಾರಕ್ಕೆ ಇಲ್ಲವೆ ಪದ್ಯಗಳಲ್ಲಿ ಪಾದ ಪುರಣಕ್ಕೆ ಎಂದು ಹೇಳುತ್ತಾರೆ. ಅಂದರೆ ಅದು ಮುಖ್ಯಾಂಶಗಳೊಡನೆ ಬರುವ ಅಮುಖ್ಯಾಂಶಗಳು ಎಂಬ ಅರ್ಥಕ್ಕೆ ಉಪಮೆಯಾಗಿದೆ. ಆದ್ದರಿಂದ ಅನುಕರಣ ಅನುಸರಣಗಳ ಮಾತು ಬಂದಾಗ ಮುಖ್ಯಾಂಶಗಳೊಡನೆ ಅಮುಖ್ಯಾಂಶಗಳನ್ನೂ ಅಷ್ಟೇ ತತ್ಪರತೆಯಿಂದ ಉಳಿಸಿಕೊಳ್ಳಲಾಗಿದೆ ಎಂಬರ್ಥದಲ್ಲಿ "ಚ-ತು ಬಿಡದೆ" ಎಂಬ ಸಂಸ್ಕೃತ ಪ್ರಯೋಗ ರೂಢವಾಯಿತು. ಅದೇ ಸಂಸ್ಕೃತ ತಿಳಿಯದವರ ಬಾಯಲ್ಲಿ ಚಾಚೂ ಆಗಿದೆ.

ಬೆಂಗಳೂರು —ಪಿ. ವಿ. ಜೋಶಿ

**ದಂಡಿಯಲ್ಲ ಹರ್ಷ**

'ಕಸ್ತೂರಿ' ಅಕ್ಟೋಬರ್ ಸಂಚಿಕೆಯಲ್ಲಿ ಕಾಯ್ಕಿಣಿಯವರು ಬರೆದ 'ಕಾಳಿದಾಸ ಮತ್ತು ಮಹಾಭಾರತ ಲೇಖನದ' ಕೊನೆಗೆ ಪುಟ ೧೧೪ ರಲ್ಲಿ 'ದಂಡಿಯ ನೈಷಧ ಚರಿತ' ಎಂದಿದೆ. ನೈಷಧವನ್ನು ಬರೆದವ ಶ್ರೀಹರ್ಷ. ಇದು ಪಂಚ ಮಹಾಕಾವ್ಯಗಳಲ್ಲಿ ಕೊನೆಯದು. ದಂಡಿಯು ಬರೆದದ್ದು ದಶಕುಮಾರ ಚರಿತವೆಂಬ ಗದ್ಯ ಕಾವ್ಯವನ್ನು ಕಾಲಿದಾಸನ ಕಾವ್ಯಗಳು-ಕುಮಾರ ಸಂಭವ ರಘುವಂಶ, ಭಾರವಿಯ ಕಿರಾತಾರ್ಜುನೀಯ. ಮಾಘನ ಶಿಶುಪಾಲವಧ, ಶ್ರೀಹರ್ಷನ-ನೈಷಧ ಇವು ಪಂಚ ಮಹಾಕಾವ್ಯಗಳು.

ಸುಳ್ಯ (ದ. ಕ.) —ತುದಿಯಡ್ಕ ವಿಷ್ಣುಯ್ಯ

ಕಸ್ತೂರಿ

ವರ್ಷ : ೩೧ ನವೆಂಬರ್, ೧೯೮೬ ಸಂಚಿಕೆ : ೩

# ಪ್ರೀತೀಗೆ ಬಲಿ

ಶಾಕ್ಯ ವಂಶದ ಅರಸು ಶುದ್ಧೋದನ ಅರಸಿ ಮಾಯಾದೇವಿಯರ ನೆಚ್ಚಿನ ಅಣುಗನಾಗಿದ್ದ ಗೌತಮ ಸ್ವಪ್ರಯತ್ನದಿಂದ ಬುದ್ಧನಾಗಿದ್ದಾನೆ. ಮಡದಿ ಯಶೋಧರೆ, ಪುತ್ರ ರಾಹುಲನ ಬಂಧನದಿಂದ ಆತನೀಗ ಮುಕ್ತ. ಇನ್ನೂ ಪ್ರಾಪಂಚಿಕ ವಿಷಯಗಳಲ್ಲೇ ಮಗ್ನರಾದವರಿಗೆ ಉಪದೇಶಿಸುತ್ತಾ ಸಾಗುತ್ತಿದ್ದಾನೆ ಬುದ್ಧ.

"ಅನ್ಯರನ್ನು ಅವಲಂಬಿಸದಿರು; ನಮಗೆ ನಾವೇ ದಾರಿದೀಪ. ಯಾವ ಪ್ರಾರ್ಥನೆ ಮಂತ್ರಗಳೂ ನಮ್ಮನ್ನು ಮೇಲಕ್ಕೆತ್ತಲಾರವು. ಉತ್ಕೃಷ್ಟ ವಿಚಾರಗಳ ಚಿಂತನೆ ಹಾಗೂ ಯೋಗ್ಯ ನಡತೆಗಳಿಂದಲೇ ಬಾಳು ಸುಗಮ. ನಮ್ಮ ಕಷ್ಟ–ಸುಖಗಳಿಗೆ ನಮ್ಮ ಕೃತಿಗಳೇ ಕಾರಣ. ಪ್ರೀತಿಯೇ ದ್ವೇಷವನ್ನು ಗೆಲ್ಲುವ ಸಾಧನ. ಹಿಂಸೆಯನ್ನು ಯಾರೂ ಸಹಿಸರು. ಎಲ್ಲರೂ ಬದುಕಲಿಚ್ಛಿಸುವವರೇ. ಆದುದರಿಂದ ಕೊಲೆ ಮಾಡದಿರು. ದೈಹಿಕವಾಗಿಯೂ ಮಾನಸಿಕವಾಗಿಯೂ ಪಾಪವನ್ನೆಸಗದಿರು."—ಆತ್ಮೀಯತೆಯಿಂದೊಡಗೂಡಿದ ಧ್ವನಿಯಲ್ಲಿ, ಪ್ರಶಾಂತವದನನಾಗಿ, ಸುಲಲಿತವಾದ ಪಾಲಿ ಭಾಷೆಯಲ್ಲಿ, ಬದುಕಿನ ರಹಸ್ಯಗಳನ್ನು ಅರಗಿಸಿ ನೀರ್ಗುಡಿದವನಂತೆ ಬುದ್ಧ ವಿಶದಪಡಿಸುತ್ತಿದ್ದ. ಪಕ್ವವಾದ ಬುದ್ಧಿ–ದೇಹಗಳಿಂದೊಡಗೂಡಿದ್ದ ಆಕರ್ಷಕ ಮುಖಮುದ್ರೆಯ ಬುದ್ಧನ ಮಾತುಗಳನ್ನು ನೇಪಾಳದ ಕುಶೀ ನಗರದ ಜನರು ಮೈಯೆಲ್ಲಾ ಕಿವಿಯಾಗಿಸಿ ಆಲಿಸುತ್ತಿದ್ದರು.

ನೆರೆದಿದ್ದ ಬುದ್ಧನ ಅನುಯಾಯಿಗಳ ಗುಂಪಿ

ನಲ್ಲೇ ದೂರದಲ್ಲಿ ಬಡ ವ್ಯಕ್ತಿಯೊಬ್ಬ ಚಿಂತಿತನಾಗಿ ಕುಳಿತಿದ್ದ. ಮೈಯೆಲ್ಲಾ ಸುಕ್ಕುಗಟ್ಟಿದ್ದ ಆ ವೃದ್ಧನ ಕೊಳಕಾದ ಬಟ್ಟೆಗಳು ಆತ ಬಡವನೆಂಬುದನ್ನು ಸಾರುತ್ತಿದ್ದವು. ಜನ ನೋಡುತ್ತಿದ್ದಂತೆಯೇ ಬುದ್ಧ ಆತನ ಬಳಿಸಾರಿ ಕೇಳಿದ: "ಬಂಧು, ಯಾಕೆ ಚಿಂತೆ? ಏನು ಆಲೋಚಿಸುತ್ತಿರುವೆ? ನಾನು ನಿನ್ನ ಸಮಸ್ಯೆಯನ್ನು ಬಗೆಹರಿಸಬಲ್ಲೆನೆ?"

ಚಿಕ್ಕ ಪೊಟ್ಟಣವೊಂದನ್ನು ತನ್ನ ಉಡಿಯಿಂದ ತೆಗೆದು ನಡುಗುತ್ತಾ ಆ ಮುದುಕ, "ಸ್ವಾಮಿ, ನೀವು ಬರುವ ಸುದ್ದಿಯನ್ನು ಕೇಳಿ ಕೆಲ ದಿನಗಳ ಹಿಂದೆಯೇ ಈ ರೊಟ್ಟಿಯನ್ನು ಸಂಗ್ರಹಿಸಿದ್ದೆ. ಈಗ ತಂಗಳಾದ ಇದನ್ನು ಮಹಾತ್ಮನಾದ ನಿಮಗೆ ಹೇಗೆ ತಾನೆ ಕೊಡಬಲ್ಲೆ? ಎನ್ನುವುದೆ ನನ್ನ ಚಿಂತೆ," ಅಂದ.

ಬುದ್ಧನಿಗೆ ಕೊರಳ ಸೆರೆ ಬಿಗಿದು ಬಂತು. ಮುಗ್ಧ ಮುದುಕನ ನಿಷ್ಕಲ್ಮಷ ಪ್ರೀತಿಯ ಮುಂದೆ ಹಳಸಿದ ರೊಟ್ಟಿ ಕಲ್ಮಶವೆನಿಸಲಿಲ್ಲ. ಗುರುವಿನ ವೃದ್ಧಾಪ್ಯ ಮತ್ತು ಆರೋಗ್ಯದ ಕಡೆ ದೃಷ್ಟಿ ಹರಿಸಿದ್ದ ಶಿಷ್ಯರು ತಡೆದರೂ ಕೇಳದೆ ತಂಗಳಾದ ರೊಟ್ಟಿಯನ್ನು ತಿಂದು ನೀರ್ಗುಡಿದ. ಎಂಬತ್ತರ ವಾರ್ಧಕ್ಯದಲ್ಲಿದ್ದ ಬುದ್ಧನ ಭೌತಿಕ ದೇಹ ಅದನ್ನು ಸಹಿಸಲಿಲ್ಲ. ಆಮಶಂಕೆ ರೋಗಕ್ಕೆ ಒಳಗಾಗಿ ಆ ಪಾಂಚಭೌತಿಕ ಶರೀರಕ್ಕೆ ಕೊನೆಯಾಯಿತು. ಪ್ರೀತಿಗೆ ಮಹಾತ್ಮನ ಜೀವ ಬಲಿಯಾಯಿತು.

**ಪದ್ಯಾಣ ಪರಮೇಶ್ವರ ಭಟ್**

# ಬಾಳುವೆ

**ಬಾ**ಳುವೆ ನಮ್ಮದಾದರೂ, ಬಾಳುವ ಗತಿಯನ್ನು ನಿರ್ದೇಶಿಸುವುದು ನಮ್ಮ ಕೈಯೊಳಗಿನ ಕೆಲಸವಲ್ಲ. ನಮ್ಮ ಯೋಗ್ಯತೆಗೆ ಅನುಸಾರವಾಗಿಯೇ ನಮ್ಮ ರೂಪಿಸಿದಾತನ ಕಾರ್ಯವೇ ಸರಿ ಎಂದು ಅನ್ನಿಸುತ್ತದೆ. ನಮ್ಮ ಜೀವನದಲ್ಲಿ ಒಮ್ಮೊಮ್ಮೆ ಬಂದದ್ದನ್ನೆಲ್ಲಾ ಅನುಭವಿಸಲೇಬೇಕು, ಅಸಹನೀಯವಾದರೂ–ಸಹಿಸಲೇಬೇಕು. ತಾಳ್ಮೆಯಿಂದ, ಶಾಂತಿಯಿಂದ ನಡೆಸಿಕೊಂಡರೆ ನಮಗೇ ಒಳ್ಳೆಯದು.

ಹೌದು! ಬಂದದ್ದನ್ನೆಲ್ಲಾ ಅನುಭವವನ್ನಾಗಿ ಅಳವಡಿಸಿಕೊಂಡು ಬಾಳಿನ ಒಂದು ನಿರ್ದಿಷ್ಟ ಗುರಿಯನ್ನು ರೂಪಿಸಿಕೊಂಡು ಅದನ್ನು ತಲಪುವಂತೆ ಸಾಗಬೇಕು. ಜೀವನದಲ್ಲಿ ನಮ್ಮನ್ನಗಲಿ ಬೇಗ ಹೋಗುವವರು ಕೆಲವರು— ಕೆಲವರು ನಿಧಾನವಾಗಿ ತೆರಳುವರು— ಒಟ್ಟಿನಲ್ಲಿ ಎಲ್ಲರೂ ಹೋಗಲೇಬೇಕು— ಎಲ್ಲಿ ಅವಿಚ್ಛಿನ್ನ ವಿಶ್ರಾಂತಿ ದೊರಕುವುದೋ ಅಲ್ಲಿಗೆ!

ಆತುರ, ಬೇಸರ, ಗೊಣಗಾಟ, ಕಂಬನಿ— ಯಾವುದೂ ನಮ್ಮ ಸಹಾಯಕ್ಕೆ ಬರುವುದಿಲ್ಲ. ಅವುಗಳಿಂದ ಜೀವನದ ಗತಿಯನ್ನು ಬದಲಾಯಿಸಲು ಅಸಾಧ್ಯ. ಬಾಳುವೆಯ ದಾರಿಯನ್ನು ಇನ್ನೂ ದೀರ್ಘಗೊಳಿಸಿದಂತೆ ಅನ್ನಿಸುತ್ತದೆ. ಅದೇ ಶಾಂತಿ, ನಿರ್ಲಿಪ್ತತೆ, ಕೃತಜ್ಞತೆ ಮತ್ತು ಪ್ರೇಮ ನಮ್ಮನ್ನು ಯೋಗ್ಯರನ್ನಾಗಿಸಿ ಬಾಳಿಗೊಂದು ಭರವಸೆಯನ್ನು ಕೊಡುತ್ತದೆ.

ನಾವು ಮಾಡಲೇ ಬೇಕಾದ ಕಾರ್ಯ ನಮ್ಮ ನಮ್ಮ ಕರ್ತವ್ಯವನ್ನು ಹಗುರಗೊಳಿಸುತ್ತದೆ ಮತ್ತು ಬಾಳಿನಲ್ಲಿ ಕಷ್ಟಗಳು ಬಂದಷ್ಟೂ ಆ ಗುಣಗಳ ಜ್ಞಾನಜ್ಯೋತಿಯನ್ನು ಬೆಳಗುವಂತೆ ಮಾಡುತ್ತದೆ.

ಇರುಳಿನಲ್ಲಿ ಕತ್ತಲೆ ಕವಿದಷ್ಟೂ ನಕ್ಷತ್ರದ ಕಾಂತಿ ಹೆಚ್ಚುತ್ತದೆ.

(ಮ್ಯಾಕ್ಸ್ ಮುಲ್ಲರ್ ಅವರ Life ನಿಂದ)

ಅನುವಾದ : **ಕಲಾ**



## ಜನರ 'ಅದೃಷ್ಟದ ಮಟ್ಟ' ಬೆಳೆಯುತ್ತಿದೆಯೆ ?

# ಭಾರತದ 'ಅದೃಷ್ಟಲಕ್ಷ್ಮಿ'

ವಿಠ್ಠಲ ಕುಲಕರಣಿ

ಭಾರತದಲ್ಲಿ ಅದೃಷ್ಟಲಕ್ಷ್ಮಿ ಅನೇಕ ರೂಪ ತಾಳಿ ಜನಮನದಲ್ಲಿ ಆಸೆ ಮೂಡಿಸುತ್ತಿದ್ದಾಳೆ. ಹರಿಯಾಣಾದ 'ಮಹಾಲಕ್ಷ್ಮಿ', ಭೂತಾನ ಲಕ್ಷ್ಮಿ, ಮಣಿಪುರಲಕ್ಷ್ಮಿ, ಮಿಜೋಲಕ್ಷ್ಮಿ, ಆಂಧ್ರದ ಭಾಗ್ಯಲಕ್ಷ್ಮಿ, ಉತ್ತರ ಪ್ರದೇಶದ 'ಧನಲಕ್ಷ್ಮಿ', ಪಂಜಾಬದ ಪೂಜಾಲಕ್ಷ್ಮಿ, ಪಶ್ಚಿಮ ಬಂಗ ಸರಕಾರದ 'ಬಂಗಲಕ್ಷ್ಮಿ', ಗೋವಾಲಕ್ಷ್ಮಿ, ಮೊದಲಾದವುಗಳು ಪ್ರತೀ ವಾರ ಜನರಲ್ಲಿ ಹೊಂಗನಸುಗಳನ್ನು ಮೂಡಿಸುತ್ತಿರುವ ರೂಪಗಳು. ಲಕ್ಷ್ಮಿಯ ಹೆಸರಿನಲ್ಲಿ ಅಲ್ಲದೆ ಕಲ್ಪತರು ಕಾಮಧೇನು, ಗಂಗಾ-ಕಾವೇರಿ, ಶ್ರೀಗಣೇಶ, ಜೈದುರ್ಗ, ಎವರೆಸ್ಟ್, ಸಾಂಚಿಸೋಮವಾರದ ಲಾಟರಿ, ಆಕಾಂಕ್ಷಾ ಮೊದಲಾದವುಗಳೂ ಅದೇ ಅದೃಷ್ಟಲಕ್ಷ್ಮಿಯ ಇತರ ರೂಪಗಳು! ಈ ಲಕ್ಷ್ಮಿಯ ಅನುಗ್ರಹ ಪಡೆಯುವವರು ದಿನಾಲು ಸಾವಿರಾರು ಜನ!! ನಿತ್ಯ 'ಮಿನಿ'ಲಾಟರಿಗಳು 'ಮಿನಿ'ಕನಸುಗಳನ್ನು ಮೂಡಿಸುತ್ತಿವೆ. 'ಚಿರಾಪುಂಜಿ' ಮಳೆಗೆ ಪ್ರಸಿದ್ಧಿ ಪಡೆದ ಹೆಸರು ಎನಿಸಿತ್ತು. ಈಗ ಅದು ಹಣದ ಮಳೆಗರೆಯುವ ಲಾಟರಿಯ ಹೆಸರಾಗಿದೆ: ಮೇಘಾಲಯ ಸರಕಾರದ ಈ ಲಾಟರಿ ಭಾರತದಲ್ಲೆಲ್ಲ ಹೆಸರು ಮಾಡಿದೆ.

ಭಾರತದಲ್ಲಿ ಇತ್ತೀಚೆಗೆ ದಿನಪತ್ರಿಕೆಗಳನ್ನು ಓದುವವರ ಸಂಖ್ಯೆ ಗಣನೀಯ ಪ್ರಮಾಣದಲ್ಲಿ ಬೆಳೆದಿದೆಯೆಂಬುದನ್ನು ತಿಳಿದು ನಮ್ಮೆಲ್ಲರ ಮಟ್ಟ ಬೆಳೆದಿದೆಯೆಂದುಕೊಂಡಿದ್ದೆ. ಆದರೆ ಈ ಓದುಗರಲ್ಲಿ ೫೦% ಕ್ಕೂ ಹೆಚ್ಚು 'ಅದೃಷ್ಟಲಕ್ಷ್ಮೀ' ದಾಸರು ಎಂದು ಅನೇಕ ಬಲ್ಲ ಮೂಲಗಳು ಹೇಳುತ್ತಿವೆ. ದಿನವೂ ಬೆಳಿಗ್ಗೆ ಆಸ್ಥೆಯಿಂದ ಓದುವ ಜನರೆಷ್ಟೋ ಮೊದಲು ಈ ಲಾಟರಿ ಟಿಕೆಟ್ಟಿನ ಪರಿಣಾಮವನ್ನು ನೋಡುತ್ತಾರಂತೆ. ನಮ್ಮಲ್ಲಿ 'ಅದೃಷ್ಟ'ದ ಮಟ್ಟವೇ ಬೆಳೆದಿದೆ;—ಸಾರ್ವತ್ರಿಕವಾಗಿದೆ. ಲಾಟರಿಗಳೇ ನಮ್ಮ ಕಾಮಧೇನು ಕಲ್ಪತರುಗಳಾಗಿವೆ.

ಲಾಟರಿ ಟಿಕೆಟ್ಟುಗಳು ಭಾರತದಲ್ಲಿ ಭಾವೈಕ್ಯವನ್ನು ಸಾಧಿಸಿವೆಯನ್ನಬೇಕು. ದೇಶದ ಮೂಲೆ ಮೂಲೆಗಳಿಂದ ಲಾಟರಿ ಟಿಕೆಟ್ಟುಗಳು ರಾಷ್ಟ್ರದಾದ್ಯಂತ ಮಾರಲ್ಪಡುತ್ತಿವೆ. ಸಿಕ್ಕಿಂ, ಮೇಘಾಲಯ ಮಿಜೋರಾಂ, ಮೊದಲಾದ ರಾಜ್ಯಗಳ ಲಾಟರಿ ಟಿಕೆಟ್ಟುಗಳು ದಕ್ಷಿಣದಲ್ಲಿ ಮಾರಾಟವಾಗುತ್ತಿಲ್ಲವೇ? ಹಾಗೆ ನೋಡಿದರೆ ತಮಿಳು ನಾಡಿನಲ್ಲಿ ಲಾಟರಿ ಟಿಕೆಟ್ಟುಗಳಿಗೆ ಅತಿಯಾದ ಬೇಡಿಕೆ. ಇಡೀ ದೇಶದ ಸುಮಾರು ೫೦%ರಷ್ಟು ಟಿಕೆಟ್ಟುಗಳ ತಮಿಳು ನಾಡಿನಲ್ಲಿಯೇ ಖರ್ಚಾಗುತ್ತವಂತೆ. ಸುಮಾರು ೫೦೦೦೦ ಜನರು ಟಿಕೆಟ್ಟು ಮಾರುವ ಏಜನ್ಸಿಗಳಲ್ಲಿದ್ದಾರಂತೆ. ಟಿಕೆಟ್ಟುಗಳು ಪ್ರಮುಖ ಬೀದಿಗಳಲ್ಲಿ, ಚೌಕುಗಳಲ್ಲಿ, ಬಸ್ಸು ನಿಲ್ದಾಣದಲ್ಲಿ, ಸಿನಿಮಾ ಮಂದಿರಗಳೆದುರು, ರೈಲುನಿಲ್ದಾಣಗಳಲ್ಲಿ ಇಂತಹ ಇತರ ಸಾರ್ವಜನಿಕ ಸ್ಥಾನಗಳಲ್ಲಿ ಮಾರಲ್ಪಡುತ್ತಿವೆ. ಮಾರುವವರಲ್ಲಿ ಹುಡುಗರೂ ಇದ್ದಾರೆ. ತರುಣರೂ ಇದ್ದಾರೆ, ತರುಣಿಯರೂ ಇದ್ದಾರೆ; ನಿವೃತ್ತರೂ ಇದ್ದಾರೆ. ಇಂತಹರು ಪ್ರತಿದಿನ

ಲಾಟರಿ ಟಿಕೆಟ್ ಮಾರುವ ಅಂಗಡಿಗಳೇ ಇಂದು ಸುಸಜ್ಜಿತವಾದವುಗಳು— ಹೆಚ್ಚು ದಟ್ಟಣೆಯ ಸ್ಥಳಗಳು ಎಂಬುದನ್ನು ಯಾವ ನಗರದಲ್ಲಿಯೂ ಕಾಣಬಹುದು.

ಬೇರೆ ಬೇರೆ ನಗರಗಳಲ್ಲಿ ಲಾಟರಿ 'ಡ್ರಾ'ದ್ದೇ ಒಂದು ಸಮಾರಂಭ. ಅದೃಷ್ಟ ಸಂಖ್ಯೆಗಳನ್ನು ಎತ್ತಲು ನಟಶ್ರೇಷ್ಠರು, ನ್ಯಾಯಾಧೀಶರು, ಮಂತ್ರಿಗಳು ಮೊದಲಾದ ಪ್ರತಿಷ್ಠಿತ ವ್ಯಕ್ತಿಗಳ ಸಮ್ಮುಖದಲ್ಲಿ ಇಂಥ 'ಡ್ರಾ'ಗಳು ನಡೆಯುತ್ತವೆ. ಅವುಗಳ ಛಾಯಾಚಿತ್ರಗಳು ಪತ್ರಿಕೆಗಳಲ್ಲಿ ಪ್ರಕಟಗೊಳ್ಳುತ್ತವೆ. ರಜತಪರದೆಯ ಮೇಲೆ ದೂರದರ್ಶನದಲ್ಲಿ ಪ್ರಚಾರ ಪಡೆಯುತ್ತವೆ. ಲಾಟರಿಯ ಪ್ರಾಮಾಣಿಕತೆಯನ್ನು ಸಿದ್ಧಪಡಿಸುವ ಅನೇಕ ಕಾರ್ಯಕ್ರಮಗಳು ನಡೆಯುತ್ತವೆ. ಸಂಖ್ಯೆಗಳ ಅಚ್ಚು ಹಾಕುವಿಕೆಯಿಂದ ಹಿಡಿದು ಮಾರಾಟ–ಆಯ್ಕೆ ಮತ್ತು ಹಣದ ವಿತರಣೆಯ ವರೆಗೂ ದೋಷರಹಿತ ವ್ಯವಸ್ಥೆಯನ್ನು ಕಾಯ್ದುಕೊಳ್ಳಲಾಗುತ್ತಿದೆ. ಸರಕಾರದ ನಿಯಮಾನುಸಾರವಾಗಿ ಆಗುತ್ತಿರುವ ಕಾರ್ಯಕಲಾಪಗಳಲ್ಲಿ ರಾಜ್ಯ ಲಾಟರಿ ವ್ಯವಸ್ಥೆಗಳೇ ಮೊದಲ ಸ್ಥಾನ ಪಡೆಯುತ್ತವೆಂದು ಖಚಿತವಾಗಿ ಹೇಳಬಹುದು. ಕಾಂಪ್ಯೂಟರ್ ಬಳಕೆಯೂ ಇಂಥ ಕಾರ್ಯಗಳಲ್ಲಿ ಪ್ರಥಮವಾಗಿ ಕಾಣಿಸಿಕೊಳ್ಳುತ್ತದೆ. ಕರ್ನಾಟಕ ರಾಜ್ಯ ವಿಜೇತರಿಗೆ ಅಭಿವಂದನೆಗಳನ್ನು ಸಲ್ಲಿಸುವ ಪರಿಪಾಠವನ್ನಿರಿಸಿಕೊಂಡಿದೆ.

ಈ ಅದೃಷ್ಟದ ಆಕರ್ಷಣೆ ಅನೇಕ ರಂಗಗಳಲ್ಲಿಯೂ ಪ್ರವೇಶಿಸಿದೆ. ಸ್ಟೀಲ್ ಪಾತ್ರೆ ಮಾರುವವರೂ ಒಂದು ಯೋಜನೆಯ ಮೂಲಕ ಗ್ರಾಹಕರನ್ನು ಆಕರ್ಷಿಸುತ್ತಾರೆ. ಕೆಲ ಪತ್ರಿಕೆಗಳು 'ಲಕ್ಕೀ ನಂಬರ್' ಕೊಡುತ್ತವೆ. ಬೆಂಗಳೂರು ನಗರ ಸಾರಿಗೆ ಸಂಸ್ಥೆಯವರೂ ಲಾಟರಿಯ ಆಕರ್ಷಣೆಯನ್ನು ಬಸ್ಸು ಟಿಕೆಟ್ಟುಗಳಿಗೆ ಒದಗಿಸಿದ್ದಾರೆ. ಒಂದು ಆಸ್ಪತ್ರೆ ನಿರ್ಮಿಸಬೇಕೆನ್ನುವವರೂ 'ರ್‍ಯಾಫಲ್'ನ ಸಹಾಯ ಪಡೆಯುತ್ತಾರೆ. ಏಶಿಯದಲ್ಲಿಯೇ ಅತಿ ದೊಡ್ಡದೆಂದು ಪ್ರಸಿದ್ಧಿ ಪಡೆದ ಕಟಕದಲ್ಲಿಯ ಸ್ಟೇಡಿಯಂ ನಿರ್ಮಾಣಗೊಂಡದ್ದು ಇಂಥ ರ್‍ಯಾಫಲ್ ಸಹಾಯದಿಂದ. 'ನೇತ್ರ ಕಲ್ಯಾಣ' ಸುಪರ್ ಬಂಪರ್ ಲಾಟರಿಯನ್ನು ಸಂತ ಪರಮಾನಂದ ಅಂಧತ್ವ ನಿವಾರಣೆ ಸಂಸ್ಥೆಯೊಂದು ನಡೆಸಿತು. ೭.೪೦ ಕೋಟಿ ರೂಪಾಯಿಗಳನ್ನು ಬಹುಮಾನದಲ್ಲಿ ಕೊಡಲಾಯಿತಂತೆ. ಇಂಥ ಅನೇಕ ಸಂಸ್ಥೆಗಳು ರ್‍ಯಾಫಲ್‌ನಿಂದ ಹಣ ಸಂಗ್ರಹಿಸಿವೆ. ಬಹುಮಾನದ ಹಣ ಹೆಚ್ಚಿದಂತೆ ಟಿಕೆಟ್ಟೊಂದರ ದರವೂ ಹೆಚ್ಚುತ್ತದೆ. ಕೆಲ ದಿನಗಳ ಹಿಂದೆ ಆಂಧ್ರಲಕ್ಷ್ಮಿಯ ಲಾಟರಿ ಟಿಕೆಟ್ಟೊಂದಕ್ಕೆ ೫೦೦ ರೂಪಾಯಿ ಬೆಲೆಯಿರಿಸಲಾಗಿತ್ತು. ಬಹುಮಾನದ ಹಣ ಹೆಚ್ಚಾದಂತೆ ಜನರಲ್ಲಿ ಆಕರ್ಷಣೆಯೂ ಹೆಚ್ಚುತ್ತದೆ. ಭಾರತ ಸರಕಾರದ ಅಂಚೆ ಇಲಾಖೆಯ ಉಳಿತಾಯ ಖಾತೆಗಳಿಗೂ 'ಅದೃಷ್ಟ'ದ ಆಕರ್ಷಣೆ ಇದೆ. ರಾಜ್ಯ ಸರಕಾರಗಳೂ ವಿಶೇಷ ಸಂದರ್ಭಗಳಲ್ಲಿ ಬಹುಮಾನದ ಮೊತ್ತ ಹೆಚ್ಚಿಸಿ ವಿಶೇಷ ಲಾಟರಿಗಳನ್ನು ತರುವುದುಂಟು. 'ಬಂಪರ್ ಡ್ರಾ' ಸುಪರ್ ಡ್ರಾ ಎಂದಾಗಿ ಆಕರ್ಷಿಸುವ ಇಂಥ ವಿಶೇಷ ಲಾಟರಿಗಳಿಗೆ ವಿಶೇಷ ಟಿಕೆಟ್ ದರಗಳೂ ಇರುತ್ತವೆ.

ಜನಸಾಮಾನ್ಯದಲ್ಲಿ ದಿಢೀರ್ ದುಡ್ಡಿನ ಆಸೆಯನ್ನು ಅನೇಕ ರೂಪಗಳಲ್ಲಿ ಕಾಣುತ್ತೇವೆ. 'ಮಟಕಾ,' ನ್ಯೂಯಾರ್ಕ್ ಹತ್ತಿ ಧಾರಣೆ 'ಬಿಸಿ'ಗಳೂ, ಮಾನವನ ಇಂಥ ಆಶಾದೌರ್ಬಲ್ಯಗಳ ಲಾಭ ಪಡೆದೇ ಬೆಳೆದವು. ಆದರೆ ಈ ವ್ಯಾಪಾರಗಳಲ್ಲೆಲ್ಲ ಅದೊಂದು ಬಗೆಯ ಪ್ರಾಮಾಣಿಕತೆ ಹಬ್ಬಿಕೊಂಡದ್ದು ಆಶ್ಚರ್ಯದ ಮಾತು. ಇಂದು ಲಾಟರಿಗಳು ಆ ಆಸೆಯ ಬಲದ ಮೇಲೆಯೇ ಬೆಳೆಯುತ್ತಿವೆ. ಅವುಗಳೂ ಸುಸಂಘಟಿತವಾಗಿ ಪ್ರಾಮಾಣಿಕವಾಗಿ ನಡೆಯುವ ಸಂಸ್ಥೆಗಳನ್ನು ಬೆಳೆಸಿವೆ. ಅಲ್ಲಲ್ಲಿ ಕೆಲ ಅವ್ಯಾಪಾರಗಳೂ ಇರಬಹುದು. ಇದರೆ ಒಟ್ಟಿನಲ್ಲಿ ಇಷ್ಟು ದಕ್ಷತನದಿಂದ ಇನ್ನಾವ ಕೆಲಸವೂ ಭಾರತದಲ್ಲಿ ನಡೆಯುತ್ತಿಲ್ಲವೇನೋ! ಜಾತಿಭೇದವಿಲ್ಲ; ಭಾಷೆ

ಗಳ ಭೇದವಿಲ್ಲ. ಆದರೂ ಅದೃಷ್ಟಲಕ್ಷ್ಮಿ ಒಲಿಯುವುದು ಹೆಚ್ಚಾಗಿ ದುಡ್ಡಿದ್ದವರನ್ನೇ ಎಂದು ಕಾಣುತ್ತದೆ...ತಗ್ಗು ಇದ್ದಲ್ಲೇ ನೀರು ಹೆಚ್ಚೆಚ್ಚು ಸೇರಿಕೊಳ್ಳುವಂತೆ!

ಸುಮಾರು ಒಂದು ಕೋಟಿ ಜನರು ಪ್ರತಿ ವರ್ಷ ಲಾಟರಿ ಟಿಕೆಟ್‌ನಲ್ಲಿ ಹಣ ವೆಚ್ಚ ಮಾಡುತ್ತಿದ್ದಾರೆ. ಪ್ರತಿ ವಾರವೂ ಸುಮಾರು ೫೦-೬೦ ಲಕ್ಷಾಧೀಶರು ನಿರ್ಮಾಣವಾಗುತ್ತಿದ್ದಾರೆ. ಲಾಟರಿಯಿಂದ [illegible] ಜನ ತಮ್ಮ ಉಪ ಜೀವನ ಸಾಗಿಸುತ್ತಿದ್ದಾರೆ. ಅದನ್ನು [illegible] ವೃತ್ತಿಯನ್ನಾಗಿಸಿಕೊಂಡಿದ್ದಾರೆ. ಭಾರತದ ಅದೃಷ್ಟದೇವಿ ಈ [illegible] ಸುಧಾರಿಸುತ್ತಿದೆಯೇ? ಭಾರತದ ಅಭ್ಯುದಯವಾಗುತ್ತಿದೆಯೇ? ಭಾರತ ಗಾಂಧೀಜಿಯವರ ಸಮಾಜವಾದದ ಆದರ್ಶ ಹೇಳುತ್ತದೆ. ಅದೃಷ್ಟಲಕ್ಷ್ಮಿ ಭಾರತದಲ್ಲಿ ಹೊಸ ಉದ್ಯೋಗ ಕಲ್ಪಿಸಿ ಲಕ್ಷೋಪ ಲಕ್ಷ ಜನರಿಗೆ ಉಪಜೀವನ ಒದಗಿಸಿದ್ದಾಳೆನ್ನೋಣವೇ? ನಮ್ಮ ಜೀವನ ಮಟ್ಟವನ್ನು ಸುಧಾರಿಸುತ್ತಿದ್ದಾಳೆನ್ನೋಣವೇ? ಭಾರತ ಅಭಿವೃದ್ಧಿ ಹೊಂದುತ್ತಿದೆಯೆಂದು ದೃಢವಾಗಿ ಹೇಳಬಹುದೆ? ನಮ್ಮಲ್ಲಿ ಸ್ಥಿರವಾಗಿ ನೆಲೆಸುವಂತೆ ಬಿಟ್ಟು ಹೋದ ಕ್ರಮಗಳಿಗೆ ನಾವು ಬ್ರಿಟಿಶ್‌ರಿಗೆ ಋಣಿಗಳಾಗಿರಬೇಕು. "ಇದು ಜೂಜಾಟವಲ್ಲ, ಪ್ರಗತಿಯಲ್ಲಿ ಪಾಲ್ಗೊಳ್ಳುವಿಕೆ." ಎಂದು ನಮ್ಮ ಸರಕಾರಗಳು ಹೇಳುತ್ತವೆ. ಪ್ರತಿ ಲಾಟರಿಯ ಆದಾಯವೂ ಒಂದು ನಿರ್ದಿಷ್ಟ ಕಾರ್ಯಕ್ಕಾಗಿ ಬಳಸಲ್ಪಡುತ್ತಿದೆಯೇ?

ಆದರೆ ಸುಲಭವಾಗಿ ದೊರಕುವ ಹಣ ಇನ್ನೂ ಸುಲಭವಾಗಿ ಗೊತ್ತುಗುರಿಯಿಲ್ಲದೆ ವೆಚ್ಚವಾಗುವ ಸಂಭವವೇ ಹೆಚ್ಚು. ಅದೃಷ್ಟಲಕ್ಷ್ಮಿಯ ಕೃಪೆ ಪಡೆದವರಿಗೂ ಅದನ್ನು ನಡೆಸುವವರಿಗೂ ಈ ಮಾತು ಅನ್ವಯಿಸುತ್ತದೆ. ಭಾರತದ ಅದೃಷ್ಟ ಲಕ್ಷ್ಮಿ ಸೌಭಾಗ್ಯಲಕ್ಷ್ಮಿಯಾಗಬೇಕಾದರೆ ನಾವು ಹಣದ ಬೆಲೆಯನ್ನು ಅರಿತುಕೊಳ್ಳಬೇಕು. ಹಣ ಗಳಿಸುವ ಕಷ್ಟಗೊತ್ತಿಲ್ಲದವನು ಸರಿಯಾಗಿ ವೆಚ್ಚ ಮಾಡುವುದನ್ನೂ ತಿಳಿಯಲಾರನಂತೆ! ದೇಶದ ಸಂಪತ್ತು, ಅದರ ಅಭಿವೃದ್ಧಿ ಲಾಟರಿಯ ರೀತಿಯನ್ನು ಲಘುವಾಗಿ ಕಾಣಬೇಕಾದದ್ದಲ್ಲ. [illegible] ಯಲ್ಲಿ ಮಾಡಿ [illegible] ದ್ಯೋಗಗಳಲ್ಲಿ ದುರ್ಬಲ ಆಸೆಗಳಲ್ಲಿ ಅಂಧ ರಚನಾಶಕ್ತಿಯು ದೃಷ್ಟರೂಪ ಸ್ಪಷ್ಟವಾಗಿದೆಯೇ? ಲಾಟರಿಗಳು ಹಿಂದೆ 'ಪೋ'. 'ಗೋ' ಪಡೆದು 'ಪೋಲಾಟರೀ,' ಗೋಲಾಟರಿ ಎಂಬಂತಾಗಬಾರದು. ದುಡ್ಡಿನ ವ್ಯವಹಾರ ಎಂದೂ ಪೋಲಾಟವಾಗಬಾರದು. ಮತ್ತು ಗೋಲಾಟ(ಸುತ್ತು ಆಟ)ವೂ ಆಗಬಾರದು.

ಅನೇಕ ಜನರಿಂದ ಸಂಗ್ರಹವಾಗುತ್ತಿರುವ ಧನವನ್ನು ಕೆಲವೇ ಜನರಿಗೆ ವಿತರಣೆ ಮಾಡುತ್ತಿರುವ ಲಾಟರಿ ವ್ಯವಸ್ಥೆಗಳು ಪ್ರಜಾಪ್ರಭುತ್ವವನ್ನೂ ಎತ್ತಿ ಹಿಡಿಯುತ್ತವೆ ಎನ್ನುತ್ತಾರೆ ಒಂದು ಲಾಟರಿ ಸಂಸ್ಥೆಯವರು. ಜನರಿಂದ ಜನರಿಗಾಗಿ ಜನರ ಸರಕಾರಗಳು ನಡೆಸುವ ಈ ವ್ಯವಸ್ಥೆ ನಮ್ಮ ಪ್ರಜಾತಂತ್ರದ ಪ್ರೀತಿಯನ್ನೇ ತೋರಿಸುತ್ತದೆಂದು ಹೇಳಬಹುದೇ? ಪ್ರಜಾಪ್ರಭುತ್ವವೂ ಜನರಿಂದ ಜನರಿಗಾಗಿ ನಡೆಸುವ ಸರಕಾರವಲ್ಲವೇ? ಈ ಸರಕಾರದ ಪದ್ಧತಿಯಲ್ಲಿಯೂ ಅನೇಕ ಜನರಿಂದ ಚುನಾಯಿತರಾಗಿ ಕೆಲವೇ ಜನ ಮಂತ್ರಿಗಳು ಲಾಭ ಪಡೆಯುತ್ತಿದ್ದಾರೆನ್ನಬಹುದೇ? ಭಾರತದ ಅದೃಷ್ಟಲಕ್ಷ್ಮೀ ಕೆಲವೇ ಜನರಿಗೆ ಒಲಿದಿದ್ದಾಳೇನೋ! ❁



ದೈವ [illegible] ಇಲ್ಲವೆಂದು ಬಹುಜನಕ್ಕೆ ಗೊತ್ತು. ಆದರೆ ದೈವವನ್ನು [illegible]ವವರನ್ನು [illegible]ವುದು ಮಾತ್ರ ತೀರ ಕಷ್ಟ.

—ರಾವೊಲ ಡಿ ಸೇಲ್ಸ್

ಮನಶ್ಶಾಂತಿ! ಎಲ್ಲಿದೆ? ಯಾರಿಗಿದೆ? ಈಗಿನ ದಿನಗಳಲ್ಲಿ ಅದೊಂದು ಮರೀಚಿಕೆ. ದಿನವಿಡೀ ಮನಸ್ಸು ಶಾಂತ ಹಾಗೂ ಉಲ್ಲಸಿತವಾಗಿ ಇರಬೇಕು; ಯಾವಾಗಾದರೊಮ್ಮೆ ತುಸು ಕಿರಿಕಿರಿಯಾದರೆ ತಪ್ಪೇನಿಲ್ಲ' ಎಂಬುದಾಗಿ ಪ್ರತಿಯೊಬ್ಬನೂ ಬಯಸುವನು. ಆದರೆ ಸದ್ಯದ ನಮ್ಮ ದೈನಂದಿನಿಯು ತದ್ವಿರುದ್ಧ ಸ್ಥಿತಿಯಲ್ಲಿರುತ್ತದೆ. ಸದಾ ಕಾಳಜಿ, ಚಿಂತೆ, ದುಗುಡ, ಕೆಲವು ಬಾರಿ ಟೆನ್ಶನ್! ನಾವೆಲ್ಲ ಸುಖಾಪೇಕ್ಷಿಗಳಷ್ಟೇ. ಹಾಗೆ ಸುಖಪಡುವುದಕ್ಕೆ ಅನೇಕ ಬಾಹ್ಯ ಸಾಧನಗಳಿವೆ. ಮನಶ್ಶಾಂತಿಗೆ ಮಾತ್ರ ಹೊರಗಿನ ಯಾವ ಪ್ರಮೇಯವೂ ಪ್ರಯೋಜನಕ್ಕೆ ಬಾರದು. ಮನಸ್ಸೇ ಆ ಸ್ತಿಮಿತವನ್ನು ಪಡೆಯಬೇಕು.

ಭಾವನೆಗಳಿಗೆ, ಬದುಕಿನ ಏರು–ಪೇರುಗಳಿಗೆ ಸಮನಾಗಿ ಸ್ಪಂದಿಸುವವರ ಲಕ್ಷಣವನ್ನು ಭಗವದ್ಗೀತೆಯಲ್ಲಿ ಹೇಳಿದೆ. ಅಂಥವರಿಗೆ 'ಸ್ಥಿತಪ್ರಜ್ಞ' ಎಂಬ ಬಿರುದೂ ಇದೆ. ಆದರೇನು ದ್ವಾಪರ ಯುಗದಲ್ಲಿ ಅದನ್ನು ಕೇಳಿಸಿಕೊಂಡ ಅರ್ಜುನನಿಗೂ ಮನಶ್ಶಾಂತಿ ಸಾಧ್ಯವಾಗಿತ್ತೆ? ಕಲಿಯುಗದ ಇಪ್ಪತ್ತೊಂದನೆಯ ಶತಮಾನದಲ್ಲಿ ಪದಾರ್ಪಣ ಮಾಡಲಿರುವ ನಮಗಂತೂ ಅದು ಸಾಧ್ಯವೇ ಇಲ್ಲ.

ನಮ್ಮ ಚಿಂತೆ ಕಾಳಜಿಗಳಿಗೆ ಯಾವ ಕಾರಣಗಳು? ಒಂದನೆಯದಾಗಿ, ನಮ್ಮನಮ್ಮ ಸ್ವಭಾವ' ಆದರಂತೆ ಜನರೊಡನೆಯ ಸಂಬಂಧ ಹಾಗೂ ಹೊರಗಿನ ಪರಿಸ್ಥಿತಿ. ಇವುಗಳಲ್ಲಿ ಹುಟ್ಟು ಗುಣವಾದ ಸ್ವಭಾವವನ್ನು ಅದೆಂತು ಬದಲಿಸಲು ಸಾಧ್ಯ? ಇತ್ತ ಜನಸಂಪರ್ಕವನ್ನೂ ಕಳಚಲಿಕ್ಕಾಗದು; ನಾವು ಅರಣ್ಯವಾಸಿಗಳಲ್ಲವಲ್ಲ. ಆದರಂತೆ, ಅಗೋಚರವಾದ ಹೊರಗಿನ ಪರಿಸ್ಥಿತಿಯೂ ನಮಗೆ ಎಲ್ಲ ಕಾಲಕ್ಕೆ ಅನುಕೂಲವಾಗಿರದು. ಇಂದಿನ ಯಾಂತ್ರಿಕ ನಾಗರಿಕತೆಯಲ್ಲಿ ನಮಗರಿಯದಂತೆ ಏನಾದರೂ ಹೆಚ್ಚುಕಡಿಮೆ ಆಗಿಯೇ ಆಗುತ್ತದೆ.

# ಮನಃಶಾಂತಿಯು

ಮನಸ್ಸಿನ ಅಶಾಂತಿಯನ್ನು ನೀಗಬೇಕಾದರೆ ಒಂದು ಬೀಜಮಂತ್ರವಿದೆ. ಅದೆಂದರೆ ಬದುಕಿನ ಬಗ್ಗೆ, ಪರಿಚಿತ ಜನರ ಬಗ್ಗೆ ನಮ್ಮ ನಿಲುವನ್ನೇ (Approach) ಬದಲಿಸಿಕೊಳ್ಳುವುದು! ಇದಕ್ಕೆ ಅನುಗುಣವಾಗಿ ಕೆಲವು ಸೂತ್ರಗಳನ್ನು ರೂಪಿಸಿದ್ದೇನೆ. ನನ್ನ ಮಟ್ಟಿಗೆ ರೂಢಿಸುತ್ತಾ ಇದ್ದೇನೆ.

ಇಕೋ, ನಾನು ಮೊದಲಿಗೇ ಸ್ಪಷ್ಟಪಡಿಸುವೆ; ಇದೇನು ಉಪದೇಶದ ಮಾತಲ್ಲ. (ಉಪದೇಶವನ್ನು ಕೊಡುವವರು ಜೀವನದಲ್ಲಿ ವಿಶೇಷ ಏನನ್ನೂ ಸಾಧಿಸದ ಕೈಲಾಗದವರು; ಮುದುಕರು!) ನನ್ನ ಹಾಗೂ ಇನ್ನೂ ಹಲವರ ಲೌಕಿಕ ಅನುಭವವು ಕಲಿಸಿದ್ದರ ಫಲವಿದು. ಅದನ್ನು ನಿಮ್ಮ ಮೇಲೆ ಹೊರಿಸುವ ತಪ್ಪು ನಾನಾಗಿ ಮಾಡುತ್ತಿಲ್ಲ. ಈ ಪತ್ರಿಕೆಯ ಸಂಪಾದಕರು ನನ್ನ ಖಾಸಗೀ ಸ್ನೇಹಿತರೂ ಆಗಿದ್ದು ಅವರೆದುರು ಪ್ರಸಂಗವಶಾತ್ ಪ್ರಸ್ತಾಪಿಸಿದಾಗ "ಇದನ್ನು ಒಂದು ಲೇಖರೂಪದಲ್ಲಿ ಬರೆದು ಕೊಡಿ" ಎಂದರು: ಆದ್ದರಿಂದ...

•

ಮೊದಲಲ್ಲಿ ಹೇಳಬೇಕಾದ ಸೂತ್ರವೆಂದರೆ

ಶ್ರೀನಿವಾಸ ಹಾವನೂರ

# ಮರ್ಮಸೂತ್ರಗಳು

**'ಕರ್ತವ್ಯದತ್ತ ಪೂರ್ಣ ಗಮನ'** ಹೋ! ಇದು ಹಾಳೂರಿನ ಮಾತಾಯ್ತಲ್ಲ ಎಂದು ನೀವನ್ನಬಹುದು. ಆದರೆ ಕರ್ತವ್ಯದ ವಿಚಾರವು 'ಅತಿ ಪರಿಚಯಾದವಜ್ಞಾ' ಎಂಬಂತಾಗಿದೆ. ನಮ್ಮಲ್ಲಿ ಕರ್ತವ್ಯಪ್ರಜ್ಞೆಯು ಸಾಕಷ್ಟು ಇದ್ದೇ ಇತೆ. ಆದರೆ ಈ ಸೂತ್ರದಲ್ಲಿ ಒತ್ತು ಕೊಟ್ಟಿರುವುದು 'ಪೂರ್ಣ' ಎಂಬುದಕ್ಕೆ. ನಾವು ಮಾಡಬೇಕಾದ ಕೆಲಸವು ಅಲ್ಪದ್ದೇ ಇರಲಿ, ಅದರಿಂದ ಲಾಭ ಇಲ್ಲದೆ ಇರಲಿ, ಯಾವುದೇ ಕೆಲಸವನ್ನು ಮನಮುಟ್ಟಿ ಚೆನ್ನಾಗಿ ಮಾಡಬೇಕೆನ್ನುವುದೇ ಈ ಸೂತ್ರದ ಮರ್ಮವಾಗಿದೆ.

ನೌಕರಿ ಇಲ್ಲವೆ ಉದ್ಯಮ, ಗೃಹಿಣೀತ್ವ ಮತ್ತು ವಿದ್ಯಾಭ್ಯಾಸ ಇವು ಮೂರು ನಮ್ಮ, ಅಂದರೆ ನಮ್ಮ ಶಿಕ್ಷಣವಂತ ಶ್ರೀಸಾಮಾನ್ಯರ ಮುಖ್ಯ ಕರ್ತವ್ಯಗಳಷ್ಟೆ. ಇದರಲ್ಲಿ ಬಡವ-ಬಲ್ಲಿದ, ಕಿರಿಯ-ಹಿರಿಯ ಎಂಬ ಭೇದ ಇಲ್ಲದೆ, ಅವರವರಿಗೆ ಅವರ ಕರ್ತವ್ಯ ಮಹತ್ವದ್ದಿರುತ್ತದೆ. ಎಮ್. ಟೆಕ್, ಮಾಡುವ ವಿದ್ಯಾರ್ಥಿ ತನ್ನ ಓದಿನತ್ತ ಯಾವ ಗಮನವನ್ನು ಕೊಡುವನೋ, ಅಷ್ಟೇ ಗಮನವನ್ನು ಪ್ರಾಥಮಿಕ ಇಯತ್ತೆಯಲ್ಲಿರುವ ಚಿಕ್ಕ ಹುಡುಗನೂ ಕೊಡುವನು. ನಮ್ಮ ಕರ್ತವ್ಯವನ್ನು (Duty ಮತ್ತು work...ಎರಡೂ ಅರ್ಥದಲ್ಲಿ) ದಕ್ಷತೆಯಿಂದ ನೆರವೇರಿಸುತ್ತ ಇದ್ದಲ್ಲಿ ಒಂದು ಬಗೆಯ ಮನಸ್ಥೈರ್ಯ ಬರುತ್ತದೆ. ಯಾರೇನು ನನಗೆ ಮಾಡಿಯಾರು? ಎಂಬ ಎದೆಗಾರಿಕೆ ಮೂಡುತ್ತದೆ. ದಿನದ ಗರಿಷ್ಠ ಭಾಗವನ್ನು ಯಾವುದೊಂದು ಮುಖ್ಯವಾದ ಕೆಲಸದಲ್ಲಿ ಕಳೆಯುವಾಗ, ಆ ನಿಮಿತ್ತದಿಂದ ಒದಗುವ ಹೆಚ್ಚು ಕಡಿಮೆಗಳಿಗೆ ನಮ್ಮ ಮನಸ್ಸು ಬೇಗುದಿಗೊಳ್ಳುವ ಪ್ರಸಂಗವು ಇದರಿಂದ ತಪ್ಪುವುದು.

ಕರ್ತವ್ಯದತ್ತ ಪೂರ್ಣಗಮನ ಏಕೆ, ಹೇಗೆ ಅನ್ನುವುದಕ್ಕೆ ಒಂದು ಉದಾಹರಣೆ ಕೊಡುವೆ— ಗೃಹಿಣೀತ್ವದ್ದು. ಅರ್ಥಾತ್ ಗಂಡ-ಮಕ್ಕಳ ಯೋಗಕ್ಷೇಮ, ಸಂಬಂಧಿಕರೊಡನೆಯ ಸಂಬಂಧ- ಹೀಗೆ ಮನೆಯ ಎಲ್ಲ ಜವಾಬ್ದಾರಿಯನ್ನು ಮಹಿಳೆಯರು ವಹಿಸಿಕೊಂಡು ಸಂಸಾರ ನಡೆಸುವುದು. ಹಿಂದಿನ ಕಾಲದಲ್ಲಿ ಇದು ಬಹು ಸಮಯ್ಯ! ಬೇಡುವ, ವ್ಯಾಪಕವಾದ, ಶ್ರಮದಾಯಕವಾದ, ಹಾಗೂ ಸ್ತ್ರೀಯಲ್ಲಿಯ ಸಹನೆಯನ್ನು ಒರೆಗೆ ಹಚ್ಚುವ ಕರ್ತವ್ಯವಾಗಿತ್ತು. ಆದರೆ ಇಂದಿನ ಮಧ್ಯಮ ವರ್ಗದ ಮಹಿಳೆಗೆ? ಅಡುಗೆ ಮುಂತಾದ್ದಕ್ಕೆ ಎಷ್ಟೊಂದು ಬಗೆಯ

---

### ಮನಃಶಾಂತಿಯ ಸಪ್ತ ಸೂತ್ರಗಳು

೧. **ಕರ್ತವ್ಯದತ್ತ ಪೂರ್ಣಗಮನ.**
೨. **ಹವ್ಯಾಸವೊಂದರ ಸಾಧನೆ.**
೩. **ನೋ-ಗ್ಯಾರಂಟಿ ನಿಲುವು.**
೪. **ಕೇಳುಗರ ದೃಷ್ಟಿಯಿಂದ ನಮ್ಮ ಮಾತು.**
೫. **'ಜನ ಇರೋದೆ ಹೀಗೆ' ಎಂಬ ಗ್ರಹಿಕೆ.**
೬. **ತುಸು ಅಂತರವಿಟ್ಟು ಪರಸ್ಪರ ಸಂಬಂಧ.**
೭. **ಅತೀತವೊಂದರಲ್ಲಿ ಶರಣಾಗತಿ.**

---

ಸೌಕರ್ಯಗಳು! ಮೇಲೆ ಒಕ್ಕಲಗಿತ್ತಿಯ ಆಸರೆ, (ಒಂದು ದಿನ ಅವಳು ಬಾರದಿದ್ದರೆ, ಆಕಾಶವೇ ಮೈಮೇಲೆ ಬಿದ್ದಂತೆ...) ಇತ್ತ ಗಂಡ ಕೆಲಸಕ್ಕೆ ಹೋದನೆಂದರೆ, ಮಕ್ಕಳು (ಅವು ಎರಡೇ) ಶಾಲೆಗೆ ಹೋದುವೆಂದರೆ ಮತ್ತೇನಿದೆ? ಜನ ಪ್ರಿಯ ವಾರಪತ್ರಿಕೆಯನ್ನು ಓದುತ್ತ ಹೊರ ಳಾಡುವುದೆ? ಆ ಮೇಲಿನ ಕೆಲಸವೇ? ಸಂಜೆಯ ಅಡುಗೆಯೂ ತುಸು ಮಟ್ಟಿಗೆ ಮಧ್ಯಾಹ್ನವೇ ಸಿದ್ಧ. ಕೆಲವರು ತಾಯಂದಿರು ಜೊತೆಗೆ ಮಕ್ಕಳ ಅಭ್ಯಾಸದತ್ತ ತುಸು ಗಮನ ಕೊಡು-ತ್ತಿರಬಹುದು. ಆದರೆ ಪೂರ್ಣತಃ ಅಲ್ಲ. ಅಂತೂ ಈಗಿನ ಅನೇಕಾನೇಕ ಮಹಿಳೆಯರು ತಮಗುಳಿದ ವೇಳೆಯನ್ನೂ, ಕಲಿತ ವಿದ್ಯೆಯನ್ನೂ ಸಾಕಷ್ಟು ಅಪವ್ಯಯ ಮಾಡುತ್ತಾರೆ. ತಮ್ಮ ಕರ್ತವ್ಯ ಅಷ್ಟೇ ಎಂದು ಬಗೆಯುತ್ತಾರೆ. ಬದುಕಿನಲ್ಲಿ ಖಚಿತವಾದ ಗುರಿ, ವೇಳೆಯ ಪೂರ್ಣ ಉಪ-ಯೋಗ ಆಗದೇ ಇದ್ದಾಗ ಆಲಸೀ ಮನಸ್ಸು ಏನೇನೋ ಕೆಟ್ಟವಿಚಾರ ಮಾಡುವುದು. ಆದರಿಂದ ಸಾಭಾವಿಕವಾಗಿಯೆ ಅವರಿಗೆ ದೈಹಿಕ ಜಾಡ್ಯ, ಅಸ್ವಾಸ್ಥ್ಯ. ಇದರ ಪರಿಣಾಮ ಗಂಡ, ಮಕ್ಕಳ ಮೇಲೆಯೂ ಆಗದೇ ಇದ್ದೀತೆ? ಸಂಸಾರ ಕಾರ್ಯ ದಲ್ಲಿ ತನ್ನದು ಸಮಪಾಲು. ತಾನು Equal Partner ಎಂದು ಗೃಹಕೃತ್ಯದಲ್ಲಿ ಮಾತ್ರ ತೊಡಗಿದ ಅದೆಷ್ಟು ಜನ ಗೃಹಿಣಿಯರು ತಿಳಿದು ಅಚರಣೆಯಲ್ಲಿ ತಂದಿದ್ದಾರೆ?

*

ಮುಖ್ಯ ಕರ್ತವ್ಯದ ಜೊತೆ ನಮಗೆಲ್ಲ ಉಪ ಕರ್ತವ್ಯವೆಂಬುದೂ ಇರುತ್ತದೆ, ಇರತಕ್ಕದ್ದು. ಇಡೀ ದಿನವನ್ನು ನಾವು ಯಾರೂ ಮುಖ್ಯ ಕರ್ತವ್ಯದಲ್ಲಿಯೇ ಕಳೆಯುವುದಿಲ್ಲ. ಆಫೀಸಿಗೆ ಹೋಗಿ ಒಂದಷ್ಟು ದುಡಿದು ಬಂದೆವೆಂದರೆ ಮಹಾ ಕೃತಕೃತ್ಯ ಮಾಡಿದೆವಾಗಿ ಬಗೆಯು-ತ್ತೇವೆ. ನಮ್ಮ ಪಾಲಿನ ಕರ್ತವ್ಯ ಮುಗಿಯಿ-ತೆಂದೇ ಭಾವಿಸುತ್ತೇವೆ. ಉಳಿದ ವೇಳೆಯನ್ನು ಶಿಕ್ಷಣ ಕ್ಷೇತ್ರದಲ್ಲಿಯೊ, ಸಂಘ ಸಂಸ್ಥೆ-ಗಳಲ್ಲಿಯೊ ತೊಡಗಿಸುವುದರ ಮೂಲಕ ತುಸು ಸಮಾಜ ಸೇವೆಯನ್ನು ಮಾಡಲು ಸಾಧ್ಯವಿಲ್ಲವೆ? ಸಮಾಜದ ಋಣವನ್ನು ಎಷ್ಟು ತೀರಿಸಿದರೂ ಕಡಿಮೆಯೇ ಎನ್ನುವುದನ್ನು ಮರೆಯುತ್ತೇವೆ. ನನ್ನ ಒಬ್ಬ ಪರಿಚಿತರ ಉಪಕರ್ತವ್ಯವೆಂದರೆ ಶವ ಸಂಸ್ಕಾರದ ಸಹಾಯ. ಸಾವು ಕಾಲಿರಿಸಿದ ಮನೆಯೊಂದರ ಜನಕ್ಕೆ ಇಂಥವರ ಅಗತ್ಯ (ಅಪರ ಕರ್ಮ ಮುಗಿಯುವವರೆಗೂ) ಎಷ್ಟೊಂದಿದೆ-ಯೆಂಬುದನ್ನು ನಾವು ಬಲ್ಲೆವು.

ಮುಂಬಯಿಯಲ್ಲಿಯ ಓರ್ವ ಡಾಕ್ಟರ್ ದಂಪತಿಗಳ ವಿಶಿಷ್ಟ ಸಮಾಜ ಸೇವೆಯ ಬಗೆಗೆ ಕೆಲವು ವರ್ಷಗಳ ಹಿಂದೆ ಪತ್ರಿಕೆಗಳಲ್ಲಿ ಪ್ರಕಟ-ವಾಗಿತ್ತು. ಆಸ್ಪತ್ರೆಯಲ್ಲಿ ಬಿಡುವಿಲ್ಲದೆ ದುಡಿದ ಮೇಲೆಯೂ ರಾತ್ರಿ ತಮ್ಮ ವ್ಯಾನ್ ತೆಗೆದು ಕೊಂಡು ಅವರು ಫೈವ್ ಸ್ಟಾರ್ ಹೋಟೆಲುಗಳಿಗೆ ಹೋಗೋದು; ಅಲ್ಲಿ ಉಳಿದಿರುವ ಖಾದ್ಯ ವಸ್ತುಗಳನ್ನು (ಉಚ್ಛಿಷ್ಟವನ್ನಲ್ಲ) ಜಮಾಯಿಸಿ ಕುಷ್ಠರೋಗದ, ಇಲ್ಲವೆ ಅನಾಥರ ಆಶ್ರಮಗಳಿಗೆ ಹಂಚುವುದು.

ಸಮಾಜ ಸೇವೆಯನ್ನು ಬಿಡೋಣ, ಮನೆ-ಯಲ್ಲಿಯೇ, ನಮ್ಮ ನೆರೆಯಲ್ಲಿಯೆ ನಿಯಮಿತ-ವಾದ ಒಂದು ಉಪಕೃತ್ಯವನ್ನು ನಿರ್ವಹಿಸುವುದು ಸಾಧ್ಯ. ಅನೇಕ ವರ್ಷಗಳ ಹಿಂದಿನ ಮಾತು. ನಾವು ಒಂದು ಚಾಳಿನಲ್ಲಿದ್ದಾಗ ಓರ್ವ ಕಾಲೇಜು ಕನ್ಯೆ ಪ್ರತಿ ದಿನ ಸಂಜೆ ಅಲ್ಲಿಯ ಮಕ್ಕಳನ್ನೆಲ್ಲ ಕಲೆ ಹಾಕಿ ಅವರಿಂದ ನಾನಾ ಬಗೆಯ ಆಟ ಗಳನ್ನು ಆಡಿಸುತ್ತಿದ್ದಳು. ಅದನ್ನು ಪ್ರತಿ ದಿನ ನೋಡುವುದು ನನ್ನ ಕಣ್ಣಿಗೆ ಹಬ್ಬವಾಗಿತ್ತು. ಈಚೆಗೆ ಅಂದರೆ ೧೫–೨೦ ವರ್ಷ ಕಳೆದ ಮೇಲೆ ಅವಳನ್ನು ಕಂಡೆ. ಅದೇ ಪ್ರಸನ್ನ ಮುಖ ಮುದ್ರೆ. ಅವಳ ಗೆಲುವಿನ ಮಾತನ್ನು ಕೇಳು-ತ್ತಿದ್ದಾಗ ನನಗೆ ತುಂಬಾ ಖುಶಿಯಾಯಿತು. ಅವಳ ಉಭಯ ಕರ್ತವ್ಯಗಳ ಪಾಲನೆಯ ಅರಿವೂ ಆಯಿತು.

ನೆನಪಿಡಿ: **ಉಪಕರ್ತವ್ಯವೂ ಒಂದು ಕರ್ತ-**

ವ್ಯವೇ. ಅದು ಕಡಿಮೆ ಪ್ರಮಾಣದ್ದು ಇರಬಹುದು; ಹಾಗೆಂದು 'ಬಿಡುವಿದ್ದಾಗ ನೋಡೋಣವಂತೆ' ಅಥವಾ 'ಮಾಡದಿದ್ದರೂ ನಡೆದೀತವೆ' ಎಂಬ ಭಾವನೆ ಸಲ್ಲದು. ಈ ಬಗೆಯ ಕೆಲಸಗಳಿಂದ ಮನಸ್ಸಿಗೊದಗುವ ಶಾಂತಿ ಸಂತೃಪ್ತಿಗಳನ್ನು ಅನುಭವಿಸಿಯೇ ಈ ಮಾತನ್ನು ಹೇಳುತ್ತಿದ್ದೇನೆ.

*

ಉಪಕರ್ತವ್ಯದ ಜೊತೆಗೆ ಹೇಳಬೇಕಾದದ್ದು, ಯಾವುದೊಂದು ಹವ್ಯಾಸ ಸಾಧನೆ. ಇತರ ಪ್ರಾಣಿಗಳಲ್ಲಿ ಕಂಡುಬರದ ಒಂದು ವಿಶಿಷ್ಟ ಚೇತನ ಮನುಷ್ಯನಲ್ಲಿದೆ. ಉಣ್ಣು-ತಿನ್ನುವ ಪಶು ಭೂಮಿಕೆಯನ್ನು ದಾಟಿ ಉತ್ತಮ ಸಂಸ್ಕಾರದಿಂದ ಬಾಳನ್ನು ನಾವು ಸಾಗಿಸಬಲ್ಲೆವು. ಅಂಥ ಅನುಕೂಲಗಳಲ್ಲಿ ಹವ್ಯಾಸವೂ ಒಂದು. ಚಟ, ವ್ಯಸನಗಳಿಗೂ ಇದಕ್ಕೂ ತುಂಬಾ ಅಂತರ. ಅವು ದೈಹಿಕ; ಹವ್ಯಾಸವು ಬೌದ್ಧಿಕ ಚೇತನಕ್ಕೆ ಸಂಬಂಧಿಸಿದ್ದು.

ಹವ್ಯಾಸಕ್ಕೆ ವಿಷಯಗಳು? ಲೆಕ್ಕವಿಲ್ಲದಷ್ಟು. ಸಾಹಿತ್ಯ, ಸಂಗಿತ, ಚಿತ್ರಕಲೆ ಫೋಟೊಗ್ರಾಫಿ- ಇವಂತೂ ತಿಳಿದ ಹವ್ಯಾಸಗಳೇ. ಏನಾದರೊಂದು ಕರಕುಶಲ ಕೈಗಾರಿಕೆಯೂ ಆದೀತು. ಅಂಚೆಚೀಟಿಯ ಸಂಗ್ರಹವು ಆಬಾಲವೃದ್ಧರಲ್ಲಿಯೂ ಜನಪ್ರಿಯ. ಕ್ರಿಕೆಟ್ ಆಟದ ಅಂಕಿ ಸಂಖ್ಯೆಗಳ ದಾಖಲೆ? ಅದನ್ನೂ ಒಂದು ಹವ್ಯಾಸವೆಂದೇ ತಿಳಿಯತಕ್ಕದು. ಇನ್ನು ಕೆಲವನ್ನು ಕೇಳಿರಿ: ಒಬ್ಬ ಸ್ವಾಮೀ ರಾಜಕುಮಾರ ದೇಶ ವಿದೇಶಗಳಲ್ಲಿಯ ಕಡ್ಡಿಪೆಟ್ಟಿಗೆಗಳ ಲೇಬಲ್ ಕಲೆ ಹಾಕಿದ್ದಾನಂತೆ! ನನ್ನ ಸಹೋದ್ಯೋಗಿಯೊಬ್ಬರ ಹದಿಹರೆಯದ ಮಗ ತಾನು ನೋಡಿದ ಮೊತ್ತ ಮೊದಲಿನ ಸಿನೆಮದ ಟಿಕೆಟ್ಟಿನಿಂದ ಇದುವರೆಗಿನ ಎಲ್ಲವುಗಳನ್ನು ಹಾಗೂ ಆ ಸಿನೆಮ ನೋಡಿದಾಗ ತನ್ನ ಜೊತೆಗೆ ಇದ್ದವರ ಹೆಸರುಗಳನ್ನು ಸೇರಿಸಿ ಆಲ್ಬಮ್ಮಿಗೆ ಸಾಗಿಸಿದ್ದಾನೆ. (ಅವರ ಮನೆಯಲ್ಲಿ ನಾನು ಅದನ್ನು ತಿರುವಿಹಾಕುತ್ತಿದ್ದಾಗ, ಅವನ girl friend ಯಾರೆಂಬುದನ್ನು ಗುರುತಿಸಿದೆ!) ನಾನಾ ತರಹದ ಪೆನ್ನುಗಳ ಸಂಗ್ರಹವನ್ನು ಬೆಂಗಳೂರಿನ ಒಬ್ಬ ಪತ್ರಿಕೋದ್ಯಮಿ ಮಾಡಿದ್ದನೆಂದು ಈಚೆಗೆ ವರದಿಯಾಗಿತ್ತಲ್ಲವೆ?

ನನ್ನ ಪರಿಚಯದ ಒಬ್ಬರು ಅಕೌಂಟಂಟ್ ಹುದ್ದೆಯಿಂದ ನಿವೃತ್ತರಾದವರು. ಲೆಕ್ಕ ಪತ್ರಗಳಲ್ಲಿಯೇ ಆಯುಷ್ಯದ ಬಹುಭಾಗವನ್ನು ಅವರು ಕಳೆದಿದ್ದರೂ ಸೊಗಸಾಗಿ ಹರಟೆ ಹೊಡೆಯುತ್ತಾರೆ. ತಮ್ಮ ಅನುಭವಗಳನ್ನು ಸೇರಿಸಿ, ಕತೆ ಮಾಡಿ ಹೇಳುತ್ತಾರೆ. ಅವರೇನಾದರೂ ಕತೆ-ಕಾದಂಬರಿ ಬರೆಯುತ್ತಿದ್ದರೆ, ಇಂದಿನ ಹಲವು ಜನಪ್ರಿಯ ಲೇಖಕರನ್ನು ಮೀರಿಸುತ್ತಿದ್ದರೇನೊ. ಅಂತು ಅವರ ಸುಖಸಂಕಥೆಗಳನ್ನು ಕೇಳುವುದಕ್ಕೆ ನಮಗೆಲ್ಲಾ ತುಂಬಾ ಖುಶಿ. ಈಚೆಗೆ ಆ ಶ್ರೋತೃವೃಂದ, ಎಷ್ಟೊಂದು ಬೆಳೆದಿದೆಯೆಂದರೆ,



'ಕ್ಷಮಿಸಯ್ಯ... ಕನ್ನಡಕ ಹಾಕ್ತಿದೀನಿ... ಮದುವೆ ಆದ ಮೇಲೆ 'ದೃಷ್ಟಿಮಾಂದ್ಯ' ಇದೆ ಅಂತ ಗೊತ್ತಾಯ್ತು...!'

ಅವರ ಮನೆಯಲ್ಲಿ ಪ್ರತಿ ಸಂಜೆ ಅಥವಾ ರಾತ್ರಿ ಏಳೆಂಟು ಜನರಾದರೂ ಜಮಾಯಿಸಿರುತ್ತಾರೆ. ಇದೂ ಒಂದು ಉತ್ತಮ ಹವ್ಯಾಸವೆಂದೇ ಬಗೆಯಬೇಕಲ್ಲವೆ?

ಮಂಗಳೂರಿನಲ್ಲಿ ನಾನಿದ್ದಾಗ, ನಮ್ಮ ಬೀದಿಯ, ಓರ್ವ ಪರಿಚಯದ ಹುಡುಗ ನನ್ನ ಪರ್ಸನ್ನು ಕಂಡು; "ಸಾಕಷ್ಟು ಹಳೆಯದಾಗಿದೆ, ಅಂಕಲ್. ನನಗೆ ಕೊಡಿರಿ. ನೀವು ಇನ್ನೊಂದನ್ನು ಕೊಳ್ಳಿರಿ" ಎಂದ. ಅದು ನಿಜವೇ. ಕೊಟ್ಟೆ; ಹೊಸದನ್ನು ಕೊಂಡೆ. ಮರುದಿನ ಅವನ ತಂದೆ ಭೆಟ್ಟಿಯಾದಾಗ ಅವರೇ ಅದನ್ನು ಪ್ರಸ್ತಾಪಿಸಿ, "ಇದೇ ರೀತಿ ತುಂಬಾ ಪರ್ಸ್‌ಗಳನ್ನು ಕೂಡಿಹಾಕಿದ್ದಾನೆ" ಎಂದು ಹೇಳಿ ನಕ್ಕರು. ಹೀಗೆ ಹವ್ಯಾಸಗಳ ಆಯ್ಕೆಗೆ ಮಿತಿಯೆಂಬುದಿಲ್ಲ. ಅದು ಯಾವುದೇ ಇರಲಿ ಕಾಲ ಕಾಲದ ನಮ್ಮ ಮನೋಜಾಡ್ಯವನ್ನು ನೀಗಲು ಇದೊಂದು ನಿಶ್ಚಿತವಾದ ಸಾಧನೆ.

*

ನಮ್ಮ ಮಾನಸಿಕ ಕಿರಿಕಿರಿಗೆ ನಮಗೆ ಗೊತ್ತಿರದ ಪರಿಸ್ಥಿತಿಯೂ ಕಾರಣವಾಗಬಹುದು— ಎಂದೆನಲ್ಲವೆ? ಆಗ ಕೆಲಸಕ್ಕೆ **'ನೋ ಗ್ಯಾರಂಟಿ'** ನಿಲುವನ್ನು ತಾಳಿದರೆ ಹೇಗೆ? ನಾನಂತೂ ಯಾವದೊಂದು ಕಾರ್ಯವು ಅದು ಯಃಕಶ್ಚಿತವೇ ಇರಲಿ, ಕೈಗೂಡದು ಎಂಬ ಗ್ರಹಿಕೆಯಿಂದಲೇ ಅದಕ್ಕೆ ತೊಡಗುವೆ.

ಮಹತ್ವದ ಕಾರ್ಯವಿದ್ದರಂತೂ ಅದಕ್ಕಾಗಿ ಎಷ್ಟೆಲ್ಲ ಸಿದ್ಧತೆ ಮಾಡಿಕೊಂಡಿರುತ್ತೇವೆ! ಅದರ ಕೈಗೂಡುವಿಕೆಗೆ ಹೊರಗಿನ ಆಗು ಹೋಗುಗಳನ್ನು ಅವಲಂಬಿಸಿರುತ್ತೇವೆ. ಅವುಗಳೋ ನಮ್ಮ ಅಳವಿನಲ್ಲಿ ಇಲ್ಲದವುಗಳು. ಮುಂದೇನು? ಹೇಗೆ ಆದೀತೋ? ಇವರು-ಅವರು ಏನು ಮಾಡಿಯಾರು? ಎಂದೆಲ್ಲ ಅನಿಶ್ಚಿತತೆ ನಮ್ಮನ್ನು ಕಾಡುತ್ತಲೇ ಇರುವುದು. ಇಷ್ಟೆಲ್ಲ ಆಗಿ, ಕೊನೆಯಲ್ಲಿ ಆ ಕೆಲಸ ಕೈಗೂಡದೇ ಇದ್ದರಂತೂ ತುಂಬಾ ನಿರಾಶೆ ಕವಿಯುವದು. ಕೆಲಸದ ಆರಂಭದಿಂದಲೇ ಅದು ಕೈಗೂಡದು ಎಂಬ ಗ್ರಹಿಕೆಯಿಂದ ಹೊರಡುವಾ, ಇದು ಸಿನಿಕತನದ ಅಥವಾ ಕೈಲಾಗದವರ ಮನೋವೃತ್ತಿ ಏನಲ್ಲ. 'ನೋ ಗ್ಯಾರಂಟಿ'ಯ ಇಂಗಿತ ಅಷ್ಟಕ್ಕೆ ಮುಗಿಯುವುದಿಲ್ಲ. ಯಾವದೊಂದು ಕೆಲಸವು ಆಗಲಿಕ್ಕಿಲ್ಲ ಎಂಬಾಗ ಬದಲೀ ವ್ಯವಸ್ಥೆಯನ್ನು ಮಾಡದಿದ್ದರೆ ಹೇಗೆ? ಆ ಕೆಲಸವು ಅಮಹತ್ವದ್ದೇ ಇರಲಿ; ಅತಿ ಮಹತ್ವದ್ದೇ ಇರಲಿ ಅದರ ಬದಲಿಗೆ ಏನು? ಎಂದು ಯೋಚಿಸಿ ಇಟ್ಟಿರುವುದೊಳಿತು. Alternative! ನಮ್ಮ ಕೆ. ಇ. ಬಿ. ಯ ವಿದ್ಯುತ್ತಿನ ಪೂರೈಕೆಗೆ ಪ್ರತಿಯಾಗಿ ಮನೆಯಲ್ಲಿ ಮೇಣಬತ್ತಿಯ ಬದಲೀ ವ್ಯವಸ್ಥೆ ಇರುವಂತೆ. ಒಂದು ಮಾತು: ಹೇಗೊ ಬದಲಿ ವ್ಯವಸ್ಥೆ ಇದೆಯೆಂದು, ಆ ಕೆಲಸದ ವಿಷಯಕವಾದ ನಮ್ಮ ಪ್ರಯತ್ನದಲ್ಲಿ ಅರೆ ಕೊರೆಯಾಗಕೂಡದು.

ಆಫೀಸಿನಲ್ಲಿ ನಿಮ್ಮನ್ನು ಬೇರೊಂದು ಊರಿಗೆ ವರ್ಗಾಯಿಸುವ ಹುಕುಮನ್ನು ಹೊರಡಿಸಿಬಿಟ್ಟಿದ್ದಾರೆ, ನಿಮಗೆ ಊರು ಬಿಡುವುದು ಸಾಧ್ಯವೇ ಇಲ್ಲ. ವ್ಯವಹಾರಕುಶಲರಾದ ನೀವು ಏನೆಲ್ಲ ಉಪಾಯಗಳನ್ನು ಯೋಚಿಸಿ ಅದನ್ನು ರದ್ದು ಪಡಿಸಲು ಪ್ರಯತ್ನ ಮಾಡುವಿರಿ. ಆದರೂ 'ನೋ ಗ್ಯಾರಂಟಿ' ಅಂತ ಭಾವಿಸಿ ಸಾಮಾನು ಕಟ್ಟುವ ಮನೆ ತೆರವುಮಾಡುವ, ಮುಂತಾಗಿಯೂ ಯೋಚಿಸಿ ಇಟ್ಟಲ್ಲಿ, ನಿಮ್ಮ ಪ್ರಯತ್ನಗಳಿಗೆ ಫಲ ಸಿಕ್ಕದಿದ್ದರೆ ಮನಸ್ಸು ಅಷ್ಟೊಂದು ತಲ್ಲಣಗೊಳ್ಳಲಾರದು.

ಮಗಳು ಕುರೂಪಿಯಲ್ಲವಾದರೂ 'ರಾಶೀ' ಕನ್ಯಾಮಣಿ. ಈಗಾಗಲೇ ಏಳು ಜನ ನೋಡಿ ವಾಪಾಸು ಮಾಡಿದ್ದಾರೆ. ಆದರೆ ಈಗ ನೋಡ ಬರುವವ ಹಾಗಲ್ಲವೆಂದು ತೋರುತ್ತದೆ; ಅವನೂ ಸಾದಾ ವರನೇ. ಅಲ್ಲದೆ ಅವರಿವರಿಂದ ಹೇಳಿಸಿದ್ದೀರಿ.. ಇತ್ತ ನಿಮ್ಮ ಹೆಂಡತಿ ತುಂಬಾ ಆಸೆ ಹಿಡಿದಿದ್ದಾಳೆ. ಆಗ ಮಾತ್ರ ನೀವು ಅವಳಿಗೆ 'ನೋ ಗ್ಯಾರಂಟಿ'ಯ ಎಚ್ಚರ ಹೇಳಲೇಬೇಕು.

ಮತ್ತೊಂದು ಒಂದು ವರನ ಪ್ರಸ್ತಾಪವನ್ನು ಮಾಡಿ ಇಟ್ಟಿರಬೇಕು!

ಅದರಂತೆ 'ನೋ ಗ್ಯಾರಂಟಿ'ಯನ್ನು ಅನ್ವಯಿಸಬೇಕಾದ ಪ್ರಸಂಗಗಳೆಂದರೆ ವಿದೇಶ ಪ್ರಯಾಣ, ರವಿವಾರದ ಸಿನೆಮಾ, ಎರಡು ಹೆಣ್ಣು ಮಕ್ಕಳಾದ ಮೇಲೆ ಮೂರನೆಯದು ಗಂಡೇ ಹುಟ್ಟಬೇಕೆನ್ನುವ ಪರಿಸ್ಥಿತಿ. ಈ ಮರ್ಮಸೂತ್ರವನ್ನು ನಿಮಗೆ ಮನಗಾಣಿಸಲು ಇನ್ನೂ ಅನೇಕ ಉದಾಹರಣೆಗಳನ್ನು ಕೊಟ್ಟೇನು!

*

ಮನಸ್ಸಿನ ಅಶಾಂತಿಗೆ ಇರುವ ಮೂರು ಪ್ರಮೇಯಗಳಲ್ಲಿ ಕೊನೆಯದು, ನಮ್ಮ ಹಾಗೂ ಇತರ ಜನರೊಡನೆ ಸಂಬಂಧ. ಈ **ಮನುಷ್ಯ ಸಂಬಂಧದ ಮುಖ್ಯವಾದ ಕೊಂಡಿ ಎಂದರೆ ಮಾತು.** ಆದರೆ ಮಾತಿನ ಸಂದರ್ಭದಲ್ಲಿ ನಾವು ಎಷ್ಟೊಂದು ನಿರ್ಲಕ್ಷ್ಯದಿಂದ ಇರುತ್ತೇವೆ! ಏನೇನೋ ಆಡುತ್ತೇವೆ. ಅತಿಯಾಗಿಯೂ ಮಾತಾಡುತ್ತೇವೆ — ನಮ್ಮ ಧ್ವನಿಗೆ ನಾವೇ ಮರುಳಾಗುವವರಂತೆ. ಕೆಲವು ಸಲ ಹೇಗೆ ಹೇಳಬೇಕೆಂದು ತಿಳಿಯದೆ ಪೆಚ್ಚಾಗಿ ಪೇಚಾಡುತ್ತೇವೆ. ಸಿಟ್ಟಿನ ಭರದಲ್ಲಿ ಮಾತನಾಡುವುದಂತೂ ಆಪದ್ಧತನದ ಪರಮಾವಧಿಯಾಗಿರುತ್ತದೆ. ಮಾತರಿಯದವ ಜಗಳವ ತಂದ— ಎನ್ನುವುದು ಸದಾ ಸತ್ಯದ್ದು, ಪರಿಣಾಮ? ನಮ್ಮ ಮನಸ್ಸಿನ ನೆಮ್ಮದಿಹೇಳ ಹೆಸರಿಲ್ಲದೆ ಹೊರಟು ಹೋಗುತ್ತದೆ. ಜಗಳದ ಪರಿಸ್ಥಿತಿ ಇರದಿದ್ದರೂ ಅನೇಕ ಸಲ ಸರಿಯಾಗಿ ನಾವು ಹೇಳಲಾಗದ್ದರಿಂದ ಅದನ್ನು ಕೇಳಿಸಿಕೊಂಡವರು ಅರ್ಥಮಾಡಿಕೊಳ್ಳುವುದಿಲ್ಲ. ನಮ್ಮ ಉದ್ದೇಶ ಈಡೇರುವುದಿಲ್ಲ. ಆದ್ದರಿಂದ ಆ ಇನ್ನೊಬ್ಬರನ್ನು ಗಮನದಲ್ಲಿ ಇಟ್ಟುಕೊಂಡೇ ಮಾತಿಗೆ ತೊಡಗಬೇಕಲ್ಲದೆ, ಏನೇನೊ ಹೇಳಿಬಿಟ್ಟರೆ ಆಗದು.

ಮಾತಿಗೆ ಕಾಲು ಇಲ್ಲವಾದರೂ 'ಕರ್ಣೋಪಕರ್ಣಿಕಯಾ' ತುಂಬಾ ಹರಿದಾಡುತ್ತದೆ. ಆದರೆ ಒಬ್ಬರು ಇನ್ನೊಬ್ಬರಿಗೆ ಹೇಳುತ್ತ ಹೋದಂತೆ, ಆ ಮಾತಿನ ಅರ್ಥವು ವಿಕೃತಿಗೊಳ್ಳುವುದೇ ಹೆಚ್ಚು. ಈ ವಿಕೃತಿಯಿಂದಾಗಿ ನಾನು ಹಲವರ ವಿರಸಕ್ಕೆ ಗುರಿಯಾಗಿದ್ದೇನೆ. "ನಾನು ಹಾಗೆ ಹೇಳಲಿಲ್ಲ. ಅವರು ತಪ್ಪು ತಿಳಿದಿದ್ದಾರೆ." ಎಂದೆಲ್ಲ ಮುಂದೆ ಸಮರ್ಥಿಸಿಕೊಳ್ಳುವ ಪ್ರಸಂಗಗಳೂ ಆಗಿ ಹೋಗಿವೆ. ಇವಕ್ಕಿಂತ ಹೆಚ್ಚಾಗಿ, ಇನ್ನೊಬ್ಬರನ್ನು ಚುಚ್ಚುವ ಆಕ್ಷೇಪಿಸುವ [illegible] ವ್ಯಂಗ್ಯವಾಗಿ ತಿವಿಯುವ ಮಾತಿನ ಸಂದರ್ಭಗಳಂತೂ ಮನಸ್ಸಿನ ಶಾಂತಿಯನ್ನು ಬಹುವಾಗಿ ಕದಡುವವು — ಅಂದವರು, ಅನ್ನಿಸಿಕೊಂಡವರಿಬ್ಬರಿಗೂ! ತಿಳಿಯಬೇಕಾದ ಅಂಶವೆಂದರೆ [illegible] ದಿನಗಳಲ್ಲಿ ಯಾರೂ ಅವರು ನಮಗಿಂತ ಕೆಳಗಿನ ಸ್ತರದವರಿರಲಿ, ನಮ್ಮ ಋಣದಲ್ಲಿಯೇ ಇರಲಿ, ವಯಸ್ಸಿನಲ್ಲಿ ಚಿಕ್ಕವರಿರಲಿ, ಯಾರ್‍ಯಾರೂ [illegible] ಕೊಳ್ಳುವುದಕ್ಕೆ ಇಷ್ಟಪಡುವುದಿಲ್ಲ. ಕಾರಣ[illegible] ನಾವು ಪ್ರತಿಯೊಬ್ಬರೂ ಹೆಚ್ಚೆಚ್ಚು ಸೂಕ್ಷ್ಮ ವೇದಿಗಳಾಗತೊಡಗಿದ್ದೇವೆ. ನಮ್ಮ [illegible] ಇಲ್ಲವೆ ಸ್ಥಾನವು ಯಾವ ಮಟ್ಟದ್ದೇ ಇರಲಿ, ಸ್ವಂತದ ಬಗ್ಗೆ ನಮಗೆ ತುಂಬಾ ಅಭಿಮಾನ ಅಹಮಹಮಿಕೆ. Touch me not ಅನ್ನುವ ತರಹ.

ಈ ಅಂಶವನ್ನು ಗಮನದಲ್ಲಿ ಇರಿಸಿಕೊಳ್ಳದೇ ಬಿರುಸು ಮಾತನ್ನು ಆಡಿದ್ದೇ ಆದರೆ ಪರಸ್ಪರ ಸಂಬಂಧವು ಅಪನಂಬಿಕೆ, ಜಗಳಗಳಲ್ಲಿ ಪರ್ಯ[illegible] ಗೊಳ್ಳುತ್ತದೆ. ಆದ್ದರಿಂದ ನಮ್ಮ ಮನಸ್ಸಿಗೇ ಸಾಕಷ್ಟು ಕಿರಿಕಿರಿ. 'ಹೋ ನಾನೇನು ಕೇರ್ [illegible] ಮಾಡೋದಿಲ್ಲ' ಎನ್ನುವ ದರ್ಪಶಾಹೀ [illegible] ಭಾವವು ಆ ಕ್ಷಣಕ್ಕೆ ಮಾತ್ರ ಸರಿಹೋದೀತು. ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಯಾರಾದರೂ ನಮಗೆ ಕೆಟ್ಟದ್ದನ್ನು ಕ್ರ[illegible] ತಂದರೆ, ಅದರ ಪರಿಣಾಮ ಅಷ್ಟು ಗಂಭೀ[illegible] ಲಿಕ್ಕಿಲ್ಲ. ಅದೇ, ಅವರು ಹೀನಾಯದ ಅಥವಾ ನಿಂದೆಯ ಮಾತನಾಡಿದರೆ, ಅದು ಮನದ ಒಂದು ಮೂಲೆಯಲ್ಲಿ ಉಳಿದುಕೊಂಡುಬಿಡುತ್ತದೆ, ಮಾಸುವುದೇ ಇಲ್ಲ.

ದಂತಿವೆ!) ಹಾಗೆ ಹೇಳುವಾಗ ಅವನು ನಿಮಗಾದ ತೊಂದರೆಯನ್ನು ಗಮನಿಸಿರುವುದೇ ಇಲ್ಲ. ಇಂಥದೇ ಒಂದು...ಪ್ರಸಂಗದಲ್ಲಿ ಸುಮಾರು ೨೫ ವರ್ಷಗಳ ಹಿಂದೆ ನನ್ನ ಒಬ್ಬ ಗೆಳೆಯನೊಟ್ಟಿಗಿನ ಸಂಭಾಷಣೆಯ ಒಂದು ತುಣುಕನ್ನು ಕೊಡುವೆ: ನಾನು:—ದುಡ್ಡಿನ ವಿಚಾರದಲ್ಲಿ ನಿನ್ನಷ್ಟು ತೊಂದರೆ ಕೊಟ್ಟ ಗೆಳೆಯರು ಇದುವರೆಗೆ ಇನ್ನಾರೂ ಆಗಿಲ್ಲ.

ಆತ:—ಏನೇನೊ ನಾನಾದರೂ ನಿನಗ ತ್ರಾಸು ಕೊಟ್ಟಷ್ಟು ಇನ್ನಾರಿಗೂ ಕೊಟ್ಟಿಲ್ಲ!

ಇಂಥ ಅನೇಕಾನೇಕ ಸಣ್ಣ, ದೊಡ್ಡ ಪ್ರಸಂಗಗಳು ನಮಗೆ ಕೊಡುವ ಜಿರಿಜಿರಿ ಹಿಂಸೆಗಳಿಂದ ಪಾರಾಗುವ ಬಗೆ ಇದೆ. ಅದೆಂದರೆ '**ಜನ ಇರೋದೇ ಹೀಗೆ**' ಎಂಬ ನಿಲುವನ್ನು ತಾಳು-ವುದು! ಹಾಗೆ ಮಾಡದೇ ಹೋದೆವೋ ಅವರನ್ನು ಕಳಿಸಲಾಗದೇ ಸದಾ ಒದ್ದಾಡುವುದು ನಿಶ್ಚಿತ. ಈ ನಿಲುವಿನ ಇನ್ನೊಂದು ದೊಡ್ಡ ಪ್ರಯೋಜನ ಎಂದರೆ, [illegible] ಶಿಕ್ಷಣದ ವಿವಿಧ ಪ್ರಸಂಗಗಳಲ್ಲಿ 'ಪ್ರತೀಕಾರದ ಪ್ರಶ್ನೆ' ಏಳುವುದಿಲ್ಲ. ಯಾರ ಬಗ್ಗೆಯೇ ಆಗಲಿ ನಮ್ಮ [illegible] ನ್ಯಾಯವಾದದ್ದೇ? ಇಷ್ಟರೂ ಒಂದಿಲ್ಲೊಂದು ರೀತಿಯಲ್ಲಿ ಅವರು ಶಿಕ್ಷಿಸದೇ ಬಿಡುವುದಿಲ್ಲ. ಆಗ ಅಲ್ಲಿದ್ದವರ ಇನ್ನಾದಾಗಲಾದರೂ. (ಕೊನೆಗೂ ನಮ್ಮ ಕೈ [illegible] ಮುಂದೆ [illegible] ದಾಗ ಪ್ರಟಿದೇಳದೆ ಬಿಡದು-) ಅಂತೂ ಅದರಿಂದ ನಮ್ಮ ಮನಸ್ಸಿಗೇ ಹೆಚ್ಚಿನ ಕಳವಳ. ಅಲ್ಲದೆ ಹತ್ತಾರು ಜನರೊಡನೆ ವ್ಯವಹರಿಸುತ್ತಲೇ ಇರು-

## ವರಗಳ ಮಾರಾಟ

ದನಗಳ, ಕುರಿಗಳ, ಸಂತೆ ನಡೆಯುವುದನ್ನು ಎಲ್ಲರೂ ನೋಡಿದ್ದಾರೆ. ಆದರೆ ವರಗಳ ಮಾರಾಟದ ಸಂತೆ ನಡೆಯುವುದನ್ನು ಯಾರೂ ಕೇಳಿರಲಿಕ್ಕಿಲ್ಲ. ಬಿಹಾರ ರಾಜ್ಯದ ಮಧುಬನಿ ಜಿಲ್ಹೆಯಲ್ಲಿರುವ ಸೌರಥ ಎಂಬ ಹಳ್ಳಿಯಲ್ಲಿ ಪ್ರತಿ ವರುಷವೂ ನೂರಾರು ಯುವಕರು ತಮಗೇನಾದರೂ ಒಳ್ಳೆಯ ಮನೆತನದ ಹೆಣ್ಣು ಸಿಗುತ್ತದೇನೋ ಎಂಬ ಆಶೆಯಿಂದ ಇಲ್ಲಿ ಕಲೆಯುತ್ತಾರೆ.

ಉರಿಬಿಸಿಲಿನಲ್ಲಿ ಈ ಯುವಕರು ಗಿಡದ ನೆರಳಿನಲ್ಲಿಯೋ, ಬೇರೆ ಯಾವುದಾದರೂ ಆಶ್ರಯದ ಕೆಳಗೋ ಕುಳಿತುಕೊಳ್ಳುವರು.

ತಮ್ಮ ಹೆಣ್ಣು ಮಕ್ಕಳಿಗಾಗಿಯೋ ತಮ್ಮ ಅಕ್ಕ ತಂಗಿಯರ ಸಲುವಾಗಿಯೋ ವರಗಳನ್ನು ಹುಡುಕುವ ಜನರೂ ಅಲ್ಲಿ ಬರುವುದುಂಟು.

ಅಲ್ಲಿ ಕುಳಿತ ಯುವಕರ ಲಕ್ಷ್ಯವೆಲ್ಲ ಈ ಕನ್ಯಾಪಿತೃಗಳ ಮೇಲೆಯೇ ಇರುವುದು. ಯಾರಾದರೂ ಬಂದು ತಮ್ಮ ಬಗ್ಗೆ ವಿಚಾರಿಸುವರೋ ಏನೋ ಎಂಬ ಆಶೆ ಅವರಿಗೆ.

'ಸೌರಥ ಸಭಾ' ಎಂದು ಕರೆಯಲ್ಪಡುವ ಈ ಸಂಪ್ರದಾಯ ಕಳೆದ ನಾಲ್ಕು ನೂರು ವರುಷಗಳಿಂದ ನಡೆದುಕೊಂಡು ಬಂದಿದೆಯಂತೆ.

ಇಲ್ಲಿ ಬರುವ ಜನರು ಕೇವಲ ಮೈಥಿಲಿ ಬ್ರಾಹ್ಮಣರು. ಈ ಜಾತ್ರೆ ಪ್ರತಿ ವರುಷ ಐದು ದಿನಗಳ ವರೆಗೆ ನಡೆಯುವುದು. ಕಳೆದ ವರ್ಷ ಮೇ ೨೮ ರಿಂದ ಜೂನ್ ೨೮ ವರೆಗೆ ಇದು ನಡೆಯಿತು. ಯಾವುದೇ ಕನ್ಯಾಪಿತೃಗಳು ಭಾವೀ ವರನನ್ನು ಆಲಿಸಿದ ನಂತರ, ವರದಕ್ಷಿಣೆ, ವರೋಪಚಾರ ಮುಂತಾದ ಬಗೆಗೆ ಮಾತುಗಳು ತಕ್ಷಣವೇ ಶುರುವಾಗುವವು.

ಹಣದುಬ್ಬರದ ಕಾರಣ ವರದಕ್ಷಿಣೆಯ ರೇಟು ಕೂಡ ಈ ವರ್ಷ ಕಳೆದ ವರ್ಷಕ್ಕಿಂತ ಜಾಸ್ತಿಯಾಗಿತ್ತಂತೆ.

**ಆರ್. ಕೆ. ನರಗುಂದ**

ವಾಗ ಈ ಬಗೆಯ ತಳಮಳ ಎಡೆಬಿಡದೆ ಕಾಣಿಸಿ ಕೊಳ್ಳುವುದು.

ಸಾರಾಂಶ: ಯಾರೊಬ್ಬರೂ ನಮಗೆ '...ಪು ಬಗೆದಿರಲಿ' ನಮ್ಮನ್ನು ಟೀಕಿಸಿರಲಿ, ನಿಷ್ಠುರತೆಯಿಂದ ವರ್ತಿಸಿರಲಿ, ಸಿಟ್ಟಿನ ಭರದಲ್ಲಿ ಬೈದಾಡಿರಲಿ, ಅ...ಆ... ಪ್ರಸಂಗಾನುಸಾರ ಮತ್ತು ನಮ್ಮ ನಮ್ಮ ಸ್ವಭಾವಾನುಸಾರ ಆ ಅದಕ್ಕೆ ನಮ್ಮ ಪ್ರತಿಕ್ರಿಯೆ ತೋರಿಸೋಣ. ಅನಂತರ ಮಾತ್ರ ಅವರ ನಡತೆಯ ಬಗ್ಗೆ, ಕೃತ್ಯದ ಬಗ್ಗೆ ತಲೆ ಕೆಡಿಸಿಕೊಳ್ಳೋಣ ಬೇಡ.

ಪಿ. ಯು. ಸಿ. ಯಲ್ಲಿರುವ ಮಗಳು ಮನೆ ತುಂಬ ತನ್ನ ವಸ್ತು-ಬಟ್ಟೆಗಳನ್ನು ಹರವುತ್ತಾಳೆ. ತಾಯಿಯಾದ ನೀವು ತಿಳಿಸಿ ಹೇಳುತ್ತೀರಿ, ಬೈಯುತ್ತೀರಿ. ಒಂದಲ್ಲ ಹತ್ತು ಬಾರಿ ನೀವೇ ಎತ್ತಿ ಇಡುತ್ತೀರಿ. ಊಹುಂ. ಅವಳ ನಡತೆಯಲ್ಲಿ ಕಿಂಚಿತ್ತೂ ಬದಲಾವಣೆ ಇಲ್ಲ... 'ಈಗಿನ ಕಾಲದ ಹುಡುಗಿಯರೇ ಹೀಗೆ' ಎಂದು, ನೀವೇ ಸಮಾಧಾರಿಸಿಕೊಳ್ಳದೇ ಅನ್ಯ ದಾರಿ ಇಲ್ಲ. ನೀವು ಗಂಡ-ಹೆಂಡತಿ ಇಬ್ಬರೂ ನೌಕರಿ ಮಾಡ್ತೀರಿ. ಮನೆಯಲ್ಲಿರುವ ಮುದಿ ತಂದೆ ನೆರವಾಗುವುದಂತೂ ಇಲ್ಲ. ಬದಲಾಗಿ, ಅದೇಕೆ ಹೀಗೆ? ಇದೇಕೆ ಹಾಗೆ-ಎಂದು ತಕರಾರು ಮಾಡುತ್ತಲೇ ಇರುವ. ಜೊತೆಗೆ ಕೊಂಕು ಮಾತು. ಅಲ್ಲದೇ "ನನ್ನನ್ನು ಯಾರೂ **care** ಮಾಡ್ತಾನೇ ಇಲ್ಲ" ಎಂಬ ಸೊಲ್ಲು ಆಗೀಗ ಅವರಿಂದ ಇದ್ದದ್ದೆ. ಆಗ ಮಗನಾದ ನೀವು ಏನು ಮಾಡಬಲ್ಲಿರಿ? "ಈ ಮುದುಕರ ಸ್ವಭಾವವೇ ಹೀಗೆ" ಎಂದು ತಿಳಿಯಬೇಕಲ್ಲವೆ. ಇತ್ತ ಮುದುಕರೂ ಮಕ್ಕಳ ವಿಷಯದಲ್ಲಿ ಹಾಗೆ ಭಾವಿಸಿದರೆ...? ತಪ್ಪೇನಿಲ್ಲ!

ನಾಳಿನ ರವಿವಾರ ಒಂದು ಸಮಾರಂಭ. ಹೊಸ ಬಟ್ಟೆ ಹೊಲೆ ಹಾಕಿದ್ದೀರಿ. ಟೇಲರ್ ಮಹಾಶಯನಿಗೆ ಮೂರು ದಿನ ಮುಂಚಿತ ಅದನ್ನು ಕೊಡಲು ಹೇಳ್ತೀರಿ. ಅವನು ಒಪ್ಪಿಯೂ ಇರ್ತಾನೆ. ಆ ಗುರುವಾರ ಸಿದ್ಧವಾಗಿಲ್ಲ. ಶುಕ್ರವಾರ ಹೋಗಿ ಕೇಳ್ತೀರಿ... ಉತ್ತರ "ಅದನ್ನು ಹೊಲಿಯುವುದಕ್ಕೆ ತಗೊಂಡವ ಈ ದಿನ ಕೆಲಸಕ್ಕೆ ಬಂದಿಲ್ಲಾರೀ ನಾಳೆ ಖಂಡಿತ ಕೊಡುವೆ." ಆಗ "ಬೆಳಿಗ್ಗೇನೆ ಬೇಕು" ಅಂತೀರಿ "ಹೂಂ..." ಎನ್ನುವ. ಶನಿವಾರ, ಬೆಳಗಿನಲ್ಲಿ ಅವನಲ್ಲಿಗೆ ಹೋಗ್ತೀರಿ. ಆಗ ಅವನು ನಿಮಗೆ ಬಟ್ಟೆಯನ್ನೇನು ಕೊಡುವುದಿಲ್ಲ. ಒಂದು ಗ್ಲಾಸ್ ಚಹಾ ತರಸಿಕೊಟ್ಟು "ಸಂಜೆಗೆ ೧೦೦% ತಯಾರಾಗಿರ್ತದೆ ಬರ್ರಿ" ಅಂತಾನೆ. ಏನು ಮಾಡೋದು? ಸಿಂಪಿಗರ ಕಸಬೇ ಹಾಗೆ! ಅಲ್ಲವೆ.

ಅಂಗಡಿಗೆ ಹೋಗ್ತೀರಿ, ನಿಮಗೆ ಬೇಕಿದ್ದ, ಮಹತ್ವದ ವಸ್ತುವಿನ ಖರೀದಿ ಮಾಡ್ತೀರಿ. ಆ ವ್ಯಾಪಾರಿ ನಯವಾಗಿ ಮೋಸಮಾಡ್ತಾನೆ— ಹಳೆಯದನ್ನು ಕೊಟ್ಟೋ ಇಲ್ಲವೆ ದುಬಾರಿ ಬೆಲೆ ಹೇಳಿಯೋ. ಮರಳಿ ಅವನಲ್ಲಿಗೆ ಹೋಗಿ ತಕರಾರು ಮಾಡಿದರೆ ವಿಶಿಷ್ಟ ರೀತಿಯಲ್ಲಿ ಸಮರ್ಥಿಸಿಕೊಳ್ತಾನೆ. ಅನೇಕ ವ್ಯಾಪಾರಿಗಳು ಹಾಗೇನೇ. ಏನು ತಾನೇ ಮಾಡಬಲ್ಲಿರಿ? ಹೀಗೆ ಸಣ್ಣ ವಿಷಯಗಳಲ್ಲಿ ಈ ಬಗೆಯ ಉದಾರ ನಿಲುವನ್ನು ತಳೆಯದೆ ಹೋದಲ್ಲಿ ಇತರರ ಮಾತು, ಕೆಲಸ, ನಡತೆಗಳಿಂದ ನಮ್ಮ ಮಾನಸಿಕ ಅಸ್ವಾಸ್ಥ ದಿನದಿಂದ ದಿನಕ್ಕೆ ಹೆಚ್ಚುತ್ತ ಹೋದೀತು.

*

ಇದೊಂದು ನಡೆದ ಘಟನೆ, ನೆರೆಯ ಮನೆಗಳಲ್ಲಿದ್ದ ಇಬ್ಬರು ಗೃಹಿಣಿಯರು ಅತೀವ ಅನ್ಯೋನ್ಯವಾಗಿ ಇದ್ದರು. ಅವರಲ್ಲಿ ಒಬ್ಬಾಕೆ ಮಧ್ಯವಯಸ್ಸಿನಲ್ಲಿ ತೀರಿಕೊಂಡಳು. ಗೆಳತಿಯ ಮಕ್ಕಳು ಅನಾಥವಾದುವೆಂದು ಇನ್ನೊಬ್ಬ ಗೃಹಿಣಿ ಅವುಗಳ ಯೋಗಕ್ಷೇಮವನ್ನು ವರ್ಷಗಟ್ಟಲೆ ನೋಡಿಕೊಂಡಳು, ಈ ಅತಿಯಾದ ನಂಟು ಬೇಡವೆಂದು ಗಂಡನು ಆಗೀಗ ಎಚ್ಚರಿಸುತ್ತಲೇ ಇದ್ದ; ಅವಳು ಅಲಕ್ಷಿಸಿದ್ದಳು. [ಸ್ವರ್ಗದಲ್ಲಿದ್ದ ಗೆಳತಿ ಹರಸಿಕೊಂಡಾಳು!] ಆದರೆ ಆ ಮಕ್ಕಳು ದೊಡ್ಡವಾದ ನಂತ್ರ

ಇವಳನ್ನು ಹಚ್ಚಿಕೊಳ್ಳಲಿಲ್ಲ. ಇವಳಿಗೆ ಬೇಸರ. ಅನಂತರ ತನ್ನ ಖಾಸಾ ತಮ್ಮನ ಎಸ್. ಎಸ್. ಸಿ ಅಭ್ಯಾಸಕ್ಕೆ ತಮ್ಮ ಚಿಕ್ಕ ಮನೆಯಲ್ಲಿ ಅವಕಾಶ ವಿಲ್ಲದಾಗ, ಗೆಳತಿಯ ಮನೆಯ ಒಂದು ಹೆಚ್ಚಿನ ಕೋಣೆಯನ್ನು ಆ ಮೂರು ತಿಂಗಳ ಮಟ್ಟಿಗೆ ಕೇಳಿದಳು— ಸಿಕ್ಕೇ ಸಿಗುವುದೆಂಬ ಖಾತ್ರಿಯಿಂದ, ಆದರೆ ಆ ವಿಧುರ ಕೊಡಲಿಲ್ಲ! [ಮನಸ್ಸು ಮಾಡಿದ್ದರೆ ಅಸಾಧ್ಯವೇನೂ ಇರಲಿಲ್ಲ.] ಇವಳಿಗೆ ಕಡುಕೋಪ, ಅಸಹಾಯದ್ದು! ಮುಂದೆ ಅವಳು ಆ ಮನೆಯ ಉಸಾಬರಿಯನ್ನೇ ಬಿಟ್ಟಳು. ಇದರ ವ್ಯಂಗ್ಯವೆಂದರೆ ಆ ಇಬ್ಬರು ಗಂಡಸರು ತಮ್ಮ ನೆರೆಹೊರೆತನದ ಮೊದಲ ವರ್ಷದಿಂದ ಹೇಗಿರಬೇಕೊ ಹಾಗೆಯೇ ಇದ್ದಾರೆ. ಈಗಲೂ, ["ನಮಸ್ಕಾರ, ಆಫೀಸಿಗೆ ಹೊರಟಿರಾ?" "ಹೇಗಿದ್ದೀರಿ?" ಇತ್ಯಾದಿ ಮಾತುಗಳಿಂದ!] ಯಾರ ವಿಷಯವನ್ನೇ ಆಗಲಿ ಅತಿಯಾಗಿ ಮೈಮೇಲೆ ತಗೊಂಡದ್ದರ ಪರಿಣಾಮವಿದು. ಅನೇಕರ ಆಫೀಸ್ ಕೆಲಸಗಳಲ್ಲಿಯೂ ಒದಗಿ ಬರುವಂತಹದು. ನೀವು ಬಹಳ sincere ಆಗಿ ದುಡೀತೀರಿ, ಆದರೂ ಮೇಲಧಿಕಾರಿಯು ಅದನ್ನು ಲೆಕ್ಕಕ್ಕೆ ಹಿಡಿಯದೇ ನಿಮ್ಮ ಬಗ್ಗೆ ಯಾವುದೇ consideration ತೋರಿಸದೇ ಇರಬಹುದು. ನಿಮ್ಮ ಆಪ್ತೇಷ್ಟರ ವಿಷಯವೂ ಹಾಗೇನೆ. ಹಲವಾರು ಬಳಗದವರಿಗೆ ಉಪಕಾರ ಮಾಡ್ತಾನೆ ಇರ್ತೀರಿ. ಮುಂದೊಮ್ಮೆ ನಿಮ್ಮ ಮನುಷ್ಯನ ತಂದೆಯ ಮೇಜರ್ ಶಸ್ತ್ರಕ್ರಿಯೆಗೆ ನೀವು ಹಣ ಒದಗಿಸಬೇಕು. ಹಲವು ಸಾವಿರ ರೂಪಾಯಿಗಳನ್ನು, ಆದರೆ ಅವರಿಂದ ನೆರವು ಸಿಕ್ಕುವುದಿಲ್ಲ. ನಿಮ್ಮಿಂದ ವಿಶೇಷ ಉಪಕೃತಿ ಹೊಂದಿದ ಬೇರೆಯವರಿಂದಲೂ ಇದೇ ಪ್ರತಿಕ್ರಿಯೆ.

ತಿಳಿಯಬೇಕಾದ ಮಾತೇಂದರೆ ನಮ್ಮಲ್ಲಿ ಉಪಕಾರ ಭಾವವೇ ಕ್ಷಣಿಕವಾಗಿರುತ್ತದೆ: ಕೆಲವು ಕಾಲದ ವರೆಗೆ ಮಾತ್ರ ಉಳಿದುಕೊಂಡು ಬರುತ್ತದೆ. ಅದರಿಂದ ಉಪಕಾರ ಮಾಡಿಸಿ ಕೊಂಡವರಿಂದ ಕಾಲಕ್ರಮದಲ್ಲಿ ಏಕ ಪ್ರಕಾರವಾದ ಕೃತಜ್ಞತೆಯನ್ನು ಅಪೇಕ್ಷಿಸಿದರೆ ನಮ್ಮಂಥ ವ್ಯವಹಾರ ಶೂನ್ಯರು ಬೇರಾರೂ ಇರಲಿಕ್ಕಿಲ್ಲ! ಗುರು ಶಿಷ್ಯ ಸಂಬಂಧಕ್ಕೂ ಈ ಮಾತು ಅನ್ವಯಿಸುವುದು.

ಹಾಗೆ ನೋಡಿದರೆ ಇಂದಿನ ವ್ಯಾವಹಾರಿಕ ಜಗತ್ತಿನಲ್ಲಿ ಮನುಷ್ಯ-ಮನುಷ್ಯರ ಸಂಬಂಧಗಳೇ ಅತ್ಯಂತ ಚಂಚಲ ಹಾಗೂ ಅಡ್ಡಾದಿಡ್ಡಿ ಇರುತ್ತವೆ. ರಕ್ತಸಂಬಂಧ ಹಾಗೂ ಅಂತಃಕರಣವಿದ್ದಲ್ಲಿ ಇದು ಇನ್ನೂ ಅಷ್ಟು ಅನಿಶ್ಚಿತ! ಹೆಂಡತಿ-ಗಂಡ, ತಂದೆ-ಮಕ್ಕಳು, ಆಫೀಸಿನ ಸಹೋದ್ಯೋಗಿಗಳು ಇಂಥ ಸಂಬಂಧಗಳಲ್ಲಿ ಎಲ್ಲಾ ಕಾಲಕ್ಕೂ ಮನಸ್ಸಿನ ಶಾಂತತೆ ಸ್ತಿಮಿತಗಳನ್ನು ಕಾಯ್ದುಕೊಳ್ಳುವುದು ಸಾಧ್ಯವಾಗದು. ಅದಕ್ಕಾಗಿ ನನ್ನ ನಿಖರವಾದ ಸಲಹೆಯೆಂದರೆ **ಯಾರೊಡನೆಯೇ ಆಗಲಿ ತುಸು ಅಂತರವಿಟ್ಟುಕೊಂಡು ವ್ಯವಹರಿಸುವುದು.** ಇದರ ಪಡಿ ನೆಳಲೆಂದರೆ ಯಾರೊಡನೆಯೂ ಇರುಸುಮುಸಿ, ಜಗಳಗಳಿಗೆ, ಹಾಗೂ ಆ ಮೂಲಕವಾದ ಮನೋಕ್ಲೇಶಕ್ಕೆ ಎಡೆಯಿಲ್ಲ. ಯಾರೇ ಇರಲಿ ಸಾಧ್ಯವಾದಷ್ಟು ಕೂಡಿಕೊಂಡು ಹೋಗೋದು. ವಿರಸದ, ನಮಗೆ ಬೇಸರಬರಿಸುವ ಸಂದರ್ಭಗಳಿ





ದ್ದರೂ— 'ಜನ ಇರೋದೇ ಹೀಗೆ' ಎಂಬ ಸೂತ್ರವನ್ನೂ ಅನ್ವಯಿಸಿಕೊಂಡು ಅದನ್ನು ಗಣನೆಗೆ ತಾರದೇ, ಸ್ನೇಹದಿಂದಲೇ ನಡೆದುಕೊಳ್ಳುವುದು, ಆಗೂ ಬಗೆಹರಿಯದಿದ್ದರೆ, 'ಅವರಷ್ಟಕ್ಕೆ ಅವರು ನಮ್ಮಷ್ಟಕ್ಕೆ ನಾವು!' ಈ ಹಂತವನ್ನು ತಲುಪುವುದಕ್ಕೆ ನಿಮಗಿಷ್ಟವಿದ್ದರೆ ತುಸು ಅಂತರವಿಟ್ಟು ವ್ಯವಹರಿಸುವುದು ಅನಿವಾರ್ಯವಾಗುತ್ತದೆ. ಆದರೆ ರಕ್ತ ಸಂಬಂಧವಿದ್ದಲ್ಲಿ [ವಿಶೇಷತಃ ತಾಯಂದಿರು] ಇದು ನಡೆಯುವುದನ್ನು ಬಲ್ಲೆ. ಅದರಂತೆ ಪ್ರಣಯಿಗಳಿಗೂ ಇದು ಅನ್ವಯಿಸದು! ಆದರೆ ನನ್ನ ಪ್ರತಿಪಾದನೆ ನಮ್ಮ ಮನೋವೃತ್ತಿಗೆ ಸಂಬಂಧಿಸಿದ್ದಾಗಿದೆಯಲ್ಲದೆ. ನಮ್ಮ ನಡತೆ ಅಥವಾ ಕೃತಿಯಲ್ಲಿ ಅಲ್ಲ.



ಇನ್ನೊಂದೇ ಸೂತ್ರವನ್ನು ಹೇಳಿ ಮುಗಿಸುವೆ. ಅದರ ಹಿನ್ನೆಲೆ ಹೀಗಿದೆ: ನಾವು ಒಂದು ಅಪೇಕ್ಷೆ, ಗುರಿ ಇಟ್ಟುಕೊಂಡು ಕಾರ್ಯ ಪ್ರವೃತ್ತರಾಗುತ್ತೇವೆ. ಅದು ಕೈಗೂಡಲು ನಮ್ಮ ಪ್ರಯತ್ನ ಹಾಗೂ ಬಾಹ್ಯ ಪರಿಸ್ಥಿತಿಗಳ ಅನುಕೂಲ ಬೇಕು. ಹಾಗಾದಾಗ, ಕಾರ್ಯಸಿದ್ಧಿ. ಅಲ್ಲಿಗೆ ಅದು ಸರಿಯೇ. ಆದರೆ ಯಾವಾಗಲೂ ಹಾಗೆ ಆದೀತೆ? ನಾವು ಕಾರ್ಯ ಸಮರ್ಥರಿದ್ದು. ಅದಕ್ಕಾಗಿ ಸರ್ವ ಪ್ರಯತ್ನ ಮಾಡುತ್ತೇವೆ. ಜನ ಸಹಾಯವೂ ಒದಗಿ ಬಂದೀತು. ಆದರೂ ಅನೇಕ ಬಾರಿ ಕಾರ್ಯದ ಸಫಲತೆಯನ್ನು ಕಾಣೆವು. 'ನೋ-ಗ್ಯಾರಂಟಿ'ಯ ಮತ್ತಿತರ ಸೂತ್ರಗಳಿಂದ ಏನೂ ಸಮಾಧಾನ ಸಿಕ್ಕದಷ್ಟು, ಕಾರ್ಯ ವಿಫಲತೆಯು, ಮತ್ತು ಆ ಸೋಲಿನ ಗಾಯವೂ ಅತ್ಯಂತ ಆಳವಾಗಿ ಇರುತ್ತದೆ. ಆಗ ಯಾವುದೋ ಒಂದು ಕಾಣದ ಕೈ ಅಡ್ಡ ಬಂದಿತು ಎಂದು ಭಾಸವಾಗುತ್ತದೆ. ಅದನ್ನೇ 'Bad luck' ಎಂಬುದಾಗಿ ಹೆಸರಿಸುತ್ತೇವೆ. ಇಂಥ ಸೋಲು ಮೇಲಿಂದ ಮೇಲೆ ಬಂದಿದ್ದಾರೆ "ಸಾಡೇಸಾತಿ" ಎಂದು ತಿಳಿಯುತ್ತೇವೆ. ಈ "ಕಾಣದ ಕೈ"ಯ ಅಸ್ಪಷ್ಟ ಅನಿಸಿಕೆಯು ನಾವು ಕಾರ್ಯದಲ್ಲಿ ತೊಡಗಿದಾಗಲೂ ಇರಲು ಸಾಧ್ಯ. ನಾವು ಮಾಡುವ ಪ್ರಯತ್ನ, ಕಾರ್ಯಸಾಮರ್ಥ್ಯ- ಇತ್ಯಾದಿ ನಮ್ಮ ಕಾರ್ಯದ ಗುರಿಯನ್ನು ಮುಟ್ಟಲಾರದು ಎಂಬ ಶಂಕೆ ತಲೆದೋರಿದಾಗ. ನಮ್ಮ ದೈವ ಹೇಗಿದೆಯೋ ಅಂತ ಎಂದುಕೊಳ್ಳುವೆವು.

ಅವಳೊಬ್ಬ ಎಂ.ಎಸ್‌ಸಿ. ಪದವೀಧರೆ, ಬೌದ್ಧಿಕವಾಗಿ ಗಟ್ಟಿ ಹೆಣ್ಣು ಮಗಳು. ಅಪ್ಪಟ ವಿಚಾರವಾದಿ. ಹಸೆಲ್ಲ. ಅವಳ ಮಗುವಿಗೆ ಕಾಯಿಲೆ ಸಖಿತ್ ಜ್ವರ. ಡಾಕ್ಟರರಲ್ಲಿ ಅವರು ಕೊಡುವ ಔಷಧಿಯಲ್ಲಿ ಪರಮ ವಿಶ್ವಾಸ. ಆದರೂ ಮಗುವಿನ ಜ್ವರ ನಿಲ್ಲದು. ಇತ್ತ ಮಗುವಿನ ಅಜ್ಜಿ ಕಂಡ ಕಂಡ ದೇವರಿಗೆ ಹರಕೆ ನೀಡಲು ಸೂಚಿಸುತ್ತಾಳೆ. ಅದಕ್ಕೆ ಈ ವಿಚಾರವಾದಿ ಒಪ್ಪಿಯಾಳೆ? ಮುಂದೆಯೂ ಮಗುವಿನ ಜ್ವರ ನಿಲ್ಲುವುದಿಲ್ಲ. ಆಗ? 'ಆಯ್ತು. ತಾಯಿ ಹೇಳ್ತಾನೇ ಇದ್ದಾಳೆ. ಹರಕೆಯ ಪ್ರಭಾವ ಫಲ ಕೊಟ್ಟೀತು. ಮಾಡಿ ನೋಡುವಾ' ಎಂದು ಅನಿವಾರ್ಯವಾಗಿ ಒಪ್ಪುತ್ತಾಳೆ! ಇಲ್ಲಿ ಗಮನಿಸಬೇಕಾದದ್ದು, ಅವಳ ವಿಚಾರಸರಣಿಯಲ್ಲಿ ಆಗುವ ಸ್ಥಿತ್ಯಂತರವನ್ನು.

ಇಂಥ ವಿಚಾರಗಳಲ್ಲಿ ಮನಸ್ಸಿನ ದುಗುಡವನ್ನು ಕಡಿಮೆಗೊಳಿಸಲು **'ಅತೀತ'ವಾದ ಯಾವುದೊಂದು ಅಂಶದಲ್ಲಿ ವಿಶ್ವಾಸವಿಟ್ಟು ಅನನ್ಯಭಾವದಿಂದ ಅದಕ್ಕೆ ಶರಣಾಗುವುದು ಒಳ್ಳೆಯದು.** ನನಗೆ ಗೊತ್ತು. ನೀವು ಈ ಸೂಚನೆಗೆ ಸುತರಾಂ ಒಪ್ಪುವುದಿಲ್ಲ' ಎಂದು ಆದರೆ ಅನಿವಾರ್ಯ! ಇದೊಂದು **last resort** ಎಂಬಂತೆ.

ಇದರ ಪ್ರಯೋಜನಕ್ಕೆ ಒಂದು ಸಾದೃಶ್ಯವನ್ನು ಕೊಡಬೇಕೆನಿಸುವುದು; ನೀರಿನಲ್ಲಿ ಈಸಿ ಈಸಿ, ಕೈಸೋತು, ಒಬ್ಬ ಇನ್ನೇನು 'ಮುಳುಗಿ ಸತ್ತೇ ಹೋಗುವೆ' ಎಂಬ ಪತಾಕ ಪರಿಸ್ಥಿತಿಯಲ್ಲಿ ಇದ್ದಾನೆಂದು ತಿಳಿಯಿರಿ. ಆಗ ಅವನಿಗೆ ಹುಲ್ಲಿನ

ಕ್ರಿಸ್‌ಮಸ್ ಸಮಯದಲ್ಲಿ ಎಲ್ಲೆಡೆಯಲ್ಲೂ ಹೆಂಗಸರು, ಗಂಡಸರು ಮತ್ತು ಮಕ್ಕಳು ಚರ್ಚಿನಲ್ಲಿ ಸೇರಿ ಕ್ರಿಸ್ತನ ಪವಾಡ ನಾಟಕಗಳನ್ನು ಭಕ್ತಿಯಿಂದ ನೆನೆಸಿಕೊಳ್ಳುತ್ತಾರೆ— ನನಗೆ ಸದಾ ನೆನಪಾಗುವ ನೈಜ ಘಟನೆಯೊಂದು ಪವಾಡ ನಾಟಕದಷ್ಟೇ ಅದ್ಭುತವಾದದ್ದು.

ತರುಣ ಪಾದ್ರಿಯೊಬ್ಬನ ಬದುಕಿನಲ್ಲಿ ನಡೆದ ಘಟನೆಯಿದು. ಅವನು ಇದ್ದ ಚರ್ಚ್ ಅತ್ಯಂತ ಪುರಾತನವಾದದ್ದು. ಒಂದಾನೊಂದು ಕಾಲದಲ್ಲಿ ಆ ಚರ್ಚ್ ಬಹಳ ವೈಭವಪೂರ್ವಕವಾಗಿ ಮೆರೆದಿತ್ತು. ಸುಪ್ರಸಿದ್ಧ ವ್ಯಕ್ತಿಗಳು ಅಲ್ಲಿಗೆ ಪ್ರಾರ್ಥಿಸಲು ಬರುತ್ತಿದ್ದರು. ಬಡವರು ಹಣ



# ಮಿಲನ ತಂದ ಮೇಜು ಹಾಸು

ಸುನಂದಾ ಗುರುರಾಜ

ಮಂತರು ಎಂಬ ಭೇದವಿಲ್ಲದೆ ನೂರಾರು ಜನ ಚರ್ಚಿಗೆ ಬಂದು ಶೋಭೆಯನ್ನು ತರುತ್ತಿದ್ದರು. ಆದರೆ ಕ್ರಮೇಣ ಆ ಪಟ್ಟಣ ತನ್ನ ವೈಭವವನ್ನು ಕಳೆದುಕೊಂಡಿತು. ಚರ್ಚು ಕೂಡ ತನ್ನ ಹಿಂದಿನ ಸೊಗಸಿಲ್ಲದೆ ಅನಾಥವಾಗಿತ್ತು.

ಆದರೆ ಪಾದ್ರಿ ಮತ್ತು ಅವನ ತರುಣ ಹೆಂಡತಿಗೆ ಚರ್ಚಿನ ಮೇಲೆ ಬಹಳ ಅಭಿಮಾನ-ವಿತ್ತು. ಸುಣ್ಣ ಬಣ್ಣ ಹಾಗೂ ಸ್ವಲ್ಪ ರಿಪೇರಿ ಮಾಡಿಸಿದರೆ ಚರ್ಚು ಮೊದಲಿನಂತೆ ಆಗುವುದು ಎಂದು ದೃಢವಾಗಿ ನಂಬಿದ್ದರು. ಅದಕ್ಕಾಗಿ ಇಬ್ಬರೂ ಹಗಲಿರುಳೂ ದುಡಿಯುತ್ತಿದ್ದರು.

ಆದರೆ ಡಿಸೆಂಬರ್‌ನಲ್ಲಿ ಭಾರಿ ಮಳೆ ಬಂದಿತು. ಅದರ ಹೊಡೆತ ಪುಟ್ಟ ಚರ್ಚಿನ ಮೇಲೆ ಬಹಳ-ವಾಗಿ ಆಯಿತೆನ್ನಬಹುದು. ಏಕೆಂದರೆ ಚರ್ಚಿನ ಒಳಗೆ ಎದುರಾಗುತ್ತಿದ್ದಂತೆ ಕಾಣುವ ದೊಡ್ಡ ಗೋಡೆಯ ಗಾರೆಯೆಲ್ಲಾ ಬಿದ್ದು ಹೋಗಿತ್ತು. ಬಲು ದುಃಖದಿಂದ ದಂಪತಿಗಳು ಆ ಜಾಗ-ವನ್ನೆಲ್ಲಾ ಸ್ವಚ್ಛಗೊಳಿಸಿದರು. ಆದರೆ ಗಾರೆ ಬಿದ್ದ ಗೋಡೆಯಿಂದಾಗಿ ಇಡೀ ಚರ್ಚು ವಿರೂಪ-ವಾಗಿತ್ತು. ಅದನ್ನು ಮುಚ್ಚಲು [illegible] ಇರಲಿಲ್ಲ.

ಪಾದ್ರಿ, ದೇವರ ಇಚ್ಛೆ ಎಂದು ಸಮಾಧಾನ ತಂದುಕೊಂಡನು. ಅವನ ಹೆಂಡತಿ ಮಾತ್ರ "ಕ್ರಿಸ್‌ಮಸ್ ಇನ್ನು ಎರಡು ದಿನಕ್ಕಿದೆಯಲ್ಲಾ" ಎಂದು ನಿರಾಶೆಯಿಂದ ಅಳತೊಡಗಿದಳು.

ಅಂದು ಸಂಜೆ ದಂಪತಿಗಳಿಬ್ಬರೂ ಭಾರವಾದ ಮನಸ್ಸಿನಿಂದ, ಹತ್ತಿರದಲ್ಲಿ ನಡೆಯುತ್ತಿದ್ದ ಹರಾಜನ್ನು ನೋಡಲು ಹೋದರು. ಅಲ್ಲಿ ಹರಾಜಿನವನು ಒಂದು ಪೆಟ್ಟಿಗೆಯನ್ನು ತೆಗೆದು ಅದರಿಂದ ಚಿನ್ನ ಹಾಗೂ ದಂತದ ಕಸೂತಿ ಇರುವ ಸೊಗಸಾದ ಬಹು ದೊಡ್ಡ ಮೇಜು ಹಾಸನ್ನು ತೆಗೆದನು. ಅದು ನೋಡಲು ಬಹಳ ಸುಂದರವಾಗಿತ್ತು. ಅದರ ಉದ್ದವೇ ಸುಮಾರು ೧೫ ಅಡಿಗಳಷ್ಟಿತ್ತು. ರಾಜರ ಆಸ್ಥಾನಕ್ಕೆ ಹಾಕುವ ಹಾಗಿದೆ. ಇಂದಿನ ಕಾಲದಲ್ಲಿ ಇದನ್ನು ಯಾರು ಉಪಯೋಗಿಸುತ್ತಾರೆ ಎನ್ನುತ್ತಾ ಜನರೆಲ್ಲಾ ಸುಮ್ಮನಿದ್ದರು. ಆಗ ಪಾದ್ರಿಗೆ ಅದ್ಭುತವಾದ ಯೋಚನೆಯೊಂದು ಹೊಳೆಯಿತು. ಅವನು ತಕ್ಷಣ ಬೆಲೆ ಕೂಗಿ ಮೇಜು ಹಾಸನ್ನು ಕೊಂಡು ಕೊಂಡನು.

ಮೇಜು ಹಾಸನ್ನು ಚರ್ಚಿಗೆ ತಂದು, ಗಾರೆ

(ರಿವರೆಂಡ್ ಹಾವರ್ಡ್ ಸ್ನೈಡರ ಇಂಗ್ಲಿಷ್ ಲೇಖನದ ಆಧಾರ)

ಹೋಗಿದ್ದ ಎದುರು ಗೋಡೆಗೆ ಮೊಳೆಗಳನ್ನು ಹೊಡೆದು ಮೇಜುಹಾಸನ್ನು ಅಲ್ಲಿ ತೂಗು ಹಾಕಿದನು. ಆಗ ಬಿದ್ದು ಹೋದ ಗಾರೆಯ ಭಾಗವೆಲ್ಲಾ ಮುಚ್ಚಿಹೋಯಿತಲ್ಲದೆ. ಚಿನ್ನ ಹಾಗೂ ದಂತದ ಕಸೂತಿಯದ್ದ ಆ ಕೆಂಪು ವೆಲ್ವೆಟ್ಟಿನ ಮೇಜುಹಾಸು ದೀಪದ ಬೆಳಕಿಗೆ ಹೊಳೆಯುತ್ತಾ ಈಡೀ ಚರ್ಚಿಗೆ ಅಪೂರ್ವ ಕಾಂತಿಯನ್ನು ಕೊಟ್ಟಿತ್ತು. ಇದರಿಂದ ಹೆಮ್ಮೆ-ಗೊಂಡ ದಂಪತಿಗಳು ಹುರುಪಿನಿಂದ ಕ್ರಿಸ್‌ಮಸ್‌ಗಾಗಿ ಚರ್ಚನ್ನು ಬಹಳ ಸುಂದರವಾಗಿ ಅಲಂಕರಿಸತೊಡಗಿದರು.

ಕ್ರಿಸ್‌ಮಸ್ಸಿನ ಹಿಂದಿನ ದಿನ ಮದ್ಯಾಹ್ನ ಪಾದ್ರಿ ಚರ್ಚಿನ ಬಾಗಿಲು ತೆರೆಯುತ್ತಿರುವಾಗ, ಎದುರು ಬಸ್ ನಿಲ್ದಾಣದಲ್ಲಿ ಹೆಂಗಸೊಬ್ಬಳು ಚಳಿಯಲ್ಲಿ ನಡಗುತ್ತಾ ನಿಂತಿರುವುದನ್ನು ಗಮನಿಸಿ, "ಬಸ್ ಬರಲು ಇನ್ನೂ ಅರ್ಧ ಘಂಟೆಯಿದೆ ಒಳಗೆ ಬನ್ನಿ" ಎಂದು ಕರೆದನು.

"ಇಲ್ಲಿನ ಶ್ರೀಮಂತರೊಬ್ಬರು ಮಕ್ಕಳಿಗೆ ಪಾಠ ಹೇಳಿ ಕೊಡಲು ಉಪಾಧ್ಯಾಯನಿಗಾಗಿ ಜಾಹೀರಾತು ಕೊಟ್ಟಿದ್ದರು, ಅದನ್ನು ನೋಡಿ ಕೊಂಡು, ಈ ಊರಿಗೆ ಬಂದೆ. ಯುದ್ಧದಲ್ಲಿ ದೇಶಾಂತರ ಬಂದವಳು ನಾನು. ನನ್ನ ಇಂಗ್ಲಿಷ್ ಸರಿಯಾಗಿಲ್ಲ, ಹೀಗಾಗಿ ಇಲ್ಲಿ ನನಗೆ ಕೆಲಸ ಸಿಗಲಿಲ್ಲ ಎಂದು ಆ ಹೆಂಗಸು ತನ್ನ ಕತೆಯನ್ನು ಹೇಳಿಕೊಂಡಳು.

ನಂತರ ಆ ಹೆಂಗಸು ಅಲ್ಲೇ ಬೆಂಚಿನ ಮೇಲೆ ಕುಳಿತು ಕೊರೆಯುತ್ತಿದ್ದ ತನ್ನ ಕೈಗಳನ್ನು ಉಜ್ಜಿಕೊಳ್ಳುತ್ತಾ ಕಣ್ಣು ಮುಚ್ಚಿ ವಿಶ್ರಮಿಸಿ ಕೊಂಡಳು.

ಸ್ವಲ್ಪ ಹೊತ್ತಿನ ನಂತರ ತಲೆಬಾಗಿ ದೇವರನ್ನು ಪ್ರಾರ್ಥಿಸಿ ನಂತರ ತಲೆ ಎತ್ತಿದಳು. ಆಗ ಪಾದ್ರಿ ಚಿನ್ನ ಹಾಗೂ ದಂತದ ಕಸೂತಿಯಿದ್ದ ಮೇಜುಹಾಸನ್ನು ಸರಿಯಾಗಿ ಜೋಡಿಸುತ್ತಿದ್ದನು. ಆ ಹೆಂಗಸು ಅದನ್ನು ನೋಡಿದ ತಕ್ಷಣ ಎದ್ದು ವೇಗವಾಗಿ ಅದರ ಸಮೀಪ ಹೋಗಿ ಮೇಜುಹಾಸನ್ನೇ ದಿಟ್ಟಿಸಿ ನೋಡತೊಡಗಿದಳು.

ಪಾದ್ರಿ ಹೆಮ್ಮೆಯಿಂದ ನಗುತ್ತಾ ಮಳೆಯು ಅನಾಹುತ ಹಾಗೂ ತನಗೆ ಮೇಜುಹಾಸು ಸಿಕ್ಕ ಬಗೆಯನ್ನು ವಿವರಿಸತೊಡಗಿದ. ಆದರೆ ಹಾಸನ್ನು ಸವರುತ್ತಾ ಪರೀಕ್ಷಿಸುತ್ತಿದ್ದ ಅವಳು ಅವನ ಮಾತನ್ನು ಕೇಳಿಸಿ ಕೊಳ್ಳುತ್ತಲೇ ಇರಲಿಲ್ಲ.

"ಇದು ನನ್ನದು! ಈ ಮೇಜುಹಾಸು ನನ್ನದು! ಅಂಚಿನಲ್ಲಿ ನಮ್ಮ ಹೆಸರು ಇದೆ ನೋಡಿ." ಎಂದು ಪಾದ್ರಿಗೆ ತೋರಿಸಿದಳು.




ತಮ್ಮ ಆಡಳಿತದಲ್ಲಿ, ದೇಶದ ಕಂಪ್ಯೂಟರ್, 'ಸಂಶೋಧನೆ-ಸಾಧನೆ' ಬಹಳಷ್ಟು ಮುಂದುವರಿದಿದೆ... ಶೀಘ್ರದಲ್ಲಿಯೇ ನಿಮ್ಮ ಸ್ಥಾನವನ್ನೂ ಆವರಿಸಬಹುದು!»

ನನ್ನ ಗಂಡ ಬ್ರೂಸಲ್ಸಿನಲ್ಲಿ ನನಗೆಂದೇ ಹೇಳಿ ಮಾಡಿಸಿದ ಮೇಜುಹಾಸಿದು. ಅದೇ ತರದ ಇನ್ನೊಂದಿರಲು ಸಾಧ್ಯವೇ ಇಲ್ಲ.

ಮುಂದೆ ಕೆಲವು ನಿಮಿಷಗಳು ಪಾದ್ರಿ ಹಾಗೂ ಹೆಂಗಸು ಉದ್ವೇಗದಿಂದ ತಮ್ಮ ತಮ್ಮ ಕತೆಯನ್ನು ಹೇಳಿಕೊಂಡರು. ನಾಜಿಗಳ ಗದ್ದಲದಿಂದಾಗಿ ಮೂಲತಃ ವಿಯೆನ್ನಾದವರಾದ ಆ ಹೆಂಗಸು ಮತ್ತು ಅವಳ ಗಂಡ ಆಸ್ಟ್ರಿಯಾವನ್ನು ಬಿಡಬೇಕಾಯಿತು. ಅವರ ಗೆಳೆಯರು ಇಬ್ಬರೂ ಜೊತೆಯಾಗಿ ಪ್ರಯಾಣ ಮಾಡಬೇಡಿ ಎಂದು ಎಚ್ಚರಿಸಿದ್ದರಿಂದ, ಇವಳೊಬ್ಬಳೇ, ಸ್ವಿಜ್ಜರ್‌ಲ್ಯಾಂಡಿನ ಟ್ರೇನ್ ಹತ್ತಿದಳು. ಮನೆಯ ಸಾಮಾನುಗಳನ್ನೆಲ್ಲಾ ಸುರಕ್ಷಿತವಾಗಿ ಕಳುಹಿಸಿದ ಮೇಲೆ ತಾನು ಬಂದು ಅವಳನ್ನು ಸೇರುವುದಾಗಿ ಅವಳ ಗಂಡ ಹೇಳಿದ್ದ.

ಆದರೆ ಅವನನ್ನು ಪುನಃ ಇವಳು ನೋಡಲಿಲ್ಲ.

ನಂತರ ಅವನು ನಾಜಿಗಳ ಕೈಲಿ ಸಿಕ್ಕಿಹಾಕಿಕೊಂಡು ಸತ್ತನೆಂಬ ಗಾಳಿಸುದ್ದಿ ಇವಳಿಗೆ ಬಂದಿತು. "ಅವನನ್ನು ಒಬ್ಬನೇ ಬಿಟ್ಟು ಬಂದಿದ್ದಕ್ಕೆ ಶಿಕ್ಷೆಯೆಂಬಂತೆ ಈಗ ದಿಕ್ಕಿಲ್ಲದೆ ಊರೂರು ಅಲೆಯುತ್ತಿದ್ದೇನೆ" ಎಂದು ಕಣ್ಣೀರಿಟ್ಟಳು. ಆ ಮೇಜುಹಾಸನ್ನು ತೆಗೆದುಕೊಂಡು ಹೋಗುವಂತೆ ಪಾದ್ರಿ ಒತ್ತಾಯಿಸಿದರೂ ಅವಳು ಒಪ್ಪದೇ ಹಾಗೆ ಹೊರಟು ಹೋದಳು.

ಕ್ರಿಸ್‌ಮಸ್ ಹಿಂದಿನ ದಿನ ಸಂಜೆ ಜನ ಪ್ರಾರ್ಥನೆಗಾಗಿ ಚರ್ಚಿಗೆ ಬರತೊಡಗಿದರು. ಮೋಂಬತ್ತಿಗಳ ಪ್ರಕಾಶಕ್ಕೆ ಹೊಳೆಯುತ್ತಿದ್ದ ಚಿನ್ನ ಹಾಗೂ ದಂತದ ಕಸೂತಿಯ ಮೇಜುಹಾಸು, ಚರ್ಚಿಗೆ ಅಪೂರ್ವ ಶೋಭೆ ತಂದುಕೊಟ್ಟಿತ್ತು.

ಪ್ರಾರ್ಥನೆಯ ನಂತರ ಬಾಗಿಲ ಬಳಿ ನಿಂತಿದ್ದ ಪಾದ್ರಿಗೆ 'ಚರ್ಚು ಈಗ ಬಹಳ ಸುಂದರವಾಗಿ ಕಾಣುತ್ತದೆ' ಎಂದು ಬಹಳ ಜನ ಅಭಿನಂದಿಸಿದರು.

ಮಧ್ಯವಯಸ್ಸಿನ ಸೌಮ್ಯ ಮುಖದ ಆ ಊರಿನ ಗಡಿಯಾರದ ರಿಪೇರಿ ಅಂಗಡಿಯವನು ಮಾತ್ರ ಗಲಿಬಿಲಿ ಮುಖ ಹೊತ್ತು, ಪಾದ್ರಿಯ ಬಳಿ ಬಂದು ಮೆಲುದನಿಯಲ್ಲಿ "ಇದು ವಿಚಿತ್ರ ಬಹಳ ವರ್ಷಗಳ ಹಿಂದೆ ಬ್ರೂಸಲ್ಸಿನಲ್ಲಿ ನನ್ನ ಹೆಂಡತಿಗೆ ನಾನು ಈ ಮೇಜುಹಾಸು ಮಾಡಿಸಿಕೊಟ್ಟೆ. ವಿಯೆನ್ನಾದ ನಮ್ಮ ಮನೆಯಲ್ಲಿ ಬಿಷಪ್ ಬಂದಾಗ ಮಾತ್ರ ಮೇಜಿಗೆ ಹಾಸುತ್ತಿದ್ದೆವು. ಅವಳ ಆತ್ಮ ಸುಖವಾಗಿರಲಿ, ಅವಳನ್ನು ಒಬ್ಬಳೇ ಕಳುಹಿಸಿದ್ದರಿಂದ ನನಗೆ ಒಂಟಿತನದ ಶಿಕ್ಷೆಯಾಗಿದೆ," ಎಂದು ವಿಷಾದದ ನಿಟ್ಟುಸಿರು ಬಿಟ್ಟನು.

ಪಾದ್ರಿಯು ಉದ್ವೇಗದಿಂದ ಅವನಿಗೆ ಹಿಂದಿನ ದಿನ ಚರ್ಚಿಗೆ ಬಂದಿದ್ದ ಹೆಂಗಸಿನ ವಿಷಯವನ್ನು ತಿಳಿಸಿದನು.

ಚಕಿತಗೊಂಡ ಅವನು ಪಾದ್ರಿಯ ತೋಳನ್ನು ಅಲುಗಾಡಿಸುತ್ತಾ "ಇದು ಸಾಧ್ಯವೆ? ಅವಳು ಬದುಕಿದ್ದಾಳೆಯೆ?" ಎಂದು ಕೇಳಿದನು.

ನಂತರ ಇಬ್ಬರೂ ಸೇರಿ ಆ ಹೆಂಗಸು ಹೇಳಿದ್ದ ಶ್ರೀಮಂತನ ಮನೆಗೆ ಹೋಗಿ ಅವಳ ವಿಳಾಸವನ್ನು ತೆಗೆದುಕೊಂಡು, ಪಾದ್ರಿಯ ಕಾರಿನಲ್ಲಿ ಅವಳ ಊರನ್ನು ತಲುಪಿದರು. ಕ್ರಿಸ್‌ಮಸ್ ಮುಂಜಾನೆ ಉದಯಿಸುತ್ತಿದ್ದ ಹಾಗೆ, ಹಲವಾರು ವರ್ಷದಿಂದ ಬೇರೆಯಾಗಿದ್ದ ದಂಪತಿಗಳು ಚಿನ್ನ ಹಾಗೂ ದಂತದ ಮೇಜುಹಾಸಿನ ಕೃಪೆಯಿಂದಾಗಿ ಒಂದಾದರು. ❁



# ಪದಾರ್ಥ ಚಿಂತಾಮಣಿ

## ಬಾಸಿಂಗದ ಸಮಸ್ಯೆ: ಹುಡುಗ ಎಂದರೆ ಟಗರೇ?

-೯೩-

ಹುಡುಗನಿಗೆ ಈ ವರ್ಷವೂ **ಬಾಸಿಂಗ**ಬಲ ಕೂಡಿಬರಲಿಲ್ಲ–ಎನ್ನುತ್ತಾರೆ. ಇದರ ಅರ್ಥ ಮದುವೆಯ ಯೋಗ ಬರಲಿಲ್ಲ ಎಂದು. **ಬಾಸಿಂಗ** ಶಬ್ದದ ಅರ್ಥ ಎಲ್ಲರಿಗೆ ಗೊತ್ತು. ಮದುವೆಯ ಸಮಯ. ಅಲಂಕಾರಕ್ಕಾಗಿ ಮದುಮಕ್ಕಳ ಹಣೆಗೆ ಕಟ್ಟುವ ಮುತ್ತಿನ ಅಥವಾ ಬೇಗಡೆಯ ಮಾಲೆ, ಅಥವಾ ಕೆಲ ಪ್ರದೇಶಗಳಲ್ಲಿ ಬೆಂಡು ಬೇಗಡೆಗಳಿಂದ ನಿರ್ಮಿಸಿದ ಕಿರೀಟದಂಥ ಅಲಂಕಾರ. ಮದುವೆ ಮುಗಿಯುತ್ತಲೇ ಇದನ್ನು ವಿಸರ್ಜಿಸುತ್ತಾರೆ. ಈ ಅಲಂಕಾರ ಮದುಮಕ್ಕಳಿಗೆ ಸಾರ್ವತ್ರಿಕವಲ್ಲವಾದರೂ ಸಾಕಷ್ಟು ಪ್ರಚಾರದಲ್ಲಿದೆ. ಮರಾಠಿಯಲ್ಲಿ **ಬಾಶಿಂಗ** ಎಂಬ ರೂಪದಲ್ಲಿ ಈ ಶಬ್ದ ಕಾಣಿಸುತ್ತದೆ.

ಆದರೆ "ಬಾಸಿಂಗ" ಎಂದರೇನೆಂಬ ಗಂಟು ಸುಲಭವಾಗಿ ಬಿಡಿಸುವಂಥದ್ದಲ್ಲ. ಮರಾಠಿ ಕೋಶಕಾರ ಮೋಲ್ಸ್‌ವರ್ತನ ಪ್ರಕಾರ ಅದು **ಭಾಲಶೃಂಗ** (=ಹಣೆಯ ಕೋಡು) ಶೃಂಗ ಎಂಬುದಕ್ಕೆ ಬರೇ ಪ್ರಾಣಿ ಅಥವಾ ಪರ್ವತಗಳ ಕೋಡು ಎಂದಲ್ಲದೆ **ಅಲಂಕಾರ** (ಶೃಂಗಾರ ಶಬ್ದ ಗಮನಿಸಿರಿ) ಎಂಬರ್ಥವೂ ಇರುವುದರಿಂದಲೂ ಶೃಂಗದಂತೆ ಈ ಅಲಂಕಾರವನ್ನು ನಿರ್ಮಿಸು–ವುದರಿಂದಲೂ ಈ ವ್ಯುತ್ಪತ್ತಿ ನ್ಯಾಯವಾಗಿ ತೋರುತ್ತದೆ. ಆದರೆ ಮೋಲ್ಸ್‌ವರ್ತನ ನಂತರ ಮರಾಠಿ ವ್ಯುತ್ಪತ್ತಿಕೋಶವನ್ನು ಸಂಗ್ರಹಿಸಿದ ಪ್ರೊ. ಕುಲಕರ್ಣಿಯವರು **ಭಾಲಶೃಂಗ** ಎಂದು ವ್ಯುತ್ಪತ್ತಿ ಹೇಳಿ ಆ ಮೇಲೆ ಇವರಿಗೆ ಇದರಿಂದ ಸಮಾಧಾನವಿಲ್ಲ ಎಂದು ತೋರಿಸಲು (?) ಪ್ರಶ್ನಾರ್ಥಕ ಚಿಹ್ನೆ ಹಾಕಿದ್ದಾರೆ.

ವಾಸ್ತವಿಕವಾಗಿ ಬಾಸಿಂಗದ ಮೂಲ ರೂಪ ಕನ್ನಡದ **ಬಾಸಿಗ** ಉಚ್ಚಾರ ಬಲಕ್ಕಾಗಿ ಮಧ್ಯದಲ್ಲಿ ಬಿಂದು ಸೇರಿದೆ. (ಇಂಥ ಬಿಂದು ಆಗಮವಾಗುವುದು ಅಪರೂಪವಲ್ಲ. ಉದಾಹರಣೆಗೆ ಪಗಡೆಯ ಆಟದ ಪಟಕ್ಕೆ **ಪಾಸುಗೆ, ಪಾಸಂಗಿ=ಹಾಸಂಗಿ** ಎಂಬ ಹೆಸರಿದೆ) **ಬಾಸಿಗ** ಶಬ್ದ ಪಂಪನಿಗಿಂತಲೂ ಹಿಂದೆ ಕನ್ನಡದಲ್ಲಿತ್ತು, "ಬಾಸಿಗದೊಂದು ಕಂಪಿನೊಳ್" ಎಂದು ಪಂಪನ ಪ್ರಯೋಗ. ಪಂಪನಿಗಿಂತ ಒಂದು ನೂರು ವರ್ಷ ಹಿಂದಿನವರಾದ ತಮಿಳು ಆಳ್ವಾರರಾದ ನಮ್ಮಾಳ್ವಾರ್ (ಶಠಕೋಪರು) ಅವರ "ತಿರುವಿರುದಂ" ಪ್ರಬಂಧದಲ್ಲಿ **ವಾಶಿಗೈ** ಎಂಬ ರೂಪದಲ್ಲಿ ಅದು ತೋರುತ್ತದೆ. ತೆಲುಗಿನಲ್ಲಿಯೂ ಬಾಸಿಕ ಇದೆ. ಈ ಭಾಷೆಗಳಲ್ಲಿನ ಯಾವ ಪ್ರಯೋಗದಲ್ಲಿಯೂ **ಬಾಸಿಗಕ್ಕೆ** ಮದುವೆಯೊಡನೆ ವಿಶೇಷ ಸಂಬಂಧವಿಲ್ಲ. ಅದು ತಲೆಗೆ ಸುತ್ತುವ ಹೂಮಾಲೆ ಎಂಬುದು ಪಂಪನ ಪ್ರಯೋಗದಿಂದ ಖಚಿತಪಡುತ್ತದೆ. ತಮಿಳಿನಲ್ಲಿಯೂ ಇದರ ಅರ್ಥ ಹೀಗೆಯೇ. ಬಹುಶಃ ಅದು ತಲೆಯನ್ನು ಪೂರ್ತಿ ಮುಚ್ಚುವ (ಕವಿದು) ಹೂಮಾಲೆಯ ಟೊಪ್ಪಿ (ಜಲ್ಲಿ ಎಂದು ಕರಾವಳಿಯಲ್ಲಿ ಕರೆಯುತ್ತಾರೆ) ಇದ್ದೀತು.

ವಿವಾಹವಿಧಿಯನ್ನು ಬಲ್ಲ ಪುರೋಹಿತರನ್ನು ಕೇಳಿದರೆ ಅಲ್ಲಿ ಬೆಂಡಿನ ಅಥವಾ ಚಿನ್ನ ಬೆಳ್ಳಿಯ ಕಿರೀಟದಂಥ ಆಭರಣವನ್ನು ಹೇಳಿಯೇ ಇಲ್ಲ. ಅಲ್ಲಿ "ಸ್ರಜಂ ಚ ಮೂರ್ಧ್ನಿ ಬಧ್ನೀಯಾತ್"

ಎಂಬ ವಿಧಾಯಕ ಇದೆ. (ಮಾಲೆಯನ್ನು ತಲೆಗೆ ಕಟ್ಟಬೇಕು— ಆದರೆ ಅದನ್ನು ಮಾಲೆಯೆಂದು ಕರೆಯುವುದು ತಪ್ಪು. ಸ್ರಜ್ ಎನ್ನಬೇಕು— ಎಂದು ಸ್ಪಷ್ಟವಾಗಿ ಉಕ್ತವಾಗಿದೆ.)

ಹೀಗೆ ಬಾಸಿಗ, ಬಾಸಿಂಗ ಮೂಲದಲ್ಲಿ ಹೂವಿನ ಒಂದು ತರದ ಮಾಲೆ ಅಥವಾ ತುರಾಯಿಯಾಗಿತ್ತಲ್ಲದೆ ಮತ್ಯಾವ ಕೃತಕ ಕಿರೀಟ ಅಥವಾ ಆಭರಣವಾಗಿದ್ದಿಲ್ಲ. ಬಹುಶಃ ಅದು ವಿಶಿಷ್ಟವಾಗಿ ಹೆಣೆದ ಹೂಮಾಲೆ. ಅಥವಾ ಹೂ ಮತ್ತು ಎಲೆ ಬೆರೆಸಿ ನಿರ್ಮಿಸಿದ ದಂಡೆ ಇದ್ದಿರಬೇಕು. ಇದಕ್ಕೆ ಸಂಸ್ಕೃತದಲ್ಲಿ "ಸ್ರಜ್" ಎಂಬ ಅಭಿಧಾನವಿರಬೇಕು. ವನಮಾಲೆ ಎನ್ನುತ್ತಾರಲ್ಲ.

ಆದರೆ ಬಾಸಿಗ ಶಬ್ದ ಹೇಗೆ ಹುಟ್ಟಿತೆಂಬುದಕ್ಕೆ ಇದು ಉತ್ತರವಾಗಲಿಲ್ಲ. ಮರಾಠಿಯವರು ಊಹನೆಯಲ್ಲಿ ತಿದ್ದುಪಡಿಮಾಡಿ **ಭಾಲಸ್ರಕ್** (ಜ್) ಅಥವಾ **ಭಾಲ ಸ್ರಂಕ** ಮಾಡಿದರೇ ಹೇಗೆ? **ಸ್ರಜ್, ಸ್ರಂಕ** ಎಂದರೆ ಒಂದು ಬಗೆಯ ಮಾಲೆ. "ಭಾಲದ" ಬದಲು "ಬಾಲ" ಇಟ್ಟುಕೊಳ್ಳಲೂ ಬಹುದು. **ಬಾಲ** ಎಂದರೆ **ಕೂದಲು**. ಆದರೆ ಬಾಲ ಅಥವಾ ಭಾಲದ "ಲ" ಕಾರ ಬಿದ್ದು ಹೋಯಿತೆಂದು ಸಾಧಿಸುವುದು ಕಷ್ಟ. ಆದ್ದರಿಂದ ಸಂಸ್ಕೃತ **ಪಾಶ್ಯಾ** ಅಥವಾ **ಪಾಶಿಕದಿಂದ ಬಾಸಿಗ** ಹುಟ್ಟಿತೆಂಬುದು ಹೆಚ್ಚು ಯುಕ್ತವಾಗಿದೆ. **ಪಾಸೀ** ಎಂದರೆ ಪ್ರಾಕೃತದಲ್ಲಿ **ಚೂಡಾ** ಅಥವಾ ತಲೆಗೂದಲ ಗಂಟು, ಸೂಡು. **ಪಾಶ್ಯಾ, ಪಾಶಿಕ** ಎಂದರೆ (ಹೂವಿನ) ಸರ, ಹಣೆಯ ಆಭರಣ (ಕೇಶವನ ಕಲ್ಪದ್ರುಮ). ಮಾಲೆಯನ್ನು ತಮಿಳಿನಲ್ಲಿ "ಕಣ್ಣಿ" (= ಪಾಶ = ಉರುಲು) ಎನ್ನುವುದುಂಟು. ಆದ್ದರಿಂದ **ಪಾಶ್ಯಾ = ಪಾಸಿಯ = ಬಾಸಿಗ.** ಕೂದಲಿಗೆ ಸುತ್ತುವ ಮಾಲೆ.

*

**ಹುಡುಗ, ಹುಡುಗಿ** ನಮಗೆಷ್ಟು ಪರಿಚಿತವೆಂದರೆ ಈ ಶಬ್ದ ಎಲ್ಲಿಂದ ಬಂತು ಎಂದು ಕೇಳುವುದೇ ಹೆಡ್ಡತನವಾದೀತು. ಆದರೆ ಇದು ಕನ್ನಡದಲ್ಲಿ ಬಹಳ ಈಚೆಗಿನ ಶಬ್ದವೆಂಬುದು ಆಶ್ಚರ್ಯಕರವಾಗಿದೆ. ಬಹುಶಃ ದಾಸಸಾಹಿತ್ಯಕ್ಕಿಂತ ಹಿಂದೆ ಇದರ ಪ್ರಯೋಗವಿಲ್ಲ. ಸಾಹಿತ್ಯ ಪರಿಷತ್ತಿನ ನಿಘಂಟು ಕೂಡ ಇದರ ನಿರುಕ್ತಿಯ ಬಗ್ಗೆ ನಿಶ್ಚಿತ ತೀರ್ಮಾನ ಮಾಡಿಲ್ಲವೆಂದು ತಿಳಿಯುತ್ತದೆ. ಕಿಟ್ಟೆಲ್ಲರು ತೆಲುಗಿನಲ್ಲಿರುವ **ಬುಡುಲಂತೆ**(= ಚಿಕ್ಕಮಗು)ಯನ್ನು ಜ್ಞಾತಿ ಪದವಾಗಿ ಕೊಟ್ಟಿದ್ದಾರೆ ಇರಬಹುದು. ಬುಡುತೆ ಕನ್ನಡದ "ಪುಟ್ಟ"(= ಚಿಕ್ಕ)ಕ್ಕೆ ಜ್ಞಾತಿ ಇರಬಹುದೆಂದೂ ಅವರ ತರ್ಕ.

ನನ್ನದೇ ಶೋಧನೆಯಲ್ಲಿ ಕೆಲ ಕುತೂಹಲಕರ ಅಂಶಗಳು ಹೊರಬಂದವು. ಪ್ರಾಕೃತದಲ್ಲಿ **ಹುಡೋ** ಎಂದರೆ ಟಗರು; ಬೃಹತ್ಸಂಹಿತೆಯಲ್ಲಿ **ಹುಂಡ** ಎಂದರೆ ಟಗರು. ಗುಜರಾತಿಯಲ್ಲಿ **ಹುಡುಂಬುದ್ದ** ಎಂದರೆ ಟಗರು ಕಾಳಗ. ಪ್ರಾಯದ ಹುರುಡಿನ ಟಗರುಗಳಲ್ಲವೇ ಕಾದುವುದು? ಇದಕ್ಕೂ ಹಿಂದೆ ಹೋದರೆ ಸಂಸ್ಕೃತದಲ್ಲಿ **ಪೃಥುಕ** ಎಂಬುದು (ಅವಲಕ್ಕಿಯಲ್ಲದೆ) ಹರಿವಂಶ ಪುರಾಣ ಮತ್ತು ಮಹಾಕಾವ್ಯದಲ್ಲಿ ಗಂಡುಮಗು ಅಥವಾ ಯಾವುದೇ ಹೊಸ ಪ್ರಾಯದ ಪ್ರಾಣಿ ಎಂಬರ್ಥದಲ್ಲಿ ಪ್ರಯೋಗವಾಗಿದೆಯೆಂದು ಮೋನಿಯರ್ ವಿಲಿಯಮ್ಸ್ ಹೇಳಿದ್ದಾನೆ. ಪೃತು-ಗ ಅಂದರೆ ಚುರುಕು ನಡೆಯುಳ್ಳವನೆಂದು ವಾಜಸನೇಯಿ ಪ್ರಾತಿಶಾಖ್ಯೆ ಹೇಳುತ್ತದೆ. ಪೃಥು-ಕ-ಗ ಪ್ರಾಕೃತದಲ್ಲಿ **ಹುಡು-ಅ** ಆಗಿ ಅಲ್ಲಿಂದ ಕನ್ನಡಕ್ಕೆ ಬಂದಿರಬೇಕು. ಪ್ರಾಣಿಗಳ ಮರಿಗಳಿಗೂ ಮಕ್ಕಳಿಗೂ ಒಂದೇ ಹೆಸರಿರುವುದು ಅಪರೂಪವಲ್ಲ. **ವತ್ಸ** ಎಂದರೆ ಕರು ಎಂದರ್ಥವಲ್ಲವೆ?

**ಪಾ.ವೆಂ.**

ಲಕ್ಷ್ಮಿಯಿಂದ ದೂರವಾದ
ಸರಸ್ವತೀ ಪುತ್ರ

# ಹೊಸಾಡ ಬಾಬುಟಿ ನಾಯಕ



**'ವೈರಸ', ಶಿರಾಲಿ**

ಬ್ರಾಝಿಲ್ ದೇಶದ ಪ್ರಖ್ಯಾತ ಕವಿ ಚಿಕೊ ಶ್ಸೋವಿಯರ್‌ರ ಮಿದುಳಿನ ವೈದ್ಯಕೀಯ ತಪಾಸಣೆ ಮಾಡಿದಾಗ ಅವರಲ್ಲಿ ಮೂರ್ಛೆ ರೋಗದ ಚಿಹ್ನೆಗಳು ಕಂಡುಬಂದವಂತೆ. ಆದರೆ ಚಿಕೊ ತಮ್ಮ ಜೀವಮಾನದಲ್ಲಿ ಒಮ್ಮೆಯೂ ಮೂರ್ಛೆ ರೋಗದಿಂದ ಬಳಲಿದವರಲ್ಲ. ತಾನು ಬರೆದ ಪುಸ್ತಕಗಳು ಈ ಹಿಂದೆ ಆಗಿ ಹೋದ ದೇಶದ ಮಹೋನ್ನತ ಸಾಹಿತಿಗಳ ಮತ್ತು ವಿಜ್ಞಾನಿಗಳ ಪ್ರೇತ ಶಕ್ತಿಗಳು ತನಗೆ ಪ್ರತ್ಯಕ್ಷವಾಗಿ ಹೇಳಿ ಬರೆಯಿಸಿದ್ದು ಎಂಬುದು ಚಿಕೊ ಅವರ ಅಭಿಪ್ರಾಯ. ೧೫೦ ಕ್ಕೂ ಹೆಚ್ಚು ಅತ್ಯುತ್ಕೃಷ್ಟ ಪುಸ್ತಕಗಳನ್ನು ಬರೆದರೂ ಯಾವ ಪುಸ್ತಕಕ್ಕೂ ಪ್ರಕಾಶಕರಿಂದ ಒಂದು ಚಿಕ್ಕಾಸನ್ನೂ ಸಂಭಾವನೆಯಾಗಿ ಪಡೆಯದೇ ಈಗ ತಮ್ಮ ೭೫ನೇ ವಯಸ್ಸಿನಲ್ಲಿಯೂ ಕಡು ಬಡವರಾಗಿಯೇ ಜೀವನ ಸಾಗಿಸುತ್ತಿದ್ದಾರೆ.

ಕೊಂಕಣಿ ನಾಟಕಕಾರ ಹೊಸಾಡ ಬಾಬುಟಿ ನಾಯಕರು ಅಂಥವರಲ್ಲಿ ಒಬ್ಬರು.

ಚಿಕೊ ಶ್ಸೋವಿಯರ್ ರೋಗಿಯಂತಿದ್ದು ಬರೆದರೆ ಹೊಸಾಡ ಬಾಬುಟಿ ನಾಯಕರು ವೈದ್ಯರಂತಿದ್ದು ಬರೆದರು. ತಮ್ಮ ನಾಟಕಗಳ ಮೂಲಕ 'ಹಾಸ್ಯ'ವೆಂಬ ದಿವ್ಯೌಷಧವನ್ನು ನಮಗೆಲ್ಲ ನೀಡಿದ ವೈದ್ಯ ಅವರು.

ಕೊಂಕಣಿ ಕನ್ನಡ ಎರಡರಲ್ಲೂ ಸುಮಾರು

೧೨೫ ನಾಟಕಗಳನ್ನು ಅವರು ಬರೆದಿದ್ದಾರೆ. ಕೊಂಕಣಿ ಭಾಷೆಗೆ ಸ್ವತಂತ್ರ ಲಿಪಿ ಇಲ್ಲದಿದ್ದರೂ ಕನ್ನಡ ಲಿಪಿಯನ್ನೇ ಬಳಸಿಕೊಂಡ ನಾಯಕರು ಕನ್ನಡ—ಕೊಂಕಣಿ ಭಾಷೆಗಳ ನಡುವಿನ ಮಧುರ ಬಾಂಧವ್ಯದ ಬೆಸುಗೆಯಾಗಿದ್ದಾರೆ. ಲಿಪಿ ಕನ್ನಡ-ವಾಗಿರುವುದರಿಂದ ಇವರ ನಾಟಕಗಳನ್ನಾಡುವುದು ಕನ್ನಡ ಬಲ್ಲ ಕೊಂಕಣಿಗರಿಗಷ್ಟೇ ಸೀಮಿತ-ವಾಗಿದೆಯಾದರೂ ಗೋವಾ, ಮುಂಬಯಿ, ಪುಣೆ ಹಾಗೂ ಕೇರಳಗಳಲ್ಲಿ ಪ್ರದರ್ಶಿಸಲ್ಪಡುವ ತಮ್ಮ ನಾಟಕಗಳಿಂದ ನಾಯಕರು ಕೊಂಕಣಿ ಜಗತ್ತಿಗೇ ಪರಿಚಿತರಾಗಿದ್ದಾರೆ.

೧೨೫ ರಷ್ಟು ಅತ್ಯುತ್ತಮ ನಾಟಕ ಕೃತಿಗಳನ್ನು ಬರೆದಿದ್ದರೂ ನಾಯಕರ ಆರ್ಥಿಕ ಸ್ಥಿತಿಯಿಂದಾಗಿ ಒಂದೂ ಪ್ರಕಟವಾಗದೆ ಎಲ್ಲವೂ ಹಸ್ತಪ್ರತಿಯಾಗಿಯೇ ಉಳಿದಿವೆ. ದುಂಬಾಲು ಬಿದ್ದು ನಾಯಕರಿಂದ ಹಸ್ತಪ್ರತಿ ಪಡೆದುಕೊಂಡು ಹೋಗಿ ನಾಟಕವಾಡುವವರು ಕೊಡುವ ಐವತ್ತೋ, ನೂರೋ ರೂಪಾಯಿ ಗೌರವಧನವೇ ತಾವು ಕೈಗೊಂಡ ಸಾಹಿತ್ಯ ಸೇವೆಗೆ ಸಿಕ್ಕ ದೊಡ್ಡ ಸನ್ಮಾನವೆಂದು ತಿಳಿದು ಇವರು ಸಂತೃಪ್ತರಾಗುತ್ತಾರೆ. ಆದರೆ ಇವರಿಗೆ ಗೌರವ ಧನದ ಮಾತಿರಲಿ ಹಸ್ತಪ್ರತಿಯನ್ನೂ ಹಿಂದಿರುಗಿಸದ ನಾಟಕ ತಂಡಗಳೂ ಉಂಟು. ನಾಟಕದ ಹಸ್ತಪ್ರತಿ ಕೊಟ್ಟ ಉಪಕಾರಕ್ಕೆ ಅದನ್ನು ಹಿಂದುರುಗಿ ಪಡೆಯಲು ಬಾಬುಟಿ ನಾಯಕರೇ ಖರ್ಚು ಮಾಡಿ ನಾಟಕ ಮಂಡಳಿಯವರನ್ನು ಹುಡುಕಿಕೊಂಡು ಹೋಗಬೇಕಾಗುತ್ತದೆ. ಹೀಗೆ ಹಸ್ತಪ್ರತಿ ಒಯ್ದವರು ಹಿಂದಿರುಗಿಸದುದ್ದರಿಂದ ಈಗ ಇವರಲ್ಲಿ ೪೦ ನಾಟಕಗಳು ಮಾತ್ರ ಉಳಿದಿರಬೇಕು. ದಕ್ಷಿಣ ಕನ್ನಡದ ಬೈಂದೂರಿನ ಒಂದು ನಾಟಕ ಮಂಡಳಿಗೆ ನಾಲ್ಕು ವರ್ಷಗಳ ಹಿಂದೆ ಕೊಟ್ಟ ನಾಲ್ಕು ನಾಟಕಗಳ ಹಸ್ತ ಪ್ರತಿಗಳನ್ನು ಹಿಂದಿರುಗಿ ಪಡೆಯಲು ಹೋಗುತ್ತಿದ್ದಾಗ, ಶಿರಾಲಿಯ ತರುಣೋತ್ಸಾಹಿಯೊಬ್ಬರ ಬಳಿಯೂ ಒಂದು ನಾಟಕದ ಹಸ್ತಪ್ರತಿ ಉಳಿದದ್ದು ನೆನಪಾಗಿ ಅದನ್ನು ಪಡೆಯಲು ಅವರು ಶಿರಾಲಿಯಲ್ಲಿಳಿದಾಗ ಅವರನ್ನು ಭೆಟ್ಟಿಯಾದೆ.

ಇವರು ನಾಟಕರಂಗಕ್ಕೆ ಪ್ರವೇಶಿಸಿದ್ದು ಕನ್ನಡ ನಾಟಕಗಳ ಮುಖಾಂತರವೇ. ಹೊನ್ನಾವರ ತಾಲೂಕಿನ ಹೊಸಾಡದಲ್ಲಿ ಜನ್ಮ ತಾಳಿದ (೩-೩-೧೯೨೮) ಇವರ ಮೂಲ ಹೆಸರು ಶ್ರೀನಿವಾಸ ವಾಮನ ನಾಯಕ ಎಂದು. ಆದರೆ ನಂತರ ಎಲ್ಲರ ಪ್ರೀತಿಗೆ ಪಾತ್ರರಾಗಿ ಖ್ಯಾತನಾಮರಾದದ್ದು ಹೊಸಾಡ ಬಾಬುಟಿ ನಾಯಕ ಎಂಬ ಹೆಸರಿನಿಂದ. ಕುಮಟಾ ಗಿಬ್ ಹೈಸ್ಕೂಲಿನಲ್ಲಿ ಮೆಟ್ರಿಕ್ ಶಿಕ್ಷಣ ಮುಗಿಸಿದ ನಂತರ ನಾಲ್ಕು ವರ್ಷ ಹೊನ್ನಾವರದ ಅಗ್ರಿಕಲ್ಚರಲ್ ಇಂಡಸ್ಟ್ರಿಯಲ್ ಬ್ಯಾಂಕಿನಲ್ಲಿ ಕೆಲಸ ಮಾಡಿದರು. ನಂತರ ಕೆಲಸ ಬಿಟ್ಟು ಹಿರಿಯರು ನಡೆಸಿಕೊಂಡು ಬಂದ ಮನೆಯ ಉದ್ಯೋಗವಾದ ಕೈಮಗ್ಗದ ಉದ್ದಿಮೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ನಾಟಕ ನೋಡುವ ಹುಚ್ಚು ಇವರನ್ನು ಕ್ರಮೇಣ ಕನ್ನಡ ನಾಟಕಗಳಲ್ಲಿ ಅಭಿ-ನಯಿಸುವಂತೆ ಮಾಡಿತು. ದಿಗ್ದರ್ಶಕರೂ ಆದರು, ಕೆಲವು ಕನ್ನಡ ನಾಟಕಗಳನ್ನೂ ಬರೆದರು.

೧೯೫೦ ರಿಂದ ಕೊಂಕಣಿ ನಾಟಕಗಳನ್ನು ಮಾತ್ರ ಬರೆಯತೊಡಗಿದರು ನಾಯಕರು. 'ವರದಕ್ಷಿಣೆ' ಇವರ ಪ್ರಥಮ ಕೊಂಕಣಿ ನಾಟಕ ಹೂಟ್ಬೂರಲ್ಲಿ ಮೊದಲ ಪ್ರದರ್ಶನ ಕಂಡು ಯಶಸ್ವಿಯಾದುದಷ್ಟೇ ಅಲ್ಲದೇ ರಾಜ್ಯ ಮತ್ತು ಹೊರರಾಜ್ಯಗಳ ಅನೇಕ ಕಡೆ ಪ್ರದರ್ಶಿತವಾಗಿ ಜಯಭೇರಿ ಬಾರಿಸಿತು. 'ಹುನುತ್ಕಾ ಫೊಟು,' 'ತಾಪತ್ರಯ,' 'ಗೋಪ್ರಸವ ಶಾಂತಿ.' 'ರಾಂಪರ್ಬುಲೆ ಏಜನ್ಸಿ,' 'ಹಾಂವ ತಾಕ್ಕಾ ಚೆಲ್ಲಿದೀನಾ,' 'ಭಾನ್ಗಡಿ ಲಗ್ನ,' 'ಜೈ ಅಲಕ್ ನಿರಂಜನ್.' 'ವಾಸ್ದೇವ ಭಟ್ಟಾಲೆ ಜ್ಯೋತಿಷ್ಯ, 'ಜಾವಚೆ ಘೂರಾ ಬರೆಕ,' 'ಆಡಕತ್ರಿತುಲೆ ಪೊಪ್ಪಳ,' 'ಋಣಾನುಬಂಧ,' ಗೋವು ಗುಡ್ಡೋ ಬಾಯ್ಲ ಲಾಂಬಿ' 'ಅಶ್ಶಿಕಶ್ಶಿ ಜಾಲ್ಲೆ?,' 'ಲಗ್ನಾ ಪತ್ತಲ್,' ಇವು ಕರ್ನಾಟಕದಲ್ಲಷ್ಟೇ ಅಲ್ಲದೇ ಗೋವಾ, ಮುಂಬಯಿ,ಪುಣೆ ಮತ್ತು ಕೇರಳದಲ್ಲಿ ಆಡಲ್ಪಟ್ಟು

ಅಪಾರ ಜನಮೆಚ್ಚುಗೆ ಪಡೆದವು.

ಸ್ವತಃ ಉತ್ತಮ ನಟರೂ ದಿಗ್ದರ್ಶಕರೂ ಆಗಿರುವ ನಾಯಕರು ಬೇರೆಯವರು ಆಡಿದ ನಾಟಕವನ್ನು ಆಸಕ್ತಿಯಿಂದ ನೋಡುತ್ತಾರೆ. ಇತರರು ಬರೆದ ನಾಟಕಗಳನ್ನು ಸಮಗ್ರ ದೃಷ್ಟಿಕೋನದಿಂದ ಅಳೆದು ಓದುತ್ತಾರೆ. ಅಷ್ಟೇ ಅಲ್ಲದೇ ಆ ನಾಟಕಗಳಲ್ಲಿ ಉತ್ತಮ ಎನಿಸಿದವುಗಳನ್ನು ತಮ್ಮ ದಿಗ್ದರ್ಶನದಡಿಯಲ್ಲಿ ಆಡಿ ತೋರಿಸುತ್ತಾರೆ. ಅದೂ ಆ ನಾಟಕದಲ್ಲಿ ಇವರೇ ಮುಖ್ಯ ನಟರಾಗಿ. “ಮಂಗಳೂರಿನ ನಾಟಕಕರ್ತರಾದ ಶ್ರೀ ರಮಾನಂದ ಚೂರ್ಯರು ಬರೆದ ‘ದೋನ ಘಡಿ ಹಾಸ್ಸುನ ಕಾಡಿ’ ಎಂಬ ನಾಟಕದ ಯಶಸ್ಸು ಆ ನಾಟಕದ ಮುಖ್ಯ ಪಾತ್ರಧಾರಿಯೊಬ್ಬನ ನಟನೆಯನ್ನಷ್ಟೇ ಅವಲಂಬಿಸಿದೆ. ಆದರೆ ಒಬ್ಬ ನಟನಿಗೆ ಅಷ್ಟೊಂದು ದೊಡ್ಡ ಪಾತ್ರ ದೊಡ್ಡ ಹೊರೆಯಾಗುತ್ತದೆ. ಈ ಪಾತ್ರವನ್ನು ಇಬ್ಬರು ಹಂಚಿಕೊಂಡು ಆಡಿದರೆ ತುಂಬಾ ಯಶಸ್ವಿಯಾಗುತ್ತದೆ. ನಾವು ಇದೇ ರೀತಿ ಪ್ರದರ್ಶಿಸಬೇಕಂತಿದ್ದೇವೆ. ರಮಾನಂದ ಚೂರ್ಯರೂ ನಮ್ಮ ಈ ರೀತಿಯ ನಾಟಕ ಪ್ರದರ್ಶನಕ್ಕೆ ಒಪ್ಪಿದ್ದಾರೆ. ಇನ್ನು ಕೆಲವೇ ದಿನಗಳಲ್ಲಿ ನಾಟಕ ಆಡುವವರಿದ್ದೇವೆ” ಎಂದರು. ಇವರು ಸಮನ್ವಯ ಮನೋಭಾವದವರು. ಅವರ ಮನಸ್ಸಿನಷ್ಟೇ ಮಾತು ಕೂಡ ಮೃದು. ತನ್ನೆದುರು ಸಣ್ಣ ಮಗು ಇದ್ದರೂ ಮನಸ್ಸಿಗೆ ಹಿಡಿಸುವಂತೆ ಮಾತುಗಳನ್ನಾಡುವದು ಅವರ ದೊಡ್ಡ ಗುಣ. ಆದರೆ ಇವೆಲ್ಲ ರಂಗದ ಹೊರಗೆ. ನಾಟಕದಲ್ಲಿ ಮಾತ್ರ ಸಂದರ್ಭಕ್ಕೆ ತಕ್ಕಂತೆ ಮಾತುಗಳನ್ನು ಬದಲಿಸಿ ಪಾತ್ರಕ್ಕೆ ಜೀವ ಕಳೆ ತುಂಬುವವರು. ಪ್ರೇಕ್ಷಕ ಸಮೂಹವನ್ನು ಮೈನವಿರೇಳಿಸುವಂತೆ ಮಾಡುವ ಚಾಕಚಕ್ಯ ಇವರ ಮಾತಿನ ಮೋಡಿಗಿದೆ. ನಾಟಕ ಸಾಮಾಜಿಕವಾಗಿರಲಿ, ಐತಿಹಾಸಿಕವಾಗಿರಲಿ ಅಥವಾ ಪೌರಾಣಿಕವಾಗಿರಲಿ ಪಾತ್ರಕ್ಕೆ ತಕ್ಕಂತೆ ನಟಿಸುವ ‘ಇವರು ಹೊಸಾಡ ಬಾಬುಟಿ ನಾಯಕರೇ?’ ಎಂದು ಪ್ರೇಕ್ಷಕರು ಕಣ್ಣು ಹುಬ್ಬು ಮೇಲಕ್ಕೇರಿಸುವಂತೆ ಮಾಡುವಂಥ ನಟನಾ ಕೌಶಲ ಇವರದು. ಕೌಟುಂಬಿಕ ನೋವು-ನಲಿವು, ಸಮಸ್ಯೆಗಳು, ಸಮಾಜದಲ್ಲಿರುವ ಅಂಕುಡೊಂಕುಗಳು, ಜನರ ವಿವಿಧ ಆಸುರೀ ಪ್ರವೃತ್ತಿಗಳನ್ನು ಮನಮುಟ್ಟುವಂತೆ ಪ್ರತಿಬಿಂಬಿಸುವ ಇವರ ನಾಟಕಗಳು ಹಾಸ್ಯಕ್ಕೂ ಅಷ್ಟೇ ಮಹತ್ವ ಕೊಟ್ಟಿವೆ. ಪ್ರತಿಯೊಂದು ನಾಟಕದಲ್ಲೂ ವ್ಯಂಗ್ಯ ಹಾಸ್ಯಗಳ ಹೊಳೆ ಹರಿಸುವುದು ಇವರ ವೈಶಿಷ್ಟ್ಯ! ನಾಟಕದ ಹೆಸರುಗಳೇ ನಮ್ಮನ್ನು ನಗಿಸಿ ಹೊಟ್ಟೆಯನ್ನು ಹುಣ್ಣಾಗಿಸುತ್ತವೆ. ನಟಿಸುವಾಗ ಇವರು ಹೇಳುವ ಹಾಡು ಕಿವಿಗೆ ಇಂಪು. ಇವರ ಅನೇಕ ನಾಟಕಗಳು ಧಾರವಾಡ ಆಕಾಶವಾಣಿಯವರಿಂದ ಬಿತ್ತರಿಸಲ್ಪಟ್ಟಿವೆ. ಬಳ್ಳೂರಿನ ಶ್ರೀಯುತ ಭಂಡಾರಕರರ ಪ್ರಯತ್ನದಿಂದ ‘ಅಲಕ್ ನಿರಂಜನ್’ ಮುಂಬಯಿಯ ಆಕಾಶವಾಣಿಯವರಿಂದ ಬಿತ್ತರಿಸಲ್ಪಟ್ಟಿದೆ.

ಈಗ ಹೊಸಾಡ ಬಾಬುಟಿ ನಾಯಕರು ಅರವತ್ತರ ವಯಸ್ಸನ್ನು ಸಮೀಪಿಸುತ್ತಿದ್ದಾರೆ. ಆರೋಗ್ಯವೂ ಹದಗೆಡುತ್ತಿದೆ. ಬಡತನವೂ ಕುಕ್ಕುತ್ತಿದೆ. ನಾಲ್ಕು ದಶಕಗಳ ಕಾಲ ಇವರು ಕೊಂಕಣಿ ಸಾಹಿತ್ಯಕ್ಕೆ, ರಂಗಭೂಮಿಗೆ ಸಲ್ಲಿಸಿದ ಸೇವೆ ಗಮನಾರ್ಹ. ಈಗಲಾದರೂ ಇವರ ಆರ್ಥಿಕ ಮುಗ್ಗಟ್ಟಿನಲ್ಲಿ ಇವರಿಗೆ ಧನಸಹಾಯ ಮಾಡಲು, ಇನ್ನು ಹಸ್ತಪ್ರತಿಯ ರೂಪದಲ್ಲಿರುವ ನಾಟಕಗಳನ್ನು ಪ್ರಕಟಿಸಲು ಕಾರ್ಯೋನ್ಮುಖರಾಗುವದು ಕೊಂಕಣಿ ನಾಟಕ ಪ್ರೇಮಿಗಳ ಕರ್ತವ್ಯ.







ವಿ. ಎಂ. ಜೋಶಿ

ಮಿಲ್ಲಿನ ಬಣ್ಣ ತಯಾರಿಕೆ ವಿಭಾಗದಲ್ಲಿ ಕಾರ್ಮಿಕನಾಗಿದ್ದ ಶಂಕರ, ನಿತ್ಯದ ರೂಢಿಯಂತೆ ಆ ದಿನ ಕೂಡ ಸರಿಯಾಗಿ ಹನ್ನೊಂದು ಗಂಟೆಗೆ ಮಧ್ಯಾಹ್ನದ ಊಟಕ್ಕಾಗಿ ಕ್ಯಾಂಟೀನಿಗೆ ಹೋದವನು, ಮಿಲ್ಲಿನ ಎಲ್ಲ ಕಾರ್ಯಗಳು ಸ್ಥಗಿತಗೊಳ್ಳುವದಕ್ಕೆ ಕಾರಣನಾದದ್ದೆ ಅಲ್ಲದೆ, ಎಲ್ಲರ ಚರ್ಚೆಗೂ ವಿಷಯವಾದ. ಅದು ನಡೆದದ್ದು ಹೀಗೆ—

ಆತ ಬರಲಿರುವ ತಿಂಗಳಲ್ಲಿ ಬೋನಸ್ ಪ್ರಮಾಣವು ಇತ್ಯರ್ಥವಾಗುವುದನ್ನೇ ಚರ್ಚಿಸುತ್ತ ಸಹೋದ್ಯೋಗಿ ನಾಗರಾಜನೊಂದಿಗೆ ಕ್ಯಾಂಟೀನಿನಲ್ಲಿ ಕಾಲಿಟ್ಟ. ನಂತರ ಇಬ್ಬರೂ ಊಟದ ಕೂಪನ್ನನ್ನು ಡೈನಿಂಗ್ ಟೇಬಲ್ ಮೇಲೆ ಬೀಸಾಕಿ, ಕುರ್ಚಿ ಎಳೆದು ಕುಳಿತರು. ಮಾಣಿ ಬಂದು ಕೂಪನ್ನನ್ನು ಎತ್ತಿಕೊಳ್ಳುತ್ತ, "ಪೂರಿಯೊ, ಚಪಾತಿಯೊ?" ಎಂದು ಕೇಳಿದ್ದಕ್ಕೆ ನಾಗರಾಜ, "ಎರಡಕ್ಕೂ ಚಪಾತಿ," ಎಂದು ಉತ್ತರಿಸಿ "ಪೂರಿ ಕೇಳಿದೊಡನೆಯೆ ಮುಂಜಾನೆ ಟಿಫಿನ್‌ಗೆಂದು ಮಾಡಿಟ್ಟು ಖರ್ಚಾಗದೆ ಉಳಿದುದನ್ನೆ ದಬ್ಬುತ್ತಾನೆ," ಎಂದು ಗೊಣಗಿದ. ಕೌಂಟರಿನಲ್ಲಿ ಕುಳಿತ ಕ್ಯಾಂಟೀನ್ ಕಂಟ್ರಾಕ್ಟರ್ ರಾವ ದುಲಾರಿಯತ್ತ ನೆಟ್ಟ ನೋಟ ಬೀರಿ, ತನ್ನ ಎರಡೂ ಅಂಗೈಗಳನ್ನು ತಿಕ್ಕುತ್ತ ಶಂಕರ, "ನಮ್ಮ ಹೊಟ್ಟೆಗೆ ಹೊಡೆದು ತನ್ನ ಹೊಟ್ಟೆ ಬೆಳೆಸಿದ್ದಾನೆ. ಸಮಯ ಬರಲಿ, ನನ್ನ ಕೈ ತೋರಿಸುವೆ," ಎಂದು ಗಂಭೀರ ಧ್ವನಿಯಲ್ಲಿ ಹೇಳಿದ.

ಆಗಲೆ ಮಾಣಿ ಎರಡು ಊಟ ತಂದು ಅವರ ಮುಂದಿಟ್ಟ. ಪ್ರತಿಯೊಂದು ಊಟದ ತಟ್ಟೆಯಲ್ಲಿ ಎರಡು ಚಪಾತಿ, ಎರಡು ಬಟ್ಟಲು ಅನ್ನ, ಒಂದೊಂದು ಬಟ್ಟಲಲ್ಲಿ ತಿಳಿಸಾರು, ಹುಳಿ, ಪಲ್ಯ ಮತ್ತು ಮಜ್ಜಿಗೆ. ಚಪಾತಿ ತಿನ್ನುತ್ತ ನಾಗರಾಜ ಕೇಳಿದ: "ಈ ಚಪಾತಿಗಳ ಎಣ್ಣೆ ಅಥವಾ ಬೆಣ್ಣೆ ಕಾಣುವುದು ಯಾವಾಗ?"

"ಆರು ವರ್ಷಗಳಿಂದ ಕ್ಯಾಂಟೀನಿನ ಕಂಟ್ರ್ಯಾಕ್ಟ ಉಳಿಸಿಕೊಂಡು ಬಂದಿರುವ ಈ ದುಲಾರಿಯು ಅಧಿಕಾರಿಗಳಿಗೆ ನಿತ್ಯ ಬೆಣ್ಣೆ ಹಚ್ಚುತ್ತಿರುವಾಗ ನಮ್ಮಂಥವರಿಗೆ ಎಲ್ಲಿಯ ಬೆಣ್ಣೆ! ಎಲ್ಲಿಯ ಎಣ್ಣೆ!" ಎಂದು ಶಂಕರ ಅಂದಾಗ ನಾಗರಾಜನಿಗೆ ಅದು ನಿಜವೆನಿಸಿ ನಗತೊಡಗಿದ.

ಈಗ ಶಂಕರ ಚಪಾತಿ ಮುಗಿಸಿ, ಅನ್ನದ ಬಟ್ಟಲುಗಳಿಂದ ಅನ್ನ ತದುಕಿ, ಸಾಂಬಾರ ಹಾಕಿಕೊಳ್ಳುವಾಗ ಅನ್ನದಲ್ಲಿ ಸತ್ತ ನೊಣ ಅವನ ದೃಷ್ಟಿಗೆ ಬಿತ್ತು. ತಕ್ಷಣ ಆತ ಸಾಂಬಾರಿನ

ಬಟ್ಟಲನ್ನು ಬದಿಗಿಟ್ಟು, ನಾಗರಾಜನಿಗೆ ನೊಣ ಬಿದ್ದಿದ್ದು ತೋರಿಸಿ, ಬದಿಯಲ್ಲಿ ಹೋಗುತ್ತಿದ್ದ ಮಾಣಿಯನ್ನು ಗತ್ತಿನಿಂದ ಕರೆದು, ಹುಬ್ಬು ಹಾರಿಸುತ್ತ, "ಇದೇನು?" ಎಂದು ತೋರು ಬೆರಳಿನಿಂದ ತೋರುತ್ತ ಕೇಳಿದ. ಅದು ನೊಣ ಎಂಬುದಷ್ಟೆ ಅಲ್ಲದೆ, ಸತ್ತ ನೊಣ ಎಂಬುದು ಮಾಣಿಗೆ ಗೊತ್ತು, ಆದರೆ ಇಂಥ ಪ್ರಸಂಗಗಳಲ್ಲಿ ಹೇಗೆ ವರ್ತಿಸಬೇಕೆಂಬುದನ್ನೂ ಅರಿತಿದ್ದ ಆತ. "ಆ ತಟ್ಟೆ ಬದಿಗಿಡಿ, ನಾನು ಬೇರೆ ಅನ್ನ ತರುವೆ," ಎಂದು ವಿನಂತಿಸುವುದನ್ನೂ ಅಲಕ್ಷಿಸಿ, ಶಂಕರ ಅನ್ನದ ತಟ್ಟೆಯನ್ನು ಎಲ್ಲರಿಗೂ ಕಾಣುವಂತೆ ಎತ್ತಿ ಹಿಡಿದು, ಅಲ್ಲಲ್ಲಿ ಊಟಕ್ಕೆ ಕುಳಿತ ಸುಮಾರು ನಾಲ್ವತ್ತು ಜನರನ್ನುದ್ದೇಶಿಸಿ, "ಎಲ್ಲರೂ ಇತ್ತ ನೋಡಿ, ಅನ್ನದಲ್ಲಿ ನೊಣ ಬಿದ್ದಿದೆ, ಯಾರೂ ಊಟ ಮಾಡಬೇಡಿ," ಎಂದು ಎತ್ತರಿಸಿದ ಧ್ವನಿಯಲ್ಲಿ ಘೋಷಿಸಿದ. ಸಾಲದ್ದಕ್ಕೆ, ನೊಣ ಬಿದ್ದ ಆ ಅನ್ನದ ತಟ್ಟೆಯನ್ನು ಪ್ರತಿಯೊಂದು ಡೈನಿಂಗ್ ಟೇಬಲ್ ಹತ್ತಿರ ಹೋಗಿ ತೋರಿಸತೊಡಗಿದ.

"ಹೇ ಭಗವಾನ್, ಏ ಕ್ಯಾ ಹುವಾ!" ಎಂದು ಗೊಣಗಿಕೊಳ್ಳುತ್ತ ರಾಮ ದುಲಾರಿ ಕೌಂಟರಿನಿಂದ ಈಚೆಗೆ ಬಂದು, ಶಂಕರನತ್ತ ಸಾಗಿ ಎಷ್ಟೋ ವರ್ಷಗಳಿಂದ ಆಪ್ತ ಮಿತ್ರನೇನೋ ಎನ್ನುವಂತೆ, ಅವನ ಹೆಗಲ ಮೇಲೆ ಕೈ ಇಟ್ಟು, ಅತ್ಯಂತ ಆತ್ಮೀಯವಾಗಿ ಹಿಂದಿಯಲ್ಲಿ, "ಇದೇನು ನಿಮ್ಮ ಕೆಲಸ? ದಯವಿಟ್ಟು ಇತ್ತ ಬನ್ನಿ, ನಿಮಗೆ ಬೇರೆ ಊಟ ಹಾಕಿಸುವೆ," ಎಂದು ತನ್ನ ಖಾಸಗಿ ಕೋಣೆಯತ್ತ ಕೈ ತೋರಿದ.

ತಿಂಗಳ ನಂತರ ಕೂಪನ್ ಕೊಡುವುದರಲ್ಲಿ ಒಂದು ದಿನ ತಡವಾದರೂ ಉರಿದೇಳುತ್ತಿದ್ದ ಇದೇ ದುಲಾರಿಯು ಇಂದು ತಪ್ಪಿನಲ್ಲಿ ಸಿಕ್ಕಿರುವುದರಿಂದಲೆ ಈ ಆಷಾಢಭೂತಿತನ ತೋರುತ್ತಿದ್ದಾನೆ ಎಂದು ಶಂಕರನಿಗೆ ಎಲ್ಲಿಲ್ಲದ ಕೋಪ ಉಕ್ಕಿ ಬಂತು. ತನ್ನ ಹೆಗಲ ಮೇಲಿದ್ದ ದುಲಾರಿಯ ಕೈಯನ್ನು ಆಚೆಗೆ ತಳ್ಳಿ, ಕೆಂಗಣ್ಣಿನಿಂದ ನೋಡಿ ಗುಡುಗಿದ, "ಮತ್ತೆ ಯಾವ ಊಟ? ಇದೇ ಅನ್ನ ತಾನೆ? ಅದೆಲ್ಲ ನಮಗೆ ಬೇಕಾಗಿಲ್ಲ. ಈಗಲೇ ನಮ್ಮೆದುರು ಬೇರೆ ಪಾತ್ರೆಯಲ್ಲಿ ಅನ್ನ ಮಾಡಿ ಊಟಕ್ಕೆ ಹಾಕುವದು. ಇಲ್ಲವಾದರೆ..."

ಅವನ ಮಾತನ್ನು ಅರ್ಧಕ್ಕೆ ತಡೆದು. ರಾಮ ದುಲಾರಿಯು ಕೈ ಜೋಡಿಸುತ್ತ ಹೇಳಿದ, "ಅದು ಮಾತ್ರ ಸಾಧ್ಯವಿಲ್ಲ. ಬೇಕಾದರೆ ನೀವು ಅಡಿಗೆ ಮನೆಗೆ ಬಂದು ಎಲ್ಲವನ್ನೂ ಪರೀಕ್ಷಿಸಬಹುದು." ಅನ್ನ ಮಾಡುವಾಗಲೆ ಆ ನೊಣ ಬಿದ್ದು ಸತ್ತಿತ್ತೆ ಅಥವಾ ತಟ್ಟೆಯಲ್ಲಿ ಅನ್ನ ಹಾಕಿದ ನಂತರ ನೊಣ ಬಿದ್ದು ಸತ್ತಿತೆ ಎಂಬುದನ್ನು ರಾಮ ದುಲಾರಿಯು ನಿರ್ಧರಿಸಬೇಕಾಗಿತ್ತು. ಮೇಲಾಗಿ, ಕೂಪನ್ ಕೊಡುವ ಈ ಗಿರಾಕಿಗಳು ಹೇಳಿದ್ದೆಲ್ಲ ಕೇಳುತ್ತ ಹೋದರೆ, ಆಗುವ ನಷ್ಟ ತುಂಬಿಕೊಡುವರಾರು? ಎನ್ನುವ ವ್ಯಾಪಾರಿ ಬುದ್ಧಿ ಬೇರೆ.

"ಇದೇ ನಿಮ್ಮ ಕೊನೆಯ ನಿರ್ಧಾರವಾದರೆ, ಇಲ್ಲಿ ಕೇಳಿ," ಶಂಕರ ತನ್ನ ಜೊತೆಯಲ್ಲಿ ನಿಂತ ಮಿಲ್ಲಿನ ನೌಕರರತ್ತ ಪೂರ್ಣ ದೃಷ್ಟಿ ಬೀರಿ, ಮತ್ತೆ ದುಲಾರಿಯನ್ನುದ್ದೇಶಿಸಿ ಆರ್ಭಟಿಸಿದ; "ಎಲ್ಲಿಯವರೆಗೆ ಬೇರೆ ಪಾತ್ರೆಯಲ್ಲಿ ಅನ್ನ ಮಾಡಿ ನಮಗೆಲ್ಲ ಊಟಕ್ಕೆ ಹಾಕುವುದಿಲ್ಲವೊ, ಅಲ್ಲಿಯವರೆಗೆ ಈ ಕ್ಯಾಂಟೀನ್ ಬಿಟ್ಟು ನಾವು ಹೊರಗೆ ಹೋಗುವುದಿಲ್ಲ. ನಮ್ಮ ಕೆಲಸಗಳನ್ನೆಲ್ಲ ಬಂದ್ ಮಾಡುವೆವು." ಅವನ ಜೊತೆಗೆ ನೆರೆದವರೆಲ್ಲ ಮುಷ್ಟಿ ಬಿಗಿ ಹಿಡಿದು, "ಹೌದು; ಅದೇ ಸರಿ," ಎಂದು ಕೈ ಎತ್ತಿ ಕೂಗಿ ತಮ್ಮ ಬೆಂಬಲವನ್ನು ವ್ಯಕ್ತಪಡಿಸಿದರು.

ಈ ಅನಿರೀಕ್ಷಿತ ತಿರುವಿನಿಂದಾಗಿ ಮುಂದೆ ಏನು ಮಾಡಬೇಕೆಂದು ತಿಳಿಯದೆ ರಾಮ ದುಲಾರಿಯು ಮತ್ತೆ ಕೌಂಟರಿನತ್ತ ಹೋಗಿ ಗದ್ದ ಕೆರೆದುಕೊಳ್ಳುತ್ತಾ ಕುಳಿತ.

ಕಾರ್ಮಿಕ ಮುಖಂಡ ಕೃಷ್ಣನ್ ಕುಟ್ಟಿಯನ್ನು ತಕ್ಷಣ ಕರೆದು ತರುವಂತೆ ಶಂಕರ ನಾಗರಾಜನಿಗೆ ಹೇಳಿ ಕಳಿಸಿದ. ಒಳಹೋಗಿ ಆ ಅನ್ನದ ಪಾತ್ರೆಯನ್ನು ಅನ್ನ ಸಹಿತವಾಗಿ ಎತ್ತಿ ತರುವಂತೆ

ಇನ್ನೊಬ್ಬ ಸಹೋದ್ಯೋಗಿಗೆ ಹೇಳಿದ. ಸನಿಹದ ಕ್ಲಿನ್ಡ್ ಡ್ರೆಸಿಂಗ್ ಟೇಬಲ್ ಮೇಲೆ ಅನ್ನದ ಆ ಕೋಳಗವನ್ನೂ ಸತ್ತ ನೊಣವಿದ್ದ ಆ ಅನ್ನದ ತಟ್ಟೆಯನ್ನೂ ಬಂದವರೆಲ್ಲ ನೋಡಿ ಪರೀಕ್ಷಿಸಲೆಂಬಂತೆ ಜೊತೆಯಾಗಿಟ್ಟ.

ತನ್ನ ಕೆಲವು ಅನುಯಾಯಿಗಳೊಡನೆ ಕೃಷ್ಣನ್ ಕುಟ್ಟಿಯು ಕ್ಯಾಂಟೀನಿಗೆ ಧಾವಿಸಿಬಂದ. ಮೊದಲು ಶಂಕರನನ್ನು ಕಂಡು ಎಲ್ಲವನ್ನೂ ತಿಳಿದುಕೊಂಡ. ಅನ್ನದ ತಟ್ಟೆಯಲ್ಲಿಯ ಸತ್ತ ನೊಣ ಮತ್ತು ಅನ್ನದ ಕೋಳಗವನ್ನೊಮ್ಮೆ ನೋಡಿದ. ನಂತರ ದುಲಾರಿಯನ್ನು ಕರೆದು ಅಧಿಕಾರವಾಣಿಯಲ್ಲಿ, "ಈ ಸತ್ತ ನೊಣ ನೋಡಿಯೂ ನೀವು ಬೇರೆ ಅನ್ನ ಮಾಡಿ ಯಾಕೆ ಹಾಕುವದಿಲ್ಲ?" ಎಂದು ಪ್ರಶ್ನಿಸಿದ.

ಗತ್ತು ಬಿಡದ ದುಲಾರಿ, "ನಾನು ಆ ಬಗ್ಗೆ ಯೋಚಿಸುತ್ತಿದ್ದೇನೆ," ಎಂದು ಚುಟುಕಾಗಿ ಉತ್ತರಿಸಿದ.

"ಓಹೋ, ಹೀಗೋ ಸಮಾಚಾರ?" ಎಂದು ಕೃಷ್ಣನ್ ಕುಟ್ಟಿಯು ಅರ್ಥಗರ್ಭಿತವಾಗಿ ನುಡಿದು ಶಂಕರನತ್ತ ತಿರುಗಿ, "ನೀವೆಲ್ಲ ಇಲ್ಲೇ ಇರಿ; ಉಳಿದೆಲ್ಲವನ್ನು ನಾನು ನೋಡಿಕೊಳ್ಳುವೆ," ಎಂದವನೆ ತನ್ನ ಅನುಯಾಯಿಗಳೊಂದಿಗೆ ಹೊರಬಂದು, ಕಾರಿಡಾರ್ ಮೂಲೆಯತ್ತ ಸಾಗಿ, ಮುಂದಿನ ಕ್ರಮಗಳ ಬಗ್ಗೆ ಖಾಸಗಿಯಾಗಿ ಚರ್ಚಿಸತೊಡಗಿದ.

ಕೇವಲ ಮೂರು ದಿನಗಳ ಹಿಂದೆ, ಬೋನಸ್ಸಿನ ಪ್ರಮಾಣವನ್ನು ನಿಗದಿಪಡಿಸಬೇಕಾಗಿದ್ದ ಆಡಳಿತ ಮತ್ತು ಕಾರ್ಮಿಕ ಪಕ್ಷಗಳ ಮಾತುಕತೆಯ ಸಂದರ್ಭದಲ್ಲಿ "ಬಹುಶಃ ಈ ಮೀಟಿಂಗ್ ಮಿಸ್ಟರ್ ಕೃಷ್ಣನ್ ಮಾತನಾಡುವ ಕೊನೆಯ ಮೀಟಿಂಗ್ ಆಗಬಹುದು" ಎಂದು ಜನರಲ್ ಮ್ಯಾನೇಜರ್ ಮಿಶ್ರಾ ಅವರು ಕೃಷ್ಣನ್ ಕುಟ್ಟಿಯತ್ತ ಕೊಂಕು ಮಾತು ಎಸೆದಿದ್ದರು. ಕೃಷ್ಣನ್ ಕುಟ್ಟಿಯ ಕಾರ್ಮಿಕ ಪಕ್ಷವು ಕಾರ್ಮಿಕರ ಬೆಂಬಲವಿಲ್ಲದೆ ಕುಸಿಯುತ್ತಿದೆ ಎಂಬುದು ಅವರ ಮಾತಿನ ಅರ್ಥವಾಗಿತ್ತು. ಕೃಷ್ಣನ್ ಕುಟ್ಟಿಗೆ ಈ ಅವಮಾನ ಸಹಿಸಲಸಾಧ್ಯವಾಗಿತ್ತು. ಹೇಗಾದರೂ ಮಾಡಿ ತನ್ನ ಪಕ್ಷದ ಬಹುಮತವನ್ನು ಈ ಜನರಲ್ ಮ್ಯಾನೇಜರಿಗೆ ಮನವರಿಕೆಯಾಗುವಂತೆ ತೋರಿಸಬೇಕು. ಇತ್ತೀಚಿನ ಕಾರ್ಮಿಕ ಕಾನೂನುಗಳ ಪ್ರಕಾರ ತಕ್ಷಣ ಬಹುಮತ ಅಥವಾ ಬೆಂಬಲ

ಸಿದ್ಧಪಡಿಸುವುದು ಸುಲಭವಾದುದಲ್ಲ. ಆದರೆ ಈ ಪ್ರಸಂಗ ಮಾತ್ರ ಅಂತಹ ಅವಕಾಶವನ್ನು ಒದಗಿಸಿದೆ. ಇದನ್ನು ತಮಗೆ ಅನುಕೂಲವಾಗುವಂತೆ ಉಪಯೋಗಿಸುವುದೆ ಸೂಕ್ತವೆಂದು ಅವರೆಲ್ಲರ ನಿರ್ಧಾರವಾಯಿತು.

ಕೃಷ್ಣನ್ ಮತ್ತೆ ಕ್ಯಾಂಟೀನಿಗೆ ಬಂದು ಕೌಂಟರಿನಲ್ಲಿದ್ದ ಫೋನ್ ಎತ್ತಿ, ಮ್ಯಾನೇಜರ್ (ಲೇಬರ್ ರಿಲೇಶನ್ಸ್) ಅವರಿಗೆ ಡಯಲ್ ಮಾಡಿದ. ಆ ಬದಿಯಿಂದ ಸಂಪರ್ಕ ದೊರೆತೊಡನೆಯೆ, ಕ್ಯಾಂಟೀನಿನಲ್ಲಿಯ ಸಂಗತಿಯನ್ನೆಲ್ಲ ಹೇಳಿ, ತಕ್ಷಣ ಬೇರೆ ಅನ್ನ ಮಾಡಿ ಊಟ ಹಾಕುವಂತೆ ರಾಮು ದುಲಾರಿಗೆ ಆದೇಶವೀಯಬೇಕೆಂದು ಆಗ್ರಹಪಡಿಸಿದ. ಆ ಬದಿಯಿಂದ ಏನು ಉತ್ತರ ಬಂತೆಂದು ಅಲ್ಲಿದ್ದವರಿಗೆ ಗೊತ್ತಾಗಲಿಲ್ಲ. ಆದರೆ ಕೃಷ್ಣನ್ ಮುಖ ಮಾತ್ರ ಕೆಂಪೇರಿತು. ರಿಸೀವರ್ ಹಿಡಿದ ಮುಷ್ಟಿ ಬಿಗಿಯಾಯಿತು. "ಸರ್, ಇದೇ ನಿಮ್ಮ ನಿರ್ಧಾರವಾದರೆ, ನಾವು ನಮ್ಮ ಕ್ರಮಗಳನ್ನು ಕೈಕೊಳ್ಳುತ್ತೇವೆ. ಸರಿಯಾಗಿ ನೆನಪಿಡಿ, ಯೂ ಹ್ಯಾವ್ ಟು ರಿಪೆಂಟ್ ಫಾರ್ ಇಟ್," ಎಂದವನೆ ಫೋನ್ ಕುಕ್ಕಿ ತನ್ನ ಅನುಯಾಯಿಗಳಿಗೆ ಸೂಚನೆಗಳನ್ನು ನೀಡತೊಡಗಿದ.

ಚಿಪ್ಪರ್ ಹೌಸ್, ಪಲ್ಪ್ ಮಿಲ್, ಸೋಡಾ ರಿಕವರಿ, ಪವರ್ ಹೌಸ್, ಪೇಪರ್ ಮಷಿನ್, ಪೇಪರ್ ಗೋಡೌನ್—ಎಲ್ಲ ವಿಭಾಗಗಳಲ್ಲಿಯೂ ಕಾರ್ಮಿಕರು ಕೆಲಸವನ್ನು ಸ್ಥಗಿತಗೊಳಿಸಿದರು. ಸರಿಯಾಗಿ ಊಟವನ್ನು ಒದಗಿಸಲಾರದ ಆಡಳಿತ ವರ್ಗದ ನೀತಿಯನ್ನು ಖಂಡಿಸತೊಡಗಿದರು. ಊಟ ದೊರೆಯಲಾರದವರು ಕ್ಯಾಂಟೀನಿನಲ್ಲಿ ಕಾದು ಕುಳಿತರು. ಅರ್ಧ ಊಟ ಮಾಡಿದವರು ಮತ್ತೆ ಊಟ ದೊರೆಯುವುದೆಂದು ಕುಳಿತರು. ಮನೆಯಿಂದ ಡಬ್ಬಿ ತರಿಸಿದವರು ಪೊಗದಸ್ತಾಗಿ ಊಟ ಮಾಡಿ ಕೆಲಸ ಮಾಡದೆ ಕುಳಿತರು. ತಂತಮ್ಮ ಕೆಲಸದ ತಾಣಗಳಲ್ಲಿ ಗುಂಪಾಗಿ ಹರಟೆ ಹೊಡೆಯುತ್ತ, ವಿಶ್ರಾಂತಿ ಪಡೆಯುತ್ತ ಕಾಲ ನೂಕತೊಡಗಿದರು.

## ಕೊಲ್ಹಾಪುರದ ಶ್ರೀ ಲಕ್ಷ್ಮೀದೇವಿ

ಕೊಲ್ಹಾಪುರ ನಿಲಯೆ ಜಗದಂಬೆ
ನಿನ್ನಯ ಮಹಿಮೆಯ ಪೊಗಳಲರಿಯೆ

ರತ್ನವರ್ಣವೆ ದೇವಿ–ರತ್ನಾಭೂಷಿತೆ
ರತ್ನಕಾಂತಿಯೇ–ತಾಯಿ
ರತಗರ್ಭ ವರ ರತ್ನಖಚಿತ ಮಣಿ
ರತ್ನ ಹಸ್ತ ನಿಜರತ್ನಾನ್ವೇಷಿತೆ
ರತ್ನ, ರತ್ನ ಶ್ರೀರತ್ನ ಸರೋರುಹೆ
ರತ್ನಾಕರ ಸುತೆ–ಲಕ್ಷ್ಮೀದೇವಿ

ಗಂಧವತಿಯೆ ದೇವಿ–ಗಂಧಾಧರೆ
ಗಂಧವಾರಿಧಿಯೆ–ತಾಯಿ
ಗಂಧವದನೆ ಸುಗಂಧ ಸುಶೋಭಿತೆ
ಗಂಧಾಂತರ್ಗತ ದುಂದುಭಿ ಘೋಷಿತೆ
ಗಂಧ ಪ್ರಿಯೆ ಶ್ರೀಗಂಧವಾಹಿನಿಯೆ
ಗಂಧದ್ವಾರೆಯೆ–ಇಂದಿರಾದೇವಿ.

ನಿತ್ಯತೃಪ್ತಿಯ ನೀಡು–ಜಗಜ್ಜನನಿ
ತಾಯಿಯೆ–ನಿತ್ಯ ಮಂಗಲ ಮಾಡು.
ನಿತ್ಯ ತೃಪ್ತಿ–ಸಂತುಷ್ಟಿಯ ನೀಡುತ
ಉತ್ತಮ ಶ್ರೀಹರಿ ವಕ್ಷಸ್ಥಲದಲಿ
ಮತ್ತೆ ವಿರಾಜಿಸಿ ಅತಿಶಯ ಭಕುತರ
ಚಿತ್ತ ಚಂಚಲವ ಕಳೆಯುವ ದೇವೀ

ರಾಘವೇಂದ್ರ ಕುಲಕರ್ಣಿ

ಆ ವರ್ಷದ ಮಿಲ್ಲಿನ ಆಢಾವೆ ಪತ್ರಿಕೆಯ ಕರಡು ಪ್ರತಿಯನ್ನು ಸೂಕ್ಷ್ಮವಾಗಿ, ಪರಿಶೀಲಿಸುತ್ತ ಕುಳಿತಿದ್ದ ಜನರಲ್ ಮ್ಯಾನೇಜರ್ ಮಿಶ್ರಾ ಅವರಿಗೆ ಕಾರ್ಮಿಕರೆಲ್ಲ ಮಿಂಚಿನ ಮುಷ್ಕರ ಹೂಡಿದ್ದರಿಂದ ಕೆಲಸಗಳೆಲ್ಲ ಸ್ಥಗಿತಗೊಂಡಿವೆ ಎಂದು ವಿಭಾಗೀಯ ಅಧಿಕಾರಿಗಳಿಂದ ಫೋನ್ ಕರೆಗಳು ಬರತೊಡಗಿದವು. ಮಿಶ್ರಾ ಇದನ್ನು ನಿರೀಕ್ಷಿಸಿರಲಿಲ್ಲ. ಉತ್ಪಾದನೆಯಲ್ಲಿ ಏರುಪೇರಾದರೆ ಭಾರತೀಯ ಮಾರುಕಟ್ಟೆಯಲ್ಲಿಯ ತಮ್ಮ ಮಿಲ್ಲಿನ ಸ್ಥಾನಮಾನಕ್ಕೆ ಧಕ್ಕೆ ಬರುವುದೆಂದು ಅವರಿಗೆ ಗೊತ್ತಿದೆ. ಸದ್ಯ ಮಿಲ್ಲಿಗೆ ಕಚ್ಚಾ ಸಾಮುಗ್ರಿಗಳು ಕೊರತೆ ಇಲ್ಲ. ಆಂತರಿಕ ಸಂಪನ್ಮೂಲನಗಳ ಪ್ರಯೋಜನದಿಂದಾಗಿ ವಿದ್ಯುತ್ತಿನ ಕೊರತೆ ಇಲ್ಲ. ವಿದೇಶಿ ಯಂತ್ರಸಾಮುಗ್ರಿಗಳಿರುವುದರಿಂದ ಹೆಚ್ಚಿನ ಅಪಘಡಗಳಿಲ್ಲ. ವಿಪುಲವಾದ ಮಾರುಕಟ್ಟೆ ಇದೆ. ಪರಿಸ್ಥಿತಿ ಹೀಗಿರುವಾಗ, ಕಾರ್ಮಿಕ ಬಾಂಧವ್ಯ ಹದಗೆಡಲು ಕಾರಣವೇನು? ತಕ್ಷಣ ಮ್ಯಾನೇಜರ್ (ಲೇಬರ್ ರಿಲೇಶನ್ಸ್) ಅವರನ್ನು ಕರೆ ಕಳಿಸಿ, ಅವರೊಂದಿಗೆ ಕಾರಖಾನೆಯ ಕ್ಯಾಂಟೀನಿಗೆ ಆಗಮಿಸಿದರು.

ಕೃಷ್ಣನ್ ಕುಟ್ಟಿಯು ಧಾವಿಸಿ ಬಂದು ನಡೆದ ಸಂಗತಿಯನ್ನೆಲ್ಲ ಸಂಕ್ಷಿಪ್ತವಾಗಿ ಮಿಶ್ರಾ ಅವರಿಗೆ ಹೇಳುತ್ತ ಒಳಬಂದ. ನೊಣ ಬಿದ್ದ ಆ ಅನ್ನದ ತಟ್ಟೆಯನ್ನೂ ಅನ್ನ ಮಾಡಿಟ್ಟದ್ದ ಕೊಳಗವನ್ನೂ ತೋರಿಸಿದ. ನಂತರ ಎಲ್ಲರೂ ಕೇಳುವಂತೆ, ಗಟ್ಟಿಯಾದ ಧ್ವನಿಯಲ್ಲಿ, "ಈ ತರಹದ ಕೊಳಕು ಆಹಾರವನ್ನಿಲ್ಲಿ ಸರಬರಾಜುಮಾಡಲಾಗುತ್ತಿದೆ. ಬೇರೆ ಮಾಡಿ ಹಾಕಿ ಅಂದರೆ ಕೇಳುವವರೇ ಇಲ್ಲ, ಊಟ ಮಾಡದೆ ಕೆಲಸ ಮಾಡುವುದಾದರೂ ಹೇಗೆ?" ಎಂದು ಪ್ರಶ್ನಿಸಿದ.

ಮಿಶ್ರಾ ತದೇಕ ದೃಷ್ಟಿಯಿಂದ ಆ ಅನ್ನದ ತಟ್ಟೆಯನ್ನೂ ಕೊಳಗವನ್ನೂ ನೋಡಿದರು. ಬಳಿಕ ಅಡಿಗೆ ಮನೆಗೆ ಹೋಗಿ ತಯಾರಿಕೆಯ ವಿಧಾನಗಳನ್ನು ಪರಿಶೀಲಿಸಿ ಡೈನಿಂಗ್ ಹಾಲಿಗೆ ಮರಳಿ ಬಂದು, ಅಲ್ಲಿ ಕಾತರದಿಂದ ಕಾದು ನಿಂತಿದ್ದ ಮಿಲ್ಲಿನ ನೌಕರರತ್ತ ತೀಕ್ಷ್ಣವಾಗಿ ನೋಡಿ, 'ಅನಿರೀಕ್ಷಿತವಾದ ಒಂದು ಸಣ ತಪ್ಪು, ಎಂಥ ಪ್ರಮಾದಕ್ಕೆ ಕಾರಣವಾಯಿತಲ್ಲ! ಇಂಥ ಕ್ಷುಲ್ಲಕ ಕಾರಣದಿಂದ ಮಿಲ್ಲಿನ ಉತ್ಪಾದನೆಗೆ ಧಕ್ಕೆ ಬರಬೇಕೆ? ಇಲ್ಲ, ಎಂದಿಗೂ ಇಲ್ಲ.' ಸ್ವಭಾವತಃ



ಮಾತಿಗಿಂತ ರಚನಾತ್ಮಕ ಕೃತಿಯಲ್ಲಿಯೇ ಹೆಚ್ಚು ವಿಶ್ವಾಸವಿದ್ದ ಆ ಜನರಲ್ ಮ್ಯಾನೇಜರರು ತಪ್ಪು ಎಸಗಿದವರನ್ನು ತಕ್ಷಣ ತರಾಟೆಗೆ ಎಳೆಯಲಿಲ್ಲ. ನೆರೆದ ನೌಕರರನ್ನುದ್ದೇಶಿಸಿ ಭಾಷಣ ಬಿಗಿಯುವಂತೆ ಮಾತನಾಡಲಿಲ್ಲ. ಬದಲಾಗಿ, ಬೇಗ ಬೇರೆ ಅನ್ನ ಮಾಡಿ ಎಲ್ಲರಿಗೂ ಊಟ ಹಾಕುವಂತೆ ರಾಮು ದುಲಾರಿಗೆ ಆದೇಶವಿತ್ತರು. ನಂತರ ಕೃಷ್ಣನ್ ಕುಟ್ಟಿಯನ್ನುದ್ದೇಶಿಸಿ, "ಎಲ್ಲರೂ ಊಟ ಮಾಡಿ ತಂತಮ್ಮ ಕೆಲಸಗಳನ್ನೆಲ್ಲ ಮುಂದುವರೆಸಲಿ," ಎಂದರು. ತನ್ನ ಮಾತು ಗೆದ್ದಿತೆಂದು ಬೀಗುತ್ತ ಕೃಷ್ಣನ್ ಮಿಶ್ರಾ ಅವರ ಕೈಕುಲುಕಿ, "ಖಂಡಿತ ಸರ್, ನಾವು ಕೇಳಿದ್ದು ಕೂಡ ಅದೇ ತಾನೆ?" ಎಂದು ಮ್ಯಾನೇಜರ್ (ಲೇಬರ್ ರಿಲೇಶನ್ಸ್) ಅವರತ್ತ ವಿಜಯದ ನಗೆ ಬೀರಿದ.

ಮುಂದೆ ಒಂದು ಗಂಟೆಯ ಅವಧಿಯೊಳಗೆ ಎಲ್ಲರಿಗೂ ಊಟ ಸರಬರಾಜು ಆಯಿತು ಎಂದು ಬೇರೆ ಹೇಳಬೇಕಿಲ್ಲ. ಹಾಗೆಯೆ ಮಿಲ್ಲಿನ ಎಲ್ಲ ವಿಭಾಗಗಳಲ್ಲಿಯೂ ಕಾರ್ಮಿಕರು ಕೆಲಸ ಮುಂದುವರೆಸಿದರು.

ಈ ಎಲ್ಲ ಹಗರಣವನ್ನು ಮೂಕ ಪ್ರೇಕ್ಷಕನಂತೆ ನೋಡಿದ ನಂತರ ಎಂಜಲು ತಟ್ಟೆಗಳನ್ನೆತ್ತಿ ಟೇಬಲ್ ಒರೆಸುವ ಕಾರ್ಯದಲ್ಲಿ ನಿರತರಾದ ಆಳು ಮಗ ಮಲ್ಲೇಶಿಯು, ಎಲ್ಲರೂ ಅಲಕ್ಷಿಸಿ ಇಟ್ಟ ಆ ಅನ್ನದ ಕೊಳಗವನ್ನು ನೋಡುತ್ತಿರುವಾಗ ಮಾತ್ರ, ಅವನ ಕಣ್ಣುಗಳಲ್ಲಿ ಆಸೆಯು ಉಕ್ಕುತ್ತಿತ್ತು. ಧಾರವಾಡ ಜಿಲ್ಲೆಯ ಭೀಕರ ಬರಗಾಲ ಪೀಡಿತ ತಾಲೂಕಿನಿಂದ ಗುಳೆ ಎದ್ದು ಬಂದ ಆತ, ಕೇವಲ ಎರಡು ವಾರಗಳ ಹಿಂದೆ ಈ ಕ್ಯಾಂಟೀನಿನಲ್ಲಿ ದಿನಗೂಲಿ ಕೆಲಸವನ್ನು ಗಿಟ್ಟಿಸಿಕೊಂಡಿದ್ದ. ಅವನ ಮನಸ್ಸು ತಾನು ಅನುಭವಿಸಿದ ಬರಗಾಲದ ಬವಣೆಯನ್ನು, ಇಲ್ಲಿರುವ ಅನುಕೂಲಗಳೊಂದಿಗೆ ಹೋಲಿಸುತ್ತಿತ್ತು. ಅಲ್ಲಿ ಕುಡಿಯುವ ನೀರಿಗೆ ಪರದಾಡುವ ಸ್ಥಿತಿ ಇದೆ. ಇಲ್ಲಿ ಬೇಕಾದಷ್ಟು ನೀರು ಇದೆ. ಅಲ್ಲಿ ತುತ್ತು ಅನ್ನ ದೊರಕಿಸಿಕೊಳ್ಳಲು ಗಾಣದೆತ್ತಿನಂತೆ ದುಡಿಯಬೇಕು. ಇಲ್ಲಿ ದುಡಿಯುವ ಮನಸ್ಸಿದ್ದರೆ ಅನ್ನಕ್ಕೆ ಕೊರತೆ ಎಂದೂ ಇಲ್ಲ. ಅನ್ನದ ನೆನಪಾದೊಡನೆಯೆ ಮತ್ತೆ ಆ ಅನ್ನದ ಕೊಳಗದತ್ತ ಅವನ ಕಣ್ಣುಗಳು ದೃಷ್ಟಿ ಹಾಯಿಸಿದವು.

ಚಿತ್ತಾಕರ್ಷಕವಾದ ಎರಡು ಹಿಡಿಕೆಗಳಿದ್ದ, ಸುಮಾರು ಎರಡೂವರೆ ಅಡಿ ಎತ್ತರದ ಸ್ಟೇನ್-ಲೇಸ್ ಸ್ಟೀಲ್ ಕೊಳಗ ಅದು. ಹತ್ತು-ಹನ್ನೆರಡು



ಜನ ಸಮೃದ್ಧವಾಗಿ ಊಟ ಮಾಡುವಷ್ಟು ಅನ್ನ ಆದರಲ್ಲಿ ಉಳಿದಿದೆ. ರುಚಿಯಾದ ಮಸೂರಿ ಅಕ್ಕಿಯ ಅನ್ನ ಅದು. ತನ್ನ ಧಣಿ, ಆ ಅನ್ನದ ಕೊಳಗವನ್ನು ಒಂದು ಬದಿಗೆ ಇಡಿಸಿದ್ದಾನೆ. ಅದು ಬೇರೊಬ್ಬರ ಪಾಲಾಗುವುದರಲ್ಲಿಯೆ ತಾನು ಕೇಳಿಕೊಂಡರೆ ರಾಮ ದುಲಾರಿಯು ಕೊಡಲಾರನೆ? ತನ್ನ ಕೆಲಸದ ಅವಧಿ ಮುಗಿಯುತ್ತಲೆ, ಮನೆಯ ಸಂಕಷ್ಟಗಳನ್ನೆಲ್ಲ ಹೇಳಿಕೊಂಡು ಧಣಿಯ ಕಾಲಿಗೆ ಬಿದ್ದು, ಆ ಕೊಳಗದಲ್ಲಿಯ ಅನ್ನವನ್ನು ಪಡೆಯಬೇಕೆಂದು ಮಲ್ಲೇಶಿ ಮನಸ್ಸಿನಲ್ಲಿ ನಿರ್ಧರಿಸಿದ.

ಸರಿಯಾಗಿ ಐದೂವರೆ ಗಂಟೆಗೆ ಮಿಲ್ಲಿನ ಸೈರನ್ ಕೂಗುತ್ತಲೆ. ಕಾರ್ಮಿಕರೆಲ್ಲ ಹೊರ ಬಂದು, ಕಾರಖಾನೆಯ ಮೇನ್ ಗೇಟಿನ ಎದುರು ಶಂಕರನ ಸುತ್ತಲೂ ಗುಂಪಾಗಿ ನಿಂತು ಜಯಜಯಕಾರಗಳ ಘೋಷಣೆ ಮಾಡಿದರು. ಸಹೋದ್ಯೋಗಿಯೊಬ್ಬನ ಪ್ರಯತ್ನದಿಂದಾಗಿ ತಮ್ಮ ಪಕ್ಷದ ಒಮ್ಮತ ಬಹುಮತಗಳೆರಡೂ ಏಕಕಾಲಕ್ಕೆ ಸಿದ್ಧವಾಗಿದ್ದುದು ಅವರಿಗೆಲ್ಲ ಹೆಮ್ಮೆಯ ವಿಷಯವಾಗಿತ್ತು. ಮೇಲಾಗಿ ಸ್ವತಃ ಜನರಲ್ ಮ್ಯಾನೇಜರರು, ಕಾರಖಾನೆಯ ಅಂಗಳಕ್ಕೆ ಬಂದು, ತಮ್ಮ ನಾಯಕನ ಮಾತಿನಂತೆಯೆ ಅಧಿಕಾರಿಗಳಿಗೆ ಆದೇಶವಿತ್ತು, ನಂತರ ಕೈ ಕುಲುಕಿದ್ದು ಅವರಿಗೆಲ್ಲ ಸಂತಸದ ಸಂಗತಿಯಾಗಿತ್ತು. ಅಂದು ಕೃಷ್ಣನ್ ಕುಟ್ಟಿಯು ಶಂಕರನನ್ನು ಪಕ್ಷದ ಕಾರ್ಯಾಲಯಕ್ಕೆ ಕರೆದೊಯ್ದು. ಮುಂದಿನ ಚಟುವಟಿಕೆಗಳ ಬಗ್ಗೆ ಅವರೆಲ್ಲ ಚರ್ಚೆ ಮಾಡತೊಡಗಿದರು. ಇಷ್ಟು ವರ್ಷಗಳ ವರೆಗೆ ಮಾಮೂಲು ಕಾರ್ಮಿಕನಾಗಿದ್ದ ಶಂಕರನಿಗೆ ಆಗ ಕಾರ್ಮಿಕ ನಾಯಕನಾಗುವ ದಾರಿಯು ಅಸ್ಪಷ್ಟವಾಗಿ ಗೋಚರಿಸತೊಡಗಿತು. ಅತ್ತ ಅದೇ ಖುಷಿಯಲ್ಲಿದಾಗಲೇ, ತಮಗೆ ಪಾರ್ಟಿ ಕೊಡುವಂತೆ ಅವನ ಮಿತ್ರರು ದುಂಬಾಲು ಬಿದ್ದರು.

ರಾತ್ರಿ ಒಂಭತ್ತು ಗಂಟೆಯ ನಂತರವೂ ಗಂಡನ ಆಗಮನವನ್ನೆ ನಿರೀಕ್ಷಿಸುತ್ತ ಕುಳಿತ ಕೆಂಚಮ್ಮ, ಶಂಕರ ಕೆಂಗಣ್ಣೊಂದಿಗೆ ಜೋಲಿ ಹೊಡೆಯುತ್ತ ಬರುವುದನ್ನು ಕಂಡು "ಮತ್ತೆ ಕುಡದು ಬಂದಾನು." ಎಂದು ಗೊಣಗಿದಳು. ಗಂಡ ಎಷ್ಟೇ ಕುಡುಕನಾದರೂ, ಪತಿಯೆ ದೈವ ಎಂದು ನಂಬಿದವಳು ಅವಳು. ಅದಕ್ಕಾಗಿ ಗಂಡನ ಊಟವಾದ ನಂತರವೆ ಅವಳ ಊಟ. ಅವಳ ತಾಯಿ ಕಲಿಸಿದ ನೀತಿ ಅದು. ಅವಳು ಈ ಮನೆಗೆ ಬಂದ ಹೊಸದರಲ್ಲಿ, ಗಂಡ ಕುಡಿದು ಬಂದಾಗಲೆಲ್ಲ ಸಹನೆ ಕಳೆದುಕೊಳ್ಳುತ್ತಿದ್ದಳು. ಅತ್ತಳು, ಗೋಳಾಡಿದಳು, ತವರು ಮನೆಗೆ ಹೋಗುವೆನೆಂದು ಅರ್ಭಟಿಸಿದಳು. ಯಾವುದೂ ಶಂಕರನ ಮೇಲೆ ಪರಿಣಾಮ ಬೀರಲಿಲ್ಲ. ಮಗಳನ್ನು ನೋಡಲು ಬಂದಿದ್ದ ಅವಳ ಅಪ್ಪ, ಮೊಮ್ಮಕ್ಕಳು ಹಾಲು ಕಾಣದಾದ ಸ್ಥಿತಿಯನ್ನು ಕಂಡು ಊರಿನಿಂದ ಎರಡು ಎಮ್ಮೆ ತಂದು ಇಲ್ಲಿ



ಬಿಟ್ಟಿದ್ದ. ಗಂಡನ ಆದಾಯವನ್ನೇ ಅವಲಂಬಿಸದೆ ಕೆಂಚಮ್ಮ, ಮನೆಯಲ್ಲಿ ಮಿಕ್ಕಿ ಉಳಿದ ಹಾಲು ಮಾರಿ, ಪೈಸೆಗೆ ಪೈಸೆ ಕೂಡಿಸುತ್ತ ಮನೆಯ ಖರ್ಚುಗಳನ್ನು ನಿಭಾಯಿಸುತ್ತಿದ್ದಳು. ಮಿಲ್ಲಿನಲ್ಲಿ ಕಾರ್ಮಿಕನಾದ ಶಂಕರನಿಗೆ ಅವನ ದುಡಿತ ಮತ್ತು ದುಡಿತದ ಅವಧಿಗೆ ಕಾನೂನಿನ ಮಿತಿ ಇದೆ. ಆದರೆ ಕೆಂಚಮ್ಮನಿಗೆಲ್ಲಿ?

ಆಕೆ ಶಂಕರನಿಗೆ ಊಟಕ್ಕೆ ಅಣಿಮಾಡಿದಳು. ಬಿದಿರಿನ ಬುಟ್ಟಿಯಲ್ಲಿ ಮಾಡಿಟ್ಟಿದ್ದ ಜೋಳದ ರೊಟ್ಟಿಯನ್ನು ಗಂಡನಿಗೆ ಹಾಕಲೆಂದು ಕೈಗೆತ್ತಿದಳು. ಆ ರೊಟ್ಟಿಯ ಮೇಲೆ, ಸತ್ತ ಜೊಂಡಿಗವನ್ನು ಕೆಂಪು ಇರುವೆಗಳು ಎಳೆಯುತ್ತಿದ್ದು ಕಂಡು, ಶಂಕರ ಗೊಗ್ಗರು ಧ್ವನಿಯಲ್ಲಿ ತೊದಲಿದ: "ಏನ್ ಅಡಿಗಿ ಮಾಡಿದಿ? ಎಲ್ಲಾ ಬುಳುಸು ಆಗೇದೇನು?" ಅವನೆಡೆಗೆ ನೋಡದೆ ಕೆಂಚಮ್ಮ, "ಅಹಾ! ಅದೇನ ಕೇಳಾದು. ರೊಟ್ಟಿ ಅಂದರೆ ಇರುವೆ ಬರೋದೆ. ಅಷ್ಟಕ್ಕೆ ಊಟ ಬಿಡೋದೆ?" ಎನ್ನುತ್ತ ಆ ಸತ್ತ ಜೊಂಡಿಗವನ್ನು ಮೂಲೆಯತ್ತ ಬಿಸಾಕಿ, ದಾಳಿ ಇಟ್ಟ ಇರುವೆಗಳನ್ನು ಕೈ ಬೆರಳುಗಳಿಂದ ತಳ್ಳುತ್ತ, ರೊಟ್ಟಿಯನ್ನು ಗಂಡನಿಗೆ ನೀಡಿದಳು. ಆಗಲೇ ಹೊಟ್ಟೆಯಲ್ಲಿ ಪರಮಾತ್ಮ ತಾಂಡವವಾಡುತ್ತಿದ್ದರಿಂದ, ಶಂಕರ ನಾಲ್ಕಾರು ರೊಟ್ಟಿಗಳನ್ನು ಗಬಗಬನೆ ತಿಂದು, ಕೈ ತೊಳೆದು, ಸನಿಹದಲ್ಲಿದ್ದ ಕಂಬಳಿ ಎಳೆದುಕೊಂಡು ನೆಲಕ್ಕೊರಗಿದ.

ಸಾಯಂಕಾಲ ಐದು ಗಂಟೆಗೆ ದಿನದ ವ್ಯವಹಾರದ ಲೆಕ್ಕ ಹಾಕುತ್ತ ಕುಳಿತ ರಾಮ ದುಲಾರಿಯು, ಡೈನಿಂಗ್ ಹಾಲಿನ ಒಂದು ಬದಿಗೆ ಟೇಬಲ್ ಮೇಲಿಟ್ಟಿದ್ದ ಆ ಅನ್ನದ ಸ್ಟೀಲ್ ಕೊಳಗವನ್ನು ನೋಡಿ ಕೆಲವು ಕ್ಷಣ ಯೋಚಿಸಿದ. ಈ ಅನ್ನವನ್ನು ತನ್ನ ಮನೆಗೆ ಕಳಿಸಲಾರ. ಎಲ್ಲ ಕೆಲಸಗಾರರು ಊಟ ಮಾಡಿ ತಿಂಗಳು ಸಂಬಳವನ್ನು ಪಡೆಯುತ್ತಾರೆ. ಆದರೆ ಎರಡು ವಾರಗಳ ಹಿಂದೆ ದಿನಗೂಲಿ ಮೇಲೆ ಸೇರಿದ ಮಲ್ಲೇಶಿಗೆ ಕೆಲಸದ ಭದ್ರತೆ ಇಲ್ಲ. ದಿನಗೂಲಿಯೂ ಕಡಿಮೆ ಇದೆ. ಆತ ಮನೆಯ ಪರಿಸ್ಥಿತಿ ಹೇಳಿಕೊಂಡು ಕೆಲಸ ಪಡೆದಿದ್ದು ನೆನಪಿತ್ತು. ಆ ಅನ್ನವನ್ನು ಮಲ್ಲೇಶಿಗೆ ಕೊಡುವುದೇ ಸರಿ ಎನಿಸಿ ಅವನನ್ನು ಕರೆದು ಹೇಳಿದ. ತಾನು ಕೇಳದೆ ಧಣಿಯು ಅನ್ನ ಕೊಟ್ಟನೆಂದು ಮಲ್ಲೇಶಿಗೆ ಖುಷಿಯಾಯಿತು. ಒಂದು ಬಿದಿರಿನ ಬುಟ್ಟಿಯಲ್ಲಿ ಬಾಳೆ ಎಲೆ ಹಾಕಿ ಅನ್ನವನ್ನು ತುಂಬಿದ. ಮತ್ತೆ ಮೇಲೊಂದು ಎಲೆ ಹೊದಿಸಿದ. ರಾಮ ದುಲಾರಿಗೆ ಕೈ ಜೋಡಿಸಿ, ಬುಟ್ಟಿಯನ್ನು ತಲೆಯ ಮೇಲಿಟ್ಟುಕೊಂಡು ತನ್ನ ಗುಡಿಸಲಿನತ್ತ ಗೆಲುವಿನಿಂದ ಹೆಜ್ಜೆ ಹಾಕಿದ.

ಆ ರಾತ್ರಿ ಮಲ್ಲೇಶಿಯ ಗುಡಿಸಲಿನಲ್ಲಿ ಸಂಭ್ರಮವೊ ಸಂಭ್ರಮ. ಬೀದಿಯ ಕೊನೆಯಲ್ಲಿದ್ದ ಗೂಡಂಗಡಿಯಿಂದ ಸಾಂಬಾರು ತಂದು ಎಲ್ಲರೂ ಸಮೃದ್ಧವಾಗಿ ಊಟ ಮಾಡಿದರು. "ಇಂದು ನಿನ್ನ ಸಾಹುಕಾರನ ಮನೆಯಲ್ಲಿ ಮದುವೆ ಇತ್ತೇನೋ?" ಎಂದು ಅವನ ತಂದೆ-ತಾಯಿ ಕೇಳಿದರು. ಇಷ್ಟೊಂದು ಅನ್ನದಾನ ಮಾಡಿದ, ತಾವು ನೋಡದ ಆ ಸಾಹುಕಾರನ ಬಗೆಗೆ ಅವರಿಗೆ ಅಭಿಮಾನ ಮೂಡಿತು. ಈ ಲೋಕದಲ್ಲಿ ಯಾರು ಯಾರಿಗೆ ದಾನಿಗಳೊ, ದಾತೃಗಳೊ ಎಂಬುದನ್ನು ವಿಚಾರಿಸುವ ಗೋಜಿಗೆ ಹೋಗದ ಆತ, "ಹಾಗೇನಿಲ್ಲ, ಏನೊ ಅನ್ನ ಉಳಿದಿತ್ತು. ನನಗೆ ಕೊಟ್ಟರು." ಎಂದು ಚುಟುಕಾಗಿ ಉತ್ತರಿಸಿದ. ನಂತರ ಮಸೂರಿ ಅಕ್ಕಿಯ ಆ ಅನ್ನವನ್ನು ಸಂತೃಪ್ತಿಯಿಂದ ಊಟ ಮಾಡಿ, ಗುಡಿಸಲಿನ ಹೊರಗಿದ್ದ ಕಲ್ಲು ಜಪ್ಪಡಿಯ ಮೇಲೆ ಸುಖವಾಗಿ ನಿದ್ದೆ ಹೋದ. ❁

# ಸಾವಿಲ್ಲದ .ಸಾಹಸ ಕಾದಂಬರಿಕಾರ



# ರೈಡರ್ ಹಗ್ಗಾರ್ಡ್

**ಎ. ನರಹರಿ**

"ಸ್ಟೀವನ್‌ಸನ್‌ನ 'ಟ್ರೆಜರ್ ಐಲೆಂಡ್' ಆಗ ತಾನೇ ಪ್ರಕಟವಾಗಿತ್ತು......ನನಗೇನೂ ಅದು ಮಹತ್ವದ್ದೆನಿಸಲಿಲ್ಲ......ನನ್ನ ಅಣ್ಣ ಅದನ್ನು ಅದ್ಭುತ ಕೃತಿ ಎಂದು ಕರೆದ, ನನ್ನನ್ನು ಮೂರ್ಖನೆಂದು ಜರಿದ. ಅಷ್ಟೇ ಉತ್ತಮ ಕೃತಿಯನ್ನು ರಚಿಸಬಲ್ಲೆನೆಂದು ಅವನೊಂದಿಗೆ ಐದು ಷಿಲಿಂಗ್‌ಗಳ ಪಣ ಕಟ್ಟಿದೆ. ಆತ ಒಪ್ಪಿಕೊಂಡ. ಹೀಗಾಗಿ ನಾನು 'ಸೋಲೋಮನ್ ದೊರೆಯ ಗಣಿಗಳು' ಕೃತಿ ಬರೆದೆ"* — ಈ ಕಾದಂಬರಿಯನ್ನು ತಾನು ಹೇಗೆ ಬರೆಯಬೇಕಾಯಿತೆಂಬುದನ್ನು ರೈಡರ್ ಹಗ್ಗಾರ್ಡ್ ಪ್ರಕಾಶಕರಿಗೆ ವಿವರಿಸಿದ ರೀತಿಯಿದು.

'ಟ್ರೆಜರ್ ಐಲೆಂಡಿ'ಗಿಂತಲೂ ಅದು ಹೆಚ್ಚು ಯಶಸ್ವಿಯಾಯಿತು. ಅನಂತರ ಅದು ಅನೇಕ ಪುನರ್ಮುದ್ರಣಗಳನ್ನೂ ಕಂಡಿತು. ನೋಡಿದವರು ಬಹುಕಾಲ ನೆನಪಿಟ್ಟುಕೊಳ್ಳುವಂತಹ ಅದೇ ಹೆಸರಿನ ಚಲನಚಿತ್ರವಾಗಿಯೂ ಅದು ನಿರ್ಮಾಣವಾಯಿತು. ಆ್ಯಂಡ್ರೂ ಲ್ಯಾಂಗ್ ಈ ಕಾದಂಬರಿಯ ಬಗ್ಗೆ ವಿಮರ್ಶೆ ಬರೆಯುತ್ತಾ, "ಇಂತಹ ಕೃತಿಗೆ ನಾವು ಎಷ್ಟೇ ಕಾದಂಬರಿಗಳನ್ನಾದರೂ (ಎಂಟುನೂರು ಎನ್ನಿ) ಬದಲಿಯಾಗಿ ನೀಡಬಹುದು" ಎಂದ.

ರೈಡರ್ ಹಗ್ಗಾರ್ಡ್ ಜನಿಸಿದ್ದು ೨೨ನೇ ಜೂನ್ ೧೮೫೬ರಲ್ಲಿ. ನಾರ್‌ಫೋಕಿನ ಜಮೀನುದಾರನಾಗಿದ್ದ ಬ್ರಾಡೆನ್‌ಹ್ಯಾಮ್ ಹಾಲ್ ಎಂಬಾತನ ಹತ್ತು ಮಕ್ಕಳಲ್ಲಿ ಈತ ಎಂಟನೆಯವ. ಇಬ್ಸ್‌ವಿಚ್ ಗ್ರಾಮರ್ ಶಾಲೆಯಲ್ಲಿ ವ್ಯಾಸಂಗ. ಆತನೆಷ್ಟು ಒರಟನಾಗಿದ್ದನೆಂದರೆ ಅವನ ಅಮ್ಮ ಅವನನ್ನು, "ದೇಹ ಮತ್ತು ಬುದ್ಧಿಯಲ್ಲಿ ಸೀಸದಷ್ಟೇ ಭಾರದವನು" ಎಂದೇ ಸಾರುತ್ತಿದ್ದಳು. ಅವನ ಶಾಲಾ ವರದಿಯೊಂದು, ತಂದೆಯೊಮ್ಮೆ ಆತನ ಬಗ್ಗೆ "ತರಕಾರಿ ವ್ಯಾಪಾರಿಯಾಗಲಿಕ್ಕೆ ಮಾತ್ರ ಯೋಗ್ಯ" ಎಂದು ಉದ್ಗರಿಸುವಂತೆ ಮಾಡಿತ್ತು.

ದೊಡ್ಡವನಾದ ಬಳಿಕ ಮಗ ರಾಯಭಾರ ಕಚೇರಿಯಲ್ಲಿ ನೌಕರಿ ದೊರಕಿಸಿಕೊಳ್ಳಬೇಕೆಂದು

* ೧೯೬೦ರ ಕಸ್ತೂರಿ ಎಪ್ರಿಲ್ ಸಂಚಿಕೆ ನೋಡಿ. —ಸಂ.

ತಂದೆಯ ಇರಾದೆಯಾಗಿತ್ತು. ಆದರೆ ಸೈನ್ಯ ಪ್ರವೇಶ ಪರೀಕ್ಷೆಯಲ್ಲಿ ನಪಾಸಾದುದರಿಂದ ಆತ ಲಂಡನ್ನಿಗೆ ತೆರಳಿ ಫಾರಿನ್ ಆಫೀಸ್ ಪರೀಕ್ಷೆಗೆ ಕುಳಿತ. ತನ್ನ ಓರಗೆಯವರೆಲ್ಲ ವಿಶ್ವವಿದ್ಯಾಲಯ ವ್ಯಾಸಂಗದಲ್ಲಿದ್ದಾಗ ಆತ ಪೋಷಕರ ಹತೋ-ಟಿಯೂ ಇಲ್ಲದೆ ಲಂಡನ್ನಿನಲ್ಲಿ ಎರಡು ವರ್ಷ ಕಳೆದ.

ಕೊನೆಗೆ ಪರೀಕ್ಷೆಯನ್ನೂ ಮುಗಿಸಲಿಲ್ಲ. ಕಾರಣ ಹಗ್ಗಾರ್ಡ್‌ನ ತಂದೆ ಆಗ ತಾನೇ ನತಾಲ (ದಕ್ಷಿಣ ಆಫ್ರಿಕ)ದಲ್ಲಿ ಲೆಫ್ಟಿನೆಂಟ್ ಗವರ್ನರ್ ಆಗಿ ನೇಮಕಗೊಂಡ ನೆರೆಮನೆಯಾತನಿಗೆ ಅವನ ಕಚೇರಿಯಲ್ಲಿ ತನ್ನ ಮಗನಿಗೆ ಉದ್ಯೋಗ ದೊರ-ಕಿಸಲು ಕೇಳಿಕೊಂಡದ್ದು. ಅದರಂತೆ ಹಗ್ಗಾರ್ಡ್ ಗವರ್ನರನ ಕಿರಿಯ ಕಾರ್ಯದರ್ಶಿಗಳಲ್ಲೊಬ್ಬನಾಗಿ ನತಾಲದಲ್ಲಿ ನೌಕರಿ ಮಾಡಿದ. ಆಗಲೇ ಹಗ್ಗಾರ್ಡ್ ಆಫ್ರಿಕದ ಜೂಲೂ ಮತ್ತು ಇತರ ಜನಾಂಗಗಳ ಇತಿಹಾಸ ಮತ್ತು ಸಂಪ್ರದಾಯ ಗಳನ್ನು ಅಭ್ಯಾಸ ಮಾಡಿದ್ದು.

ಈ ಬಗ್ಗೆ ತನ್ನ ಆತ್ಮಚರಿತ್ರೆಯಲ್ಲಿ ಆತ ಬರೆದದ್ದು ಹೀಗೆ: "ನಾನು ನೀಳ ದೇಹದ ಯುವಕ. ಆರಡಿ ಎಂಟಂಗುಲ ಎತ್ತರ, ನೀಲ-ಗಣ್ಣು, ಕಂದು ಕೇಶ, ತಾಜಾ ಲಕ್ಷಣದವ... ಜೂಲೂಗಳು ನನಗೆ 'ಇಂಡಾಂಡ' ಎಂಬ ಅಡ್ಡ ಹೆಸರಿಟ್ಟರು. ಇದರರ್ಥ ನೀಳಕಾಯದ ಪ್ರಸನ್ನ ಸ್ವಭಾವದವನೆಂದು...ಪಾತ್ರಗಳ ಮತ್ತು ಘಟನೆ ಗಳ ಮೇಲ್ಮೈಯ ಒಳಗಡೆ ಇಣಕುವ ಮತ್ತು ಅವುಗಳ ಮೂಲಗಳನ್ನು ಹಾಗೂ ಕಾರಣಗಳನ್ನು ಅರಸುವ ಯತ್ನದ ಹವ್ಯಾಸ ನನ್ನದಾಗಿತ್ತು..."

೧೮೭೭ರಲ್ಲಿ ಟ್ರಾನ್ಸ್‌ವಾಲ್ (ದಕ್ಷಿಣ ಆಫ್ರಿಕ)ದ ವಿಶೇಷ ಕಮಿಷನರ್‌ನ ಸಿಬ್ಬಂದಿಯಾಗಿ ಆತನಿಗೆ ವರ್ಗವಾಯಿತು. ಮರು ವರ್ಷ ಆ ಪ್ರಾಂತವನ್ನು ಬ್ರಿಟಿಷ್ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳುವ ಐತಿ-ಹಾಸಿಕ ಕಾರ್ಯದಲ್ಲಿ ಆತ ಪಾತ್ರವಹಿಸಿದ. ಫೆನ್ನಿ ಎಂಬ ದುಭಾಷಿ ಆತನ ಕೆಲವಾರು ಕಾದಂಬರಿ ಗಳಿಗೆ ಸಾಮಗ್ರಿಗಳನ್ನು ಒದಗಿಸಿದ.

ನಂತರ ವಸಾಹತು ಕಾರ್ಯದರ್ಶಿಯ ಕಚೇರಿ ಯಲ್ಲಿ ಗುಮಾಸ್ತನಾಗಿ, ಆಮೇಲೆ ಟ್ರಾನ್ಸ್-ವಾಲಿನ ಉಚ್ಚನ್ಯಾಯಾಲಯದ ಮಾಸ್ಟರ್ ಹಾಗೂ ರಿಜಿಸ್ಟ್ರಾರನಾಗಿ ನೇಮಕಗೊಂಡ. ಆ ಹುದ್ದೆಯಲ್ಲಿ ಯಶಸ್ವಿಯಾಗಿ ಎರಡು ವರ್ಷ ಕೆಲಸ ಮಾಡಿದ ಮೇಲೆ ರಾಜಿನಾಮೆಯಿತ್ತು ಇಂಗ್ಲಂಡಿಗೆ ಹಿಂದಿರುಗಿದ. ಮರುವರ್ಷ ಲೂಯಿಸಾ ಎಂಬವ ಳನ್ನು ವಿವಾಹವಾಗಿ ದಕ್ಷಿಣ ಆಫ್ರಿಕಕ್ಕೆ ಮರಳಿದ. ಇಬ್ಬರೂ ಇಂಗ್ಲಂಡಿಗೆ ಮತ್ತೆ ವಾಪಸಾದ ನಂತರ ತನ್ನ ಮೊದಲ ಕೃತಿ, 'ಸಿಟೆವಯೋ ಮತ್ತವನ ನೆರೆಯ ಬಿಳಿ ಮಂದಿ'ಯನ್ನು ಬರೆದ. ಮೊದ ಮೊದಲು ಇದು ಅಷ್ಟೇನೂ ಯಶಸ್ಸನ್ನು ಕಾಣ ದಿದ್ದರೂ ಅನಂತರ ಬಲು ಜನಪ್ರಿಯವಾಯಿತು.

ನಿಯತಕಾಲಿಕಗಳಿಗೆ ಆತ ಲೇಖನಗಳನ್ನು ಆಗಾಗ ಬರೆಯುತ್ತಿದ್ದ. ಕಾನೂನು ಪರೀಕ್ಷೆಗೆ ಓದುವಾಗ ಆತ ಸ್ವಾಭಾವಿಕವಾಗಿಯೇ ಅತ್ಯಂತ ಲಾಭದಾಯಕ ಹಾಗೂ ಜನಪ್ರಿಯ ಮಾಧ್ಯಮ ವಾದ ಕಥಾರಚನೆಯ ಕಡೆಗೆ ಗಮನ ಹರಿಸಿದ. ಜೇಮ್ಸ್ ಪಾಯನ್, ಬಿ.ಡಿ. ಬ್ಲಾಕ್‌ಮೋರ್ ಮುಂತಾದ ಕಾದಂಬರಿಕಾರರೇ ಅವನಿಗೆ ಆದರ್ಶ-ರಾದರು. ೧೮೮೪ರಲ್ಲಿ ಆತನ ಮೊದಲ ಕಾದಂಬರಿ 'ಡಾನ್' ಹೊರಬಿದ್ದಿತು. ಅದೇ ವರ್ಷ 'ದಿ ವಿಚಸ್ ಹೆಡ್' ಕಾದಂಬರಿಯೂ ಹೊರಬಿದ್ದಿತು. ಮೊದಲನೆಯದು ವಿಫಲ-ವಾದರೂ ಎರಡನೆಯದನ್ನು ಜನ ಸ್ವೀಕರಿಸಿದರು.

೧೮೮೫ರಲ್ಲಿ 'ಸೋಲೋಮನ್ ದೊರೆಯ ಗಣಿ ಗಳು' ನಿಗೂಢ ಸಾಹಸ ಕಾದಂಬರಿಯನ್ನು "ಜಿಂಬಾಬ್ವೆಯ ಅವಶೇಷಗಳಿಂದ ಪ್ರಭಾವಿತನಾಗಿ ಆರು ವಾರಗಳಲ್ಲಿ" ಬರೆದು ಮುಗಿಸಿದ. ಮೂವರು ಸಾಹಸಿಗರ ನಿಗೂಢವಾದ ದೊರೆ ಸೋಲೋಮ-ನ್ನನ ಗಣಿಗಳ ಬೇಟೆಯ ಸಾಹಸ ಯಾತ್ರೆಯನ್ನು ಮೈ ನವಿರೇಳುವಂತೆ ವಿವರಿಸುತ್ತದೆ. ಅದು ಪ್ರಕಟಗೊಳ್ಳುವ ಮೊದಲೇ ಅದರ ಉತ್ತರಾರ್ಧ 'ಅಲೆನ್ ಕ್ವಾಟರ್‌ಮೈನ್'ಅನ್ನೂ ಬರೆದು ಮುಗಿಸಿದ.

'ಟ್ರೆಜರ್ ಐಲೆಂಡ್'ಗಿಂತ 'ಸೋಲೋಮನ್ ದೊರೆಯ ಗಣಿಗಳು' ಕಾದಂಬರಿಯಲ್ಲಿ ಹೆಚ್ಚು ಘಟನೆಗಳು ಸಂಭವಿಸುತ್ತವೆ. ಸ್ಟೀವನ್‌ಸನ್ನನಿಗೆ ಯಾವಾಗಲೂ ಆವಿಷ್ಕಾರದ ಕೊರತೆಯಿತ್ತು. ಆದರೆ ಹಗ್ಗಾರ್ಡನಿಗೆ ಅಭಿಜಾತ ಕತೆಗಾರಿಕೆಯ ಕಲ್ಪನಾಶಕ್ತಿಯಿತ್ತು: ಆದರೆ ಈ ಶಕ್ತಿಯಲ್ಲೇ ಒಂದು ದೌರ್ಬಲ್ಯವೂ ಇತ್ತು. ಆತನ ಲೇಖನಿಗಿಂತಲೂ ಕಲ್ಪನೆಯೇ ಮುಂದೋಡುತ್ತಿತ್ತು. ಕಥನದ ಓಘದ ಬಗೆಗಿನ ತವಕವೇ ಆತ ಪಾತ್ರಗಳ ಜಾಗರೂಕ ಚಿತ್ರಣ ಮಾಡದಂತೆ ಅಡ್ಡಿಯೊಡ್ಡಿತು. ಇದಕ್ಕೆ ಅಪವಾದವೆಂದರೆ 'ಅಲೆನ್ ಕ್ವಾಟರ್ ಮೈನ್' ಮತ್ತು 'ನಾಡಾ ದಿ ಲಿಲ್ಲಿ'ಯಲ್ಲಿನ ಅನ್‌ಸ್ಲೋ ಪೋಗಾಸ್ ಪಾತ್ರ.

"ಸ್ವಲ್ಪ ಒರಟಾದರೂ ಚಿಂತೆಯಿಲ್ಲ, ಪಾತ್ರಗಳು ನಿರ್ದಿಷ್ಟವಾಗಿದ್ದರೆ" ಆತ ತೃಪ್ತಿಪಟ್ಟುಕೊಳ್ಳುತ್ತಿದ್ದ. ಆತನ ದೃಷ್ಟಿಯಲ್ಲಿ, "ಕತೆಯೇ ವಸ್ತು ಮತ್ತು ಅದರ ಮನೆ ಕಟ್ಟಲು ಕೃತಿಯ ಪ್ರತಿಯೊಂದು ಪದವೂ ಇಟ್ಟಿಗೆಯಿದ್ದಂತೆ." ಕತೆಗೆ ನಿಜವಾಗಿಯೂ ಅವಶ್ಯಕವಾದ ಗುಣಗಳೆಂದರೆ "ಸಾಹಸ— ಅದೆಷ್ಟು ಅಸಾಧ್ಯವೆಂಬುದು ಮುಖ್ಯವೇ ಅಲ್ಲ, ಅದು ಸಾಧ್ಯವೆಂದು ತೋರುವಂತೆ ಮಾಡಿದರಾಯಿತು— ಮತ್ತು ಕಾಕತಾಳೀಯವನ್ನು ಬಳಸುವ ಜಾಣ್ಮೆ, ಹಾಗೂ ಕತೆಯ ಹಂದರದ ಕ್ರಮಬದ್ಧವಾದ ಬೆಳವಣಿಗೆಯ ಜೊತೆಗೆ ಕಲ್ಪನೆಯ ಬಳಕೆ."

'ಷೀ'*ಯನ್ನು ಬರೆಯಲು ಕುಳಿತುಕೊಂಡಾಗ ಅವನೆಂದ, "ನನ್ನ ನೋಯುವ ಬಡ ಕೈಗಳು ಬರೆಯುವುದಕ್ಕೂ ಹೆಚ್ಚು ವೇಗವಾಗಿ ಅದು (ಕತೆ) ಹೊರಹೊಮ್ಮುತ್ತಿತ್ತು." ಆರು ವಾರಗಳಲ್ಲಿ ಅಸಾಧಾರಣ 'ಷೀ'ಯನ್ನು ಬರೆದು ಮುಗಿಸಿದ. 'ಗ್ರಾಫಿಕ್' ಎಂಬ ವಾರಪತ್ರಿಕೆಯಲ್ಲಿ ಅದು ಧಾರಾವಾಹಿಯಾಗಿ ಪ್ರಕಟವಾಯಿತು. ೧೮೮೭ರಲ್ಲಿ ಅದು ಪುಸ್ತಕರೂಪವಾಗಿ ಪ್ರಕಟಗೊಂಡ ಮೇಲೆ ವಿವಾಹದನಂತರ ಎದುರಾದ ಆತನ ಕಠಿಣ ಆರ್ಥಿಕ ಸ್ಥಿತಿಯನ್ನು ಅದು ಸಡಿಲಗೊಳಿಸಿತು. ಅಲ್ಲಿಂದೀಚೆಗೆ ಈ ಕೃತಿ ನಲವತ್ತಕ್ಕೂ ಹೆಚ್ಚು ವಿವಿಧ ಭಾಷೆಗಳಲ್ಲಿ ಎಂಟು ಲಕ್ಷ ಪ್ರತಿಗಳಾಗಿ ಮುದ್ರಣಗೊಂಡಿದೆ! ಚಲನಚಿತ್ರವಾಗಿಯೂ ಮಿಂಚಿದೆ. 'ಷೀ'ಯ ಬಗ್ಗೆ ಆತ ತೃಪ್ತಿಯಿಂದ ಹೀಗೆಂದ: "ಅದನ್ನು ಎರಡನೇ ಬಾರಿ ಬರೆಯಲೇ ಇಲ್ಲ. ಹಸ್ತಪ್ರತಿಯಲ್ಲಿ ತಿದ್ದುಪಡಿಗಳೂ ಅತಿ ಕಡಿಮೆ." ಈ 'ಷೀ'ಯೊಂದೇ ಆತನನ್ನು ಅತ್ಯುತ್ತಮ ಊಹಾಶಕ್ತಿಯ ಅದ್ಭುತ ಸಾಹಸ ಕತೆಗಾರರಲ್ಲೊಬ್ಬನನ್ನಾಗಿ ಪ್ರತಿಷ್ಠಿಸಬಲ್ಲದು. ಅದಕ್ಕೆ ಪೂರಕವಾಗಿ ಬರೆದ 'ದಿ ರಿಟರ್ನ್ ಆಫ್ ಷೀ'§ಯೂ ಆ ಮಟ್ಟಕ್ಕೇರಲಿಲ್ಲವೆಂದು ಹೇಳುವುದಿದೆ.

'ಷೀ' ಕಾದಂಬರಿಯ ಯಶಸ್ಸನ್ನು 'ಅಲೆನ್ ಕ್ವಾಟರ್‌ಮಯಿನ್' ಮುಂದುವರಸಿತು. ಆದರೆ 'ಕ್ಲಿಯೋಪಾತ್ರ' ವಿಫಲವಾಯಿತು. 'ಅಲೆನ್ಸ್ ವೈಫ್' ಮತ್ತು 'ಮೈದಾಸ್ ರಿವೆಂಜ್' ಅವನ ಅತ್ಯುತ್ತಮ ಗ್ರಂಥಗಳೆಂದು ಪರಿಗಣಿಸಲ್ಪಟ್ಟಿವೆ. ಸಾಹಸ ಕಥೆಗಳು ಬೇಕೆಂಬ ಸಾರ್ವಜನಿಕರ ಬೇಡಿಕೆಗೆ ತಲೆಬಾಗಿ ಆ್ಯಂಡ್ರ್ಯೂ ಲ್ಯಾಂಗ್ ನೊಡಗೂಡಿ ಹೋಮರ್‌ನ 'ಯೂಲಿಸಿಸ್'ನ ಸಾಹಸಗಳ ಮುಂದಣ ಭಾಗವೆಂದು 'ದಿ ವರ್ಲ್ಡ್ಸ್ ಡಿಸೈರ್' ಬರೆದ.

೧೮೯೧ರಲ್ಲಿ ಇದೇ ಮಾದರಿಯ ಆದರೆ ಹೆಚ್ಚು ಯಶಸ್ವಿಯಾದ 'ಎರಿಕ್ ಬ್ರೈಟ್ ಐಯ್ಸ್' ಪ್ರಕಟವಾಯಿತು. ಆತನ ಎಲ್ಲಾ ಗ್ರಂಥಗಳ ಪೈಕಿ 'ನಾಡಾ ದಿ ಲಿಲ್ಲೀ' (ಒಂದು ಜೂಲೂ ನಿಜಕತೆ) ಯೊಂದೇ ವಿಮರ್ಶಾತ್ಮಕ ಓದನ್ನು ಎದುರಿಸಿತು. ಉತ್ಸುಕತೆಯಿಂದ ಲ್ಯಾಂಗ್ ಉದ್ಗರಿಸಿದ: "ನಶಿಸುತ್ತಿರುವ ಜನಾಂಗದ ಕಥೆ– ಸಾಹಿತ್ಯದಲ್ಲೇ

* 'ಕಸ್ತೂರಿ'ಯ ಏಪ್ರಿಲ್ ಮತ್ತು ಮೇ ೧೯೬೫ರ ಪುಸ್ತಕ ವಿಭಾಗದ 'ಚಿರಯೌವನೆ' ನೋಡಿರಿ.

§ ಈ ಪುಸ್ತಕದ ಸಾರ ಸಂಕ್ಷೇಪ ಈ ಸಂಚಿಕೆಯ ಪುಸ್ತಕ ವಿಭಾಗದಲ್ಲಿ

ಏಕೈಕವಾದುದು." ಚಾರ್ಲ್ಸ್ ಲಾಂಗ್ ಬರೆದ: "ನಾಡಾ ನನಗೆ ಅದ್ಭುತ ಮತ್ತು ಭೀಷಣವಾಗಿ ಮಿಂಚುತ್ತಾಳೆ." ಸಮೋಆದಲ್ಲಿದ್ದ ಆರ್. ಎಲ್. ಸ್ಟೀವನ್‌ಸನ್ನನಿಂದ ನಿರ್ದಾಕ್ಷಿಣ್ಯ ಸಮ್ಮತಿ ಬಂದಿತು. "ನಾಡಾ ದಿ ಲಿಲ್ಲೀ ಷಿ-ಬಿಸ್." ಗ್ರಂಥಕರ್ತನ ಅಭಿಪ್ರಾಯವೆಂದರೆ, "ಇದೊಂದು ಶುದ್ಧ ಜೂಲೂ ಕತೆ...... ನಾನಿದನ್ನು ನನ್ನ ಅತ್ಯುತ್ತಮ ಕೃತಿ ಅಥವಾ ಅವುಗಳ ಪೈಕಿ ಒಂದೆಂದು ಪರಿಗಣಿಸುತ್ತೇನೆ." ಎಡ್ವರ್ಡ್ ಬಾಯ್ಡ್‌ನ ವಿಮರ್ಶೆ ಹೀಗಿದೆ: "ತಾಂತ್ರಿಕವಾಗಿ ಇದು ಹಗ್ಗಾರ್ಡ್‌ನ ಅತ್ಯುತ್ತಮ ಸಾಧನೆ, ಅದ್ಭುತ ಕತೆ, ಹಿಂಸಾತ್ಮಕ, ಗಂಭೀರ, ಅನಾಗರಿಕ ಬಲವಂತ ಮತ್ತು ಪಶ್ಚಾತ್ತಾಪರಹಿತವೆಂದು ಮಾತ್ರವೇ ವಿವರಿಸಬಹುದಾದ ಲಯಬದ್ಧತೆ." ಈ ಕೃತಿಯಲ್ಲಿ ಚಿತ್ರಿಸಲಾದ ರಕ್ತಪಾತ ಮತ್ತು ಕೊಲೆಗಳಿಗಾಗಿ ಅನೇಕರು ಅವನನ್ನು ಜರೆದದ್ದುಂಟು. ಸರ್ ಎ. ಕ್ಯೂ. ಕೋಚ್ ಆತನನ್ನು "ಹುಡ್ * ಕಾದಂಬರಿಕಾರ" ಎಂದು ಹೀಗಳೆದ. ಇಷ್ಟಾದರೂ ಕಪ್ಪು ನೆಪೋಲಿಯನ್ ಎಂದೇ ಖ್ಯಾತನಾದ ಚಾಕಾ (ಕಾದಂಬರಿಯ ಒಂದು ನಿಜ ಪಾತ್ರ) ಸುಮಾರು ಹತ್ತು ಲಕ್ಷ ಜನರ ಸಾವಿಗೆ ಕಾರಣನಾದನೆಂಬ ಚಾರಿತ್ರಿಕ ನಿಜಾಂಶ ಹಾಗೇ ಉಳಿಯುತ್ತದೆ.

ಜೂಲೂಗಳು ಹಗ್ಗಾರ್ಡನನ್ನು ಶ್ರೀಮಂತನನ್ನಾಗಿಸಿದರು. ಆತನ ಅತ್ಯುತ್ತಮ ಕೃತಿಗಳನ್ನು ಹುಟ್ಟುಹಾಕಿದರು.

೧೮೯೧ ರಲ್ಲಿ ಆತ ಮೆಕ್ಸಿಕೋಗೆ ಪ್ರಯಾಣ ಬೆಳೆಸಿದ. ಅಲ್ಲಿ ಚಕ್ರವರ್ತಿ ಮಾಂಟೆ ಜೂಮಾನ ಹೂತಿಟ್ಟ ನಿಧಿಯ ಫಲ ಸಿಗದ ಅನ್ವೇಷಣೆಯಲ್ಲಿ ತೊಡಗಿ ಸಾಹಸ ಮತ್ತು ಕಷ್ಟಗಳನ್ನು ತಂದುಕೊಂಡ. ಈ ಅನುಭವದ ಫಲಿತಾಂಶವೇ 'ಮಾಂಟೆ ಜೂಮಾಸ್ ಡಾಟರ್.' ದೂರದ ಮೆಕ್ಸಿಕೋದಲ್ಲಿದ್ದಾಗ ಆತನ ಒಬ್ಬನೇ ಮಗ ತೀರಿಕೊಂಡ. "ಅನೇಕ ವರ್ಷಗಳವರೆಗೆ ನಾನು ಈ ಆಘಾತದಿಂದ ಚೇತರಿಸಿಕೊಳ್ಳಲೇ ಇಲ್ಲ" ಎಂದು ಅನಂತರ ಬರೆದ. ನರದೌರ್ಬಲ್ಯ, ಇನ್‌ಫ್ಲೂಎಂಝಾ ಮತ್ತು ತೀರಾ ಅಶಕ್ತಿಯಿಂದ ಬಳಲಿ ಕೊನೆಗೆ ಕಾರ್ಯದರ್ಶಿಯೊಬ್ಬನಿಗೆ ಹೇಳಿ ಕೃತಿಗಳನ್ನು ಬರೆಸಬೇಕಾಯಿತು.

ಕೆಲ ಕಾಲ ರಾಜಕೀಯದಲ್ಲೂ ಆಸಕ್ತಿ ವಹಿಸಿ ಕನ್ಸರ್ವೇಟಿವ್ ಅಭ್ಯರ್ಥಿಯಾಗಿ ಪೂರ್ವ ನಾರ್ಫೋಕ್ ಕ್ಷೇತ್ರದಿಂದ ಕೆಳಮನೆಗೆ ಚುನಾವಣೆಯಲ್ಲಿ ಸ್ಪರ್ಧಿಸಿ ಸೋತ. ಸ್ಥಳೀಯ ನ್ಯಾಯಾಧೀಶರ ಬೆಂಚಿನ ಮುಖ್ಯಸ್ಥನಾಗಿ ಮುಂದುವರೆಯುತ್ತಲೇ ತನ್ನ ಸಾಮರ್ಥ್ಯವನ್ನು ಮನಃಪೂರ್ವಕವಾಗಿ ಕೃಷಿ ಮತ್ತು ಸ್ಥಳೀಯ ಆಡಳಿತಕ್ಕೆ ಬಳಸತೊಡಗಿದ. ಆಫ್ರಿಕದ ಆಂಗ್ಲೋ-ಆಫ್ರಿಕನ್ ಬರಹಗಾರರ ಸಂಘದ ಅಧ್ಯಕ್ಷನಾಗಿಯೂ 'ಆಫ್ರಿಕನ್ ರಿವ್ಯೂ'ದ ಸಹನಿರ್ದೇಶಕನಾಗಿಯೂ ಹಗ್ಗಾರ್ಡ್ ಸೇವೆ ಸಲ್ಲಿಸಿದ. 'ಗ್ರಾಮೀಣ ಇಂಗ್ಲೆಂಡ್' ಮತ್ತು 'ಗ್ರಾಮೀಣ ಡೆನ್ಮಾರ್ಕ್' ಎಂಬ ಎರಡು ಗ್ರಂಥಗಳನ್ನು ಆಗಿನ ಕಾಲದ ಆದೇಶಗಳ ಕೃಷಿ ಸ್ಥಿತಿಗತಿಗಳ ಬಗ್ಗೆ ರಚಿಸಿದ. ೧೯೦೫ ರಲ್ಲಿ ಅಮೇರಿಕದ ಸಾಲ್ವೇಷನ್ ಆರ್ಮಿಯು ಆರಂಭಿಸಿದ ಕೃಷಿ ಮತ್ತು ಔದ್ಯೋಗಿಕ ನೀತಿಗಳ ಬಗ್ಗೆ ವರದಿ ನೀಡಲು ಒಬ್ಬ ಕಮಿಷನರ್ ಆಗಿ ಹಗ್ಗಾರ್ಡನನ್ನು ಅಮೇರಿಕಕ್ಕೆ ಕಳುಹಿಸಲಾಯಿತು. ಇದರ ಫಲಿತಾಂಶವೇ 'ದಿ ಜನರೇಶನ್'.

೧೯೧೨ ರಲ್ಲಿ ಆತನಿಗೆ ಸರ್ ಪದವಿ ನೀಡಿ ಗೌರವಿಸಲಾಯಿತು. ವಸಾಹತು ವ್ಯಾಪಾರದ ಉಸ್ತುವಾರಿ ನೋಡುವ ಡೊಮಿನಿಯನ್ ರಾಯಲ್ ಆಯೋಗಕ್ಕೆ ನೇಮಿಸಲಾಯಿತು. ಆಸ್ಟ್ರೇಲಿಯ, ನ್ಯೂಜಿಲೆಂಡ್, ದಕ್ಷಿಣ ಆಫ್ರಿಕ ಮತ್ತು ಕೆನಡಾ ದೇಶ ಸುತ್ತಿ ಇಂಗ್ಲಂಡಿಗೆ ಮರಳಿದ. ರಾಯಲ್ ಕಲೋನಿಯಲ್ ಸಂಸ್ಥೆಯಲ್ಲಿ ಆತನ ಸೇವೆಗಾಗಿ ಆ ಸಂಸ್ಥೆಯು ಆಜೀವ ಗೌರವ ಸದಸ್ಯತ್ವ ನೀಡಲಾಯಿತು. ೧೯೧೯ ರಲ್ಲಿ ಆತನಿಗೆ ಕೆ. ಬಿ. ಇ. (ಬ್ರಿಟಿಷ್ ಚಕ್ರಾಧಿಪತ್ಯದ

---

* ಹಿಂಸಾಚಾರ ಪ್ರತಿಪಾದಿಸುವ ಒಂದು ಸಂಸ್ಥೆ.

ಸೇನೆಯ ಹುದ್ದೆ) ನೀಡಲಾಯಿತು.

ಜೀವನದ ಕೊನೆ ವರ್ಷಗಳಲ್ಲಿ ಹಗ್ಗಾರ್ಡ್ ರೋಗಗ್ರಸ್ತನಾಗಿ ೧೯೨೫ನೇ ಮೇ ೧೪ರಂದು ಒಂದು ವಸ್ತ್ರಚಿಕಿತ್ಸೆಯ ನಂತರ ಕೊನೆಯುಸಿರೆಳೆದ. ಆತ ಒಟ್ಟು ಬರೆದದ್ದು ೫೩ ಕಾದಂಬರಿಗಳು. ಪತ್ರಿಕೆಗಳಿಗೆ ಬರೆದ ಪತ್ರಗಳು, ವಿಮರ್ಶೆಗಳು, ವರದಿಗಳು, ಕಥೆಗಳು ಮುಂತಾಗಿ ಎಲ್ಲ ಪ್ರಕಾರದಲ್ಲಿ. ಆತ ತೀರಿಕೊಂಡ ಅನಂತರದ ವರ್ಷಗಳಲ್ಲಿ ಅವನ ಕಥೆಗಳ ಜನಪ್ರಿಯತೆ ಕುಂದಿತು.

೧೯೪೫ ರಲ್ಲಿ ಆ್ಯಂಡ್ರ್ಯೂ ಲ್ಯಾಂಗ್ ಒಂದು ಶಾಲಾ ಗ್ರಂಥಾಲಯದಲ್ಲಿ ಅರ್ಧ ವರ್ಷದಲ್ಲಿ ಮಕ್ಕಳು ಓದಲು ಎರವಲು ಪಡೆದ ಪುಸ್ತಕಗಳ ಪಟ್ಟಿಯೊಂದನ್ನು ಪ್ರಕಟಿಸಿದ. ೬೬ ಅಂಕಗಳಿಂದ ಹಗ್ಗಾರ್ಡ್ ಮೊದಲ ಸ್ಥಾನದಲ್ಲಿದ್ದ— ಸರ್ ವಾಲ್ಟರ್ ಸ್ಕಾಟ್‌ನ ಕಾದಂಬರಿಗಳಿಗಿಂತಲೂ ಎರಡು ಪಟ್ಟು ಹೆಚ್ಚಿನ ಸ್ಥಾನ! ಸಾಹಸ ಕತೆಗಳ ಬರಹಗಾರನಾಗಿ ಆತನ ಜನಪ್ರಿಯತೆಯನ್ನು ಸೂಚಿಸಲು ಗ್ರಂಥಗಳ ಮುದ್ರಣ ಸಂಖ್ಯೆಗಳೇ ಸಾಕು. 'ದಿ ರಿಟರ್ನ್ ಆಫ್ ಷೀ' ಯು ೧೯೦೫ ರಲ್ಲಿ ಮೊದಲ ಮುದ್ರಣ ಕಂಡಾಗ ೨೫,೦೦೦ ಪ್ರತಿಗಳನ್ನು ಅಚ್ಚು ಹಾಕಲಾಯಿತು. ಆ ಕಾಲದಲ್ಲಿ ಇದೊಂದು ಅಗಾಧ ಸಂಖ್ಯೆ.

ಮಾಲ್ಕಂ ಎಲ್ವಿನ್ ಹೇಳಿದಂತೆ, "ಆತನ ಅಚ್ಚುಕಟ್ಟಾದ ಕತೆಗಳು ಪ್ರಣಯ ಸಾಹಸದ ಕಾವ್ಯವನ್ನು ಉಸಿರಾಡುತ್ತವೆ". ದಿ ಟೈಮ್ಸ್ ಪತ್ರಿಕೆ ಆತನ ನಿಧನ ವಾರ್ತೆಯಲ್ಲಿ, "ಸಾಹಸ ಕತೆಗಳ ಬರಹಗಾರ, ವ್ಯವಸಾಯ ತಜ್ಞ, ಇಂಪೀರಿಯಲ್ ರಾಜಕಾರಣಿ... ಯೋಗಿ ಎನ್ನಿಸಿದರೂ ವಿರಕ್ತನಲ್ಲದ... ತನ್ನ ಕಾಲ ಹಾಗೂ ಪ್ರತಿನಿಧಿಸಿದವರಲ್ಲಿ ಎದ್ದು ಕಾಣುವ. ಚಿತ್ರಮಯ ಹಾಗೂ ವೈವಿಧ್ಯಮಯ ವ್ಯಕ್ತಿತ್ವಗಳ ಪೈಕಿ




ಒಬ್ಬ" ಎಂದು ವರ್ಣಿಸಿ ಟಿಪ್ಪಣಿ ಬರೆಯಿತು.

ಇವೆಲ್ಲಕ್ಕಿಂತ ಹೆಚ್ಚಾಗಿ, ಎಡ್ವರ್ಡ್ ಬಾಯ್ಡ್ ಹೇಳಿದಂತೆ; "ಕಥಾತಂತ್ರಜ್ಞನಾಗಿ ಆತನ ಮಿತಿಗಳ ಬಗ್ಗೆ ಅನೇಕ ವಿಮರ್ಶಕರು ಟೀಕೆ ಮಾಡಿದ್ದಾರೆ. ಮಾನವನ ಮಾನಸಿಕ ಸ್ಥಿತಿಯನ್ನು ಹೆಚ್ಚು ಕಡಿಮೆ ಇಡಿಯಾಗಿ ಕಳಂಕಗೊಳಿಸದೇ ಬಿಟ್ಟನೆಂದು ಉದ್ಗರಿಸಲು ಇನ್ನನೇಕರು ಹೇಳಿದ್ದಾರೆ. ಸಾಹಿತ್ಯಕ ಲೆಕ್ಕಾಚಾರದ ನಿಯಮಗಳನ್ವಯ ಮುಂಬರುವ ಜನಾಂಗವು ಆತನಿಗೇನೂ ಋಣಿಯಾಗಿರಬೇಕಾಗಿಲ್ಲ. ಆದರೆ ಅವನು (ತನ್ನ ಗ್ರಂಥಗಳ) ಪುನರ್ ಮುದ್ರಣಗಳ ಮೂಲಕ ಇಂದಿಗೂ ನಮ್ಮೊಂದಿಗಿದ್ದಾನೆ" ಅಂತೆಯೆ ಹಗ್ಗಾರ್ಡ್ ಸಾವಿಲ್ಲದ – ಸಾಹಸ – ಕತೆಗಳ ಲೇಖಕ. ✡



ಮೂಲ :
ಇ. ಎಫ್. ಬ್ಯಾನ್ಸನ್

ಕನ್ನಡಕ್ಕೆ :
ವಾಲ್ಟರ್ ಲಸ್ರಾದೊ

# ನರಳುವ ದೆವ್ವ

ಇನ್ನೇನು ಆ ವಾರದಲ್ಲಿ ಗಲ್ಲಿಗೇರಲಿದ್ದ ಆ ಕೈದಿಯನ್ನು ಡಾ. ಸ್ಟ್ಯಾನ್ಲೆ ಎರಡು ಸಲ ಕಾಣಬೇಕಾಯಿತು. ಜೀವದಾನಕ್ಕಾಗಿ ಮಾಡಿಕೊಂಡಿದ್ದ ತನ್ನ ಮನವಿ ತಿರಸ್ಕೃತವಾದದ್ದು ಗೊತ್ತಾದಾಗ ಸ್ಮೃತಿತಪ್ಪಿ ಬಿದ್ದಿದ್ದ ಆ ಕೈದಿಯ ಶುಶ್ರೂಷೆಗಾಗಿ ಡಾ. ಸ್ಟ್ಯಾನ್ಲೆಯವರನ್ನು ಕೇಳಿಕೊಳ್ಳಲಾಗಿತ್ತು. ಆತ ಸ್ಮೃತಿ ತಿಳಿದೆದ್ದಮೇಲೆ, ಅದೃಷ್ಟದಲ್ಲಿದ್ದಂತೆ ಆಗುವುದನ್ನು ತಪ್ಪಿಸಲಾಗುವುದಿಲ್ಲ-ಅದನ್ನು ಸ್ವೀಕರಿಸಲೇಬೇಕಾಗುತ್ತದೆ ಎಂದು ಡಾ. ಸ್ಟ್ಯಾನ್ಲೆ ಬುದ್ಧಿವಾದ ಹೇಳಿದ ಮೇಲೆಯೇ ಆ ಕೈದಿಗೆ ಫಾಶಿ ಶಿಕ್ಷೆಯ ಬಗೆಗಿದ್ದ ಹೆದರಿಕೆ ಅಷ್ಟಿಷ್ಟು ದೂರವಾಯಿತು.

ಆತನ ಅಪರಾಧವೆಂದರೆ ಕೊಲೆ. ವಿಚಿತ್ರ ರೀತಿಯ ಭಯಾನಕ ಕೊಲೆ. ಹೀಗಾಗಿ ಚಾರ್ಲ್ಸ್ ಕೊಲೆಗಾರ ಎಂದು ಗೊತ್ತಾದ ಮೇಲೆ ಯಾರಿಗೂ ಆತನ ಮೇಲೆ ಮರುಕವುಳಿದಿರಲಿಲ್ಲ. ಚಾರ್ಲ್ಸ್ ಚಿಕ್ಕ ಅಂಗಡಿಯೊಂದನ್ನಿಟ್ಟುಕೊಂಡಿದ್ದ. ಮನೆಯಲ್ಲಿದ್ದವರು ಮೂವರೇ— ಚಾರ್ಲ್ಸ್, ಆತನ ತಾಯಿ ಮತ್ತು ಹೆಂಡತಿ.

ಚಾರ್ಲ್ಸ್ ಕೊಲೆಗೈದದ್ದು ತನ್ನ ತಾಯಿಯನ್ನೇ. ಬ್ಯಾಂಕಿನಲ್ಲಿ ಅವಳ ಖಾತೆಯಲ್ಲಿದ್ದ ೫೦೦ ಪೌಂಡುಗಳನ್ನು ಸ್ವಾಧೀನಪಡಿಸಿಕೊಳ್ಳುವುದೇ ಈ ಕೊಲೆಯ ಹಿಂದಿನ ಕಾರಣ. ಆ ಹಣ ಕೈಗೆ ಬಂದುಬಿಟ್ಟರೆ ತನ್ನೆಲ್ಲ ಸಾಲವನ್ನು ಮರಳಿಸಿಬಿಡಬಹುದೆಂಬ ಯೋಚನೆ ಆತನದು. ಹಣಕ್ಕಾಗಿ ತಾಯಿಯನ್ನು ಬೇಡಿದ, ಕಾಡಿದ. ಆಕೆ ಜಗ್ಗದಾದಾಗ ಜಗಳಕ್ಕೆ ನಿಂತ. ಎರಡು ವರ್ಷಗಳಿಂದಲೂ ಹೀಗೆಯೇ ನಡೆದಿತ್ತು. ತಾಯಿ-ಮಗನ ಜಗಳದಿಂದ ಚಾರ್ಲ್ಸ್‌ನ ಹೆಂಡತಿಗೆ ತಲೆಚಿಟ್ಟು ಹಿಡಿದು ಹೋಗಿತ್ತು. “ನಾನು ಈ ಮನೆಯಲ್ಲಿರುವುದೇ ಇಲ್ಲ— ಓಡಿಹೋಗುತ್ತೇನೆ” ಎಂದಾಕೆ ಗಂಡನಿಗೆ ಬಹಳ ಸಲ ಹೇಳಿದ್ದಳು.

ಹೀಗೊಮ್ಮೆ ಆತನ ಹೆಂಡತಿ ಬೇರೆ ಊರಿಗೆ ಹೋದಳು ಬೇಜಾರು ಕಳೆಯಲೆಂದು. ಆ ಸಂದರ್ಭದಲ್ಲಿಯೇ ಈ ಕೊಲೆ ನಡೆದದ್ದು. ಯಥಾಪ್ರಕಾರ ಅವರಿಬ್ಬರಲ್ಲಿ ವಾಗ್ಯುದ್ಧ ನಡೆದು, “ನಾಳೆಯೇ ನಾನು ಎಲ್ಲಿಯಾದರೂ ದೂರದ ಊರಿಗೆ ಹೋಗಿಬಿಡುತ್ತೇನೆ. ಪರಿಚಿತರ ಮನೆಯಲ್ಲೋ ವೃದ್ಧಾಶ್ರಮದಲ್ಲೋ ಇದ್ದುಬಿಡುತ್ತೇನೆ. ಆಯಿತೆ ?”ಎಂದವಳೇ ಬ್ಯಾಂಕಿಗೆ ಹೋಗಿ ತನ್ನ ಖಾತೆಯಲ್ಲಿದ್ದ ಹಣವನ್ನೆಲ್ಲ ತಂದಿಟ್ಟುಕೊಂಡು ಮರುದಿನ ಹೋಗಿಬಿಡುವ ನಿರ್ಧಾರದಿಂದ ತಯಾರಿಯನ್ನು ನಡೆಸತೊಡಗಿದಳು.

ಆ ರಾತ್ರಿಯೇ ಅವಳ ಕೊಲೆಯಾಯಿತು. ಚಾರ್ಲ್ಸ್ ಆಕೆಯ ಕತ್ತು ಹಿಸುಕಿದ್ದ.

ಆಕೆಯ ಬಟ್ಟೆಬರೆ, ಸಾಮಾನು ಸರಂಜಾಮನ್ನೆಲ್ಲ ಒಂದು ಪೆಟ್ಟಿಗೆಯುಲ್ಲಿ ತುಂಬಿ, ಕೀಲಿ ಜಡಿದು, ರೈಲು ನಿಲ್ದಾಣಕ್ಕೊಯ್ದು, ಹೊರಡಲು ತಯಾರಾಗಿದ್ದ ಗಾಡಿಯ ಡಬ್ಬಿಯೊಂದರಲ್ಲಿಟ್ಟು ಬಂದ ಚಾರ್ಲ್ಸ್. ಶವವನ್ನಂತೂ ಮನೆಯ

ಹಿಂಬದಿಯ ತೋಟದಲ್ಲಿ ಹೂತಿದ್ದ. ಮನೆಯಲ್ಲಿ ತಾನೊಬ್ಬನೇ ಇರುವುದಾಗಿಯೂ, ತಾಯಿ ಜಗಳವಾಡಿ ಮನೆಬಿಟ್ಟು ಹೋದಳೆಂದೂ, ಹೆಂಡತಿ ತವರಿಗೆ ಹೋದಾಕೆ ಇನ್ನೂ ಬಂದಿಲ್ಲ. ಆದ್ದರಿಂದ ತನ್ನೊಂದಿಗೆ ತನ್ನ ಮನೆಯಲ್ಲಿಯೇ ಊಟ ಮಾಡಿರೆಂದು ಕೆಲವು ಗೆಳೆಯರನ್ನು ಆಮಂತ್ರಿಸಿದ. ಅವರೊಂದಿಗೆ ಊಟ ಮಾಡುತ್ತಿದ್ದಾಗ, "ಸದಾ ಜಗಳ ಕಾಯುತ್ತಿತ್ತು ಮುದುಕಿ. ಈಗ ಮನೆಬಿಟ್ಟುಹೋಗಿ ಮನಸ್ಸಿಗಿಷ್ಟು ಸಮಾಧಾನವಾದರೂ ದೊರೆಯುವಂತೆ ಮಾಡಿಬಿಟ್ಟಾಳೆ ಮಹಾರಾಯ್ತಿ. ಮನೆಯಲ್ಲೀಗ ಶಾಂತಿ ನೆಲೆಸುವಂತಾಯಿತು," ಎಂದ.

ಅತ್ತೆಯ ವಿಳಾಸ ಗೊತ್ತಿದ್ದರೆ ಸೊಸೆ ಪತ್ರ ಬರೆಯದೇ ಬಿಡುವವಳಲ್ಲವೆಂಬುದು ಚಾರ್ಲ್ಸ್‌ನಿಗೆ ಗೊತ್ತು. ಆದ್ದರಿಂದ ಹೆಂಡತಿ ಮರಳಿ ಬಂದ ಮೇಲೆಯೂ ಅದೇ ಕಥೆಯನ್ನಾತ ಹೇಳತೊಡಗಿದ. ಈ ಸಲದ ಜಗಳ ಭಯಂಕರವಾಗಿತ್ತೆಂದೂ, ಸಿಟ್ಟಿನಿಂದ ಮನೆ ಬಿಟ್ಟುಹೋದ ತಾಯಿ ತಾನೆಲ್ಲಿ ಹೋಗುತ್ತೇನೆಂದು ಹೇಳದೆ ಹೋಗಿದ್ದರಿಂದ ಆಕೆಯ ವಿಳಾಸ ಗೊತ್ತಿಲ್ಲವೆಂದೂ ಹೆಂಡತಿಗೆ ಸಮಜಾಯಿಷಿ ನೀಡಿದ.

ಮುಂದೆ ಕೆಲವು ದಿನಗಳವರೆಗೆ ಅವನ ಬದುಕಿನ ರೀತಿಯೇನೂ ಬದಲಾಗಲಿಲ್ಲ. ತನ್ನ ಸಾಲವನ್ನೂ ತೀರಿಸುವ ಆತುರ ತೋರಿಸಲಿಲ್ಲ ಆತ. ಮನೆಯೊಳಗೆ ಒಬ್ಬ ಬೋರ್ಡರ್‌ನನ್ನು ಇರಿಸಿಕೊಂಡು ತನ್ನ ತಾಯಿಯ ಕೋಣೆಯನ್ನು ಅವನಿಗಾಗಿ ಬಿಟ್ಟುಕೊಟ್ಟ. ಖರ್ಚು ಕಡಿಮೆ ಮಾಡಿ, ಆದಾಯವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಆತ ಹಾಗೆ ಮಾಡಿದನೆಂದು ಉಳಿದ ಅಂಗಡಿಯವರೂ, ಆತನ ಗೆಳೆಯರೂ ತಿಳಿದುಕೊಳ್ಳಲೆಂದು ಅಂಗಡಿಯಲ್ಲಿ ಕೆಲಸಕ್ಕಿದ್ದ ಆಳನ್ನು ತೆಗೆದು ಹಾಕಿ ಎಲ್ಲ ಕೆಲಸವನ್ನು ತಾನೇ ನೋಡಿಕೊಳ್ಳತೊಡಗಿದ. ತನ್ನ ವ್ಯಾಪಾರ ಇತ್ತೀಚೆಗೆ ಬಹಳ ಸುಧಾರಿಸಿದೆ ಎಂದು ಹೇಳಿಕೊಳ್ಳತೊಡಗಿದ. ಚಾರ್ಲ್ಸ್ ತಿಂಗಳುರುಳಿದ ಮೇಲೆಯೆ ತಾಯಿಯ ಅಸಲಿಗೆ ಕೈ ಹಚ್ಚಿದ.

ದಿನಗಳೆದಂತೆ ಚಾರ್ಲ್ಸ್‌ನ ಜಾಗರೂಕತೆ ಕಡಿಮೆಯಾಗತೊಡಗಿತು. ಹೀಗಾಗಿ ದುಡ್ಡಿನ ವಿಷಯದಲ್ಲಿ ಹೇಗೆ ಯೋಜಿಸಬೇಕೆಂಬುದೇ ಹೊಳೆಯದಾಯಿತು. ಹತ್ತಿರದ ಬ್ಯಾಂಕೊಂದರಲ್ಲಿ ಖಾತೆಯನ್ನು ತೆರೆದು ಐವತ್ತು ಪೌಂಡುಗಳ ನಾಲ್ಕು ನೋಟುಗಳನ್ನು ಜಮಾ ಮಾಡಿದ. ಕೊಡ ತುಂಬಿ ಬಂದ ಮೇಲೆ ನೀರು ಹರಿಯದೆ ಏನು ಮಾಡೀತು? ತಾಯಿಯನ್ನು ಕೊಲೆ ಮಾಡಿದ ದಿನ ಆತ ಆಕೆಯ ಸಾಮಾನುಗಳನ್ನೆಲ್ಲ ತುಂಬಿ ಕೀಲಿ ಜಡಿದು ಗಾಡಿಯಲ್ಲಿರಿಸಿ ಬಂದ ಪೆಟ್ಟಿಗೆ ವಿಳಾಸವಿಲ್ಲದ ಸಾಮಾನುಗಳನ್ನಿಡುವ ಕೋಣೆಗೆ ಹೋಗಿ ಬಿದ್ದಿತ್ತು. ಆಕಸ್ಮಿಕವಾಗಿ ಆ ಕೋಣೆಗೆ ಬೆಂಕಿ ತಗುಲಿ ಈ ಪೆಟ್ಟಿಗೆ ಅರ್ಧ ಸುಟ್ಟಿತ್ತು. ತನಿಖೆಯನ್ನು ಮಾಡುತ್ತಿದ್ದವರು ಪೆಟ್ಟಿಗೆಯಲ್ಲಿ ಅರ್ಧ ಸುಟ್ಟ-ಸುಡದೆ ಸುರಕ್ಷಿತವಾಗುಳಿದಿದ್ದ ಸಾಮಾನುಗಳ ಪಟ್ಟಿಯೊಂದನ್ನು ಮಾಡುತ್ತಿದಾಗ ಚಾರ್ಲ್ಸ್‌ನ ಮನೆಯ ವಿಳಾಸ ಮತ್ತು ತಾಯಿಯ ಹೆಸರಿದ್ದ ಕಾಗದವೊಂದು ದೊರೆಯಿತು. ಕಾನೂನಿನ ಪ್ರಕಾರ ರೈಲ್ವೆಯವರು ಸುಟ್ಟುಹೋದ ಸಾಮಾನಿನ ಬಾಬತ್ತಿನಲ್ಲಿ ನಷ್ಟ ತುಂಬಿ ಕೊಡಬೇಕಿತ್ತು. ಹೀಗಾಗಿ ಚಾರ್ಲ್ಸ್‌ನ ಮನೆಯ ವಿಳಾಸಕ್ಕೆ ಅವನ ತಾಯಿಯ ಹೆಸರಿನಲ್ಲಿ ರೈಲ್ವೆಯಿಂದ ಕಾಗದ ಬಂತು. ಚಾರ್ಲ್ಸ್‌ನ ಹೆಂಡತಿಯ ಕೈಗೇ ಸಿಗಬೇಕೇ ಆ ಪತ್ರ!

ಹಾಗೆ ನೋಡಿದರೆ ಪತ್ರ ತುಂಬ ಸರಳವಾಗಿದ್ದರೂ ಚಾರ್ಲ್ಸ್‌ನ ಪಾಲಿಗೆ ಸಂಕಟಕರವಾಗಿತ್ತು. ಈಗ ಆತ ತನ್ನ ಹೆಂಡತಿಗೆ ರೈಲ್ವೆ ಕಚೇರಿಯಲ್ಲಿ ಆತನ ತಾಯಿಯ ಪೆಟ್ಟಿಗೆ ಏಕೆ ಬಂದು ಬಿದ್ದಿದೆ ಎಂಬ ಬಗೆಗೆ ಸಮಾಧಾನಕರ ಉತ್ತರ ಕೊಡಬೇಕಿತ್ತು. ಮನೆ ಬಿಟ್ಟು ಹೋದ ತನ್ನ ತಾಯಿಗೇನೋ ತೊಂದರೆಯಾಗಿರಬೇಕೆಂದು ಸಂಶಯ ವ್ಯಕ್ತಪಡಿಸುವುದರ ಹೊರತು ಬೇರೇನೂ ದಾರಿ ಅವನಿಗುಳಿದಿರಲಿಲ್ಲ. ತಾಯಿಗೆ ಏನಾಯಿತೆಂದು ತಿಳಿದುಕೊಂಡು, ಅವಳು ಸತ್ತು

ಹೋದ ಪಕ್ಷದಲ್ಲಿ, ಅವಳ ಸೊತ್ತಿಗೆ ತಾನೇ ವಾರಸದಾರನೆಂಬುದನ್ನು ಸಿದ್ಧಪಡಿಸಿ, ತಾಯಿಯ ಖಾತೆಯಲ್ಲಿದ್ದ ಹಣವನ್ನು ಆತ ಪಡೆಯಬೇಕಾಗಿತ್ತು. ಕಾಗದವನ್ನಾತ ಓದು-ತ್ತಿದ್ದಾಗ ಹಾಜರಿದ್ದ ಬೋರ್ಡರ್ ಮತ್ತು ಆತನ ಹೆಂಡತಿಯಿಬ್ಬರೂ ಚಾರ್ಲ್ಸನಿಗೆ ಅದೇ ಸಲಹೆಯಿತ್ತರು. ಇದರಿಂದ ಪಾರಾಗುವುದಂತೂ ಸಾಧ್ಯವೇ ಇರಲಿಲ್ಲ ಆತನಿಗೆ. ಏಕೆಂದರೆ ಆಗಲೇ ಆತನ ತಾಯಿಯ ಪತ್ತೆ ಹಿಡಿಯಲು ಪೋಲೀಸು ತನಿಖೆಯೂ ನಡೆದಿತ್ತು. ಪತ್ತೇದಾರರು ಬ್ಯಾಂಕು ಗಳಲ್ಲಿ ಯಾರ ಖಾತೆಯಲ್ಲಿ ಒಮ್ಮೆಲೇ ಹೆಚ್ಚು ಹಣವನ್ನು ಜಮೆ ಮಾಡಲಾಗಿದೆ, ಜಮೆ ಮಾಡಿದ ವ್ಯಕ್ತಿಯ ಹಿನ್ನೆಲೆ ಸಾಮಾಜಿಕ ಸ್ಥಾನಮಾನ ಏನು ಎಂಬುದನ್ನು ಗೊತ್ತು ಮಾಡಿಕೊಳ್ಳ-ತೊಡಗಿದ್ದರು. ಚಾರ್ಲ್ಸ್ ಸಿಕ್ಕುಬಿದ್ದು ಪೋಲೀಸರ ಅತಿಥಿಯಾದ. ನ್ಯಾಯಾಲಯದಲ್ಲಿ ವಿಚಾ-ರಣೆಯೂ ನಡೆಯಿತು. ಚಾರ್ಲ್ಸ್ ಅಪರಾಧಿ-ಯೆಂದು ಸಾಬೀತಾಯಿತು. ಚಾರ್ಲ್ಸ್‌ನಿಗೆ ಮರಣದಂಡನೆಯ ಶಿಕ್ಷೆ ವಿಧಿಸಲ್ಪಟ್ಟಿತು.

ಆದರೆ ತಪ್ಪೊಪ್ಪಿಕೊಳ್ಳಲು ಚಾರ್ಲ್ಸ್ ಸಿದ್ಧ-ನಿರಲಿಲ್ಲ. ನೇಣು ಗಂಬಕ್ಕೆ ಏರುವ ಮೊದಲು ಕ್ರೈಸ್ತ ಧಾರ್ಮಿಕ ನಿಯಮದ ಪ್ರಕಾರ ಅವನು ಪಾಪ ನಿವೇದನೆ ಮಾಡಿಕೊಳ್ಳುವಂತೆ ಜೈಲಿನ ಪಾದ್ರಿ ಮಾಡಿದ ಪ್ರಯತ್ನಗಳೆಲ್ಲ ವಿಫಲವಾದವು.

ಅಪರಾಧಿಯನ್ನು ಗಲ್ಲಿಗೇರಿಸುವಾಗ ಅಲ್ಲಿ ಡಾ. ಸ್ಟ್ಯಾನ್ಲೆ ಹಾಜರಿದ್ದ. ತಲೆ ಸಹಿತ ಪೂರ್ತಿ ಮುಖ ಕರಿ ಬಟ್ಟೆಯಿಂದ ಮುಚ್ಚಿದ್ದ ಚಾರ್ಲ್ಸ್‌ನ ದೇಹ ಹಗ್ಗದೊಡನೆ ನೇತಾಡುವುದನ್ನು ಆತ ನೋಡಿದ್ದ. ಫಾಶಿಯಾಗಿ ಒಂದು ತಾಸಿನ ನಂತರ ಶವದ ಮರಣೋತ್ತರ ಪರೀಕ್ಷೆಯನ್ನೂ ಡಾ. ಸ್ಟ್ಯಾನ್ಲೆಯೇ ನಡೆಸಿದ. ಆದರೆ ಆ ಸಮಯದಲ್ಲಿ ಮಾತ್ರ ಮೃತನ ಆತ್ಮ ತನ್ನ ಬೆನ್ನ ಮೇಲೆಯೇ ಸವಾರಿ ಮಾಡುತ್ತಿದೆಯೆಂದು ಡಾ. ಸ್ಟ್ಯಾನ್ಲೆಗೆ ಅನ್ನಿಸತೊಡಗಿತ್ತು.

ಇಷ್ಟರಲ್ಲಿ ಒಂದು ಚಿಕ್ಕ ಘಟನೆಯೂ ನಡೆ-ದಿತ್ತು. ಹಗ್ಗ ಮಾಯವಾಗಿತ್ತು. ಶವ ಪರೀಕ್ಷೆಯ ನಂತರ, ಹೆಣದೊಡನೆ ಹಗ್ಗ-ವೇನಾದರೂ ಅಲ್ಲಿ ಕಂಡಿತೆ ಎಂದು ಜೈಲಿನ ವಾರ್ಡನ್‌ಗಳಲ್ಲೊಬ್ಬ ಹುಡುಕಾಡತೊಡಗಿದ. ಹಗ್ಗ ಎಲ್ಲಿಯೂ ಸಿಕ್ಕಲಿಲ್ಲ.

ಡಾ. ಸ್ಟ್ಯಾನ್ಲೆ ಅವಿವಾಹಿತ. ದೊಡ್ಡ ಬಂಗಲೆ-ಯೊಂದರಲ್ಲಿ ವಾಸಿಸುತ್ತಿದ್ದ. ಪಾರ್ಕರ್ ದಂಪತಿಗಳು ಅವನ ಮನೆಯ ಎಲ್ಲ ವ್ಯವಸ್ಥೆ ಗಳನ್ನೂ ನೋಡಿಕೊಳ್ಳಲು ನಿಯುಕ್ತರಾಗಿದ್ದರು. ಹಾಗೆ ನೋಡಿದರೆ ಹೊಟ್ಟೆ ತುಂಬಿಕೊಳ್ಳಲು ವೈದ್ಯವೃತ್ತಿಯನ್ನವಲಂಬಿಸುವ ಪ್ರಮೇಯ-ವೇನೂ ಇರಲಿಲ್ಲ ಆತನಿಗೆ. ಅಪರಾಧಿಗಳ ಕುರಿತು ಸಂಶೋಧನೆ ನಡೆಸುವ ಆಸಕ್ತಿಯಿಂದ ಆತ ಜೈಲಿನ ಡಾಕ್ಟರನಾಗಿ ಕೆಲಸ ಮಾಡುತ್ತಿದ್ದ.

ಆ ಸಂಜೆ ಊಟ ತೀರಿಸಿ ತನ್ನ ಖಾಸಗಿ ಕೋಣೆಯಲ್ಲಿ ಒಬ್ಬನೆ ಕುಳಿತು ವಿಶ್ರಾಂತಿ ಪಡೆಯುತ್ತಿದ್ದಾಗ ಆತನ ಮನಸ್ಸಿನಲ್ಲಿ ಚಾರ್ಲ್ಸ್-ನನ್ನು ಕುರಿತು ಯೋಚನೆ ಹೊರಟಿತು. ಶವ ಪರೀಕ್ಷೆಯ ಸಮಯದಲ್ಲಿ ಚಾರ್ಲ್ಸ್‌ನ ಪ್ರೇತ ತನ್ನ ಬೆನ್ನೇರಿದಂತೆ ಭಾಸವಾಗಿದ್ದುದು ನೆನಪಾ-ಯಿತು.

ಟೇಬಲ್ ಮೇಲಿನ ಫೋನ್ ಕರೆಯತೊಡ ಗಿದಾಗ ಮನಸ್ಸಿನಿಂದ ಚಾರ್ಲ್ಸ್‌ನನ್ನು ದೂರ ತಳ್ಳಿ ಎದ್ದು ರಿಸೀವರ್ ಎತ್ತಿದ. ಆದರೆ ಮಂದ-ವಿದ್ಯುತ್ಪ್ರವಾಹದಿಂದಾಗಿಯೆಂಬಂತೆ ಫೋನಿನ ಗಂಟೆ ಕ್ಷೀಣವಾಗಿ ಬಾರಿಸುತ್ತಿದ್ದುದು ಗಮನಕ್ಕೆ ಬಂತು.

"ಹಲೋ... ಯಾರು?" ಎಂದು ಕೇಳಿದ ಸ್ಟ್ಯಾನ್ಲೆಗೆ ಅರ್ಥವಿಲ್ಲದ ಪಿಸುಮಾತು ಕೇಳಿತು.

"ಸರಿಯಾಗಿ ಕೇಳಿಸ್ತಿಲ್ಲ— ಜೋರಾಗಿ ಮಾತಾಡಿ," ಎಂದ.

ಪುನಃ ಪಿಸುಮಾತು ಕೇಳತೊಡಗಿ ಕ್ರಮೇಣ ಕ್ಷೀಣವಾಗಿ ನಿಶ್ಶಬ್ದ ಆವರಿಸಿತು. ರಿಸೀವರ್ ಕೆಳಗಿಟ್ಟು ಕ್ಷಣಕಾಲ ಯೋಚಿಸಿ, ಕೂಡಲೇ ಎಕ್ಸ್ ಚೇಂಜಿಗೆ ಫೋನು ಮಾಡಿ, "ಈಗ ತಾನೆ ನನಗೆ

ಬಂದ ಫೋನು ಯಾವ ನಂಬರಿಂದ ಮಾಡಿದ್ದೆಂದು ನೋಡಿ ಹೇಳ್ತಿರಾ— ದಯವಿಟ್ಟು? ಎಂದ."

ಫೋನು ಬಂದದ್ದು ಜೈಲಿನಿಂದ ಎಂದು ಗೊತ್ತಾಯಿತು.

"ದಯವಿಟ್ಟು ಆ ನಂಬರಿಗೆ ನನಗೆ ಸಂಪರ್ಕ ಕೊಡಿ."

ಅವನಿಗೆ ಸಂಪರ್ಕ ದೊರೆಯಿತು.

"ಹಲೋ, ನಾನು ಡಾ. ಸ್ಟ್ಯಾನ್ಲೆ ಮಾತಾಡುವುದು. ಈಗ ತಾನೇ ನೀವು ನನಗೆ ಫೋನು ಮಾಡಿ ಮಾತಾಡದೆ ಇಟ್ಟಿದ್ದೇಕೆ?"

"ಆದರೆ ನಾವಾರೂ ನಿಮಗೆ ಫೋನು ಮಾಡಿಯೇ ಇಲ್ಲವಲ್ಲ ಸಾರ್?"

"ಎಕ್ಸ್‌ಚೇಂಜಿನವರು ಹೇಳಿದ ಪ್ರಕಾರ ಫೋನು ನಿಮ್ಮಲ್ಲಿಂದಲೇ ಬಂತು... ಮೂರು ನಿಮಿಷವಾಯಿತು ಆ ಮಾತಿಗೆ."

"ಇಲ್ಲ ಸಾರ್, ಎಕ್ಸ್‌ಚೇಂಜಿನವರು ತಪ್ಪು ಹೇಳಿರಬೇಕು."

"ಛೇ— ವಿಚಿತ್ರವಾಯ್ತಲ್ಲ ಇದು. ಇರಲಿ, ಗುಡ್ ನೈಟ್, ಅಂದ ಹಾಗೆ ನೀವು ವಾರ್ಡರ್ ಡ್ರೆಕೋಟ ಅಲ್ವೆ?"

"ಹೌದು ಸಾರ್. ಗುಡ್ ನೈಟ್."

ಫೋನು ಕುಕ್ಕಿ ಮತ್ತೆ ತನ್ನ ಕುರ್ಚಿಗೆ ಆತು ಕುಳಿತು ಯೋಚನೆಗೀಡಾದ— ಹಾಗಾದರೆ ಫೋನ್ ಬಂದದ್ದು ಎಲ್ಲಿಂದ? ಯಾರಿಂದ?

ಮರುದಿನ ಜೈಲಿಗೆ ಹೋದಾಗಲೂ ತನ್ನ-ನ್ನೊಂದು ಅದೃಶ್ಯ ವ್ಯಕ್ತಿ ಬೆನ್ನಟ್ಟಿದೆ ಎಂದು ಅನಿಸತೊಡಗಿತವನಿಗೆ. ಈಗೇಕೋ ಹೆದರಿಕೆ ಶುರುವಾಯಿತು. ಚಾರ್ಲ್ಸ್‌ನ ಅತೃಪ್ತ ಆತ್ಮವೇ ಇದೆಂದೂ ಅವನಿಗೆ ಮನದಟ್ಟಾಯಿತು. ಯಾಕಾಗಿ ಚಾರ್ಲ್ಸ್‌ನ ಆತ್ಮ ತನ್ನನ್ನು ಬೆನ್ನಟ್ಟಿದೆ? ಏನಾಗಬೇಕಿದೆ ತನ್ನಿಂದ? — ಯೋಚಿಸಿದಷ್ಟೂ ಗೂಢವಾಯಿತು ಆ ಪ್ರಶ್ನೆ.

ಅದನ್ನು ಮರೆಯಲು ಕೆಲವು ಫೈಲುಗಳನ್ನು ತೆರೆದು ಓದಿದನಾದರೂ ಆ ಫೈಲುಗಳಲ್ಲೆಲ್ಲ ಆ ಆತ್ಮ ಅಡಗಿದೆ ಅನಿಸತೊಡಗಿತು. ಸ್ವಲ್ಪ ಧೈರ್ಯ ಮಾಡಿಕೊಂಡು ಜೈಲಿನ ಆವರಣದೆಡೆ ಹೆಜ್ಜೆ ಹಾಕಿದ. ನೇಣು ಹಾಕುವ ಸ್ಥಳಕ್ಕೆ ಹೋಗಿ ಅದರ ಬಾಗಿಲು ತೆರೆದು ಹಣಿಕಿಕ್ಕಿ, ಹಾಗೆ ತಲೆಯನ್ನು ಹಿಂದೆಳೆದುಕೊಂಡು ಬಾಗಿಲು ಮುಚ್ಚಿದ. ಮುಖವೆಲ್ಲ ಬಿಳಿಚಿಕೊಂಡಿತ್ತು. ಅಲ್ಲಿ ನೇಣುಗಂಬದ ಕೆಳಗೆ ಮುಖಕ್ಕೆಲ್ಲ ಕರಿ ವಸ್ತ್ರ ಹಾಕಿದ್ದ ಆಕೃತಿಯೊಂದು ನಿಂತುಕೊಂಡಂತೆ ಕಾಣಿಸಿತು.

ಕೆಲ ನಿಮಿಷ ಸುಧಾರಿಸಿಕೊಂಡ ಮೇಲೆ ಅವನು ಮತ್ತೆ ಧೈರ್ಯ ಪಡೆದು— ತನ್ನ ಭಯಕ್ಕಾಗಿ ತಾನೇ ನಾಚಿಕೊಂಡ. ತನ್ನ ಮನೆಗೆ ಹಿಂದಿರುಗಿ ಜೈಲಿಗೆ ಫೋನು ಮಾಡಿ ಹಿಂದಿನ ರಾತ್ರಿ ತನ್ನೊಂದಿಗೆ ಮಾತಾಡಿದ ವಾರ್ಡರ್‌ನಿಗೆ ತನ್ನನ್ನು ಬಂದು ಕಾಣುವಂತೆ ಹೇಳಿದ.

"ನಿನ್ನೆ ರಾತ್ರಿ ನಾನು ನಿನಗೆ ಫೋನು ಮಾಡಿದ ಸ್ವಲ್ಪ ಹೊತ್ತು ಮುಂಚೆ ಅಲ್ಲಿಂದ ನನಗೆ ಯಾರೂ ಫೋನು ಮಾಡಿಲ್ಲವೆಂದು ಹೇಗೆ ಹೇಳುತ್ತಿ?"

ವಾರ್ಡರ್ ಹಿಂಜರಿಯುತ್ತಿರುವುದು ಡಾ. ಸ್ಟ್ಯಾನ್ಲೆಯ ಗಮನಕ್ಕೆ ಬಂತು. ಸ್ವಲ್ಪ ಹೊತ್ತು ಯೋಚಿಸಿದ ನಂತರ ಆತ,

"ನಾನಂತೂ ಟೆಲಿಫೋನಿನ ಬಳಿಯೇ ಕುಳಿತಿದ್ದೆ. ಅಂದಾಗ ಅಲ್ಲಿಂದ ಯಾರಾದರೂ ಫೋನು ಮಾಡುವುದು ಸಾಧ್ಯವೆ? ಒಂದು ವೇಳೆ ಯಾರಾದರೂ ಫೋನು ಮಾಡಿದ್ದೇ ಆಗಿದ್ದರೆ ಆ ವ್ಯಕ್ತಿಯನ್ನು ನಾನು ನೋಡಬಹುದಿತ್ತಲ್ಲ."

"ನಿನಗೆ ಯಾರೂ ಕಾಣಲಿಲ್ಲವೆ?"

"ಇಲ್ಲ ಸಾರ್. ಯಾರೂ ಕಾಣಲಿಲ್ಲ."

"ಆದರೆ ಫೋನಿನ ಬಳಿ ಯಾರಾದರೂ ನಿಂತಂತೆ ಭಾಸವಾಗಿರಬಹುದಲ್ಲ?" ಸ್ಟ್ಯಾನ್ಲೆ ಮತ್ತೆ ಕೇಳಿದ.

ವಾರ್ಡರ್ ಮತ್ತೆ ಯೋಚನೆಯಲ್ಲಿ ಮುಳುಗಿದ್ದನ್ನು ಕಂಡು ಆತ ಮತ್ತೆ ಹಿಂಜರಿಯುತ್ತಿದ್ದಾನೆಂದುಕೊಂಡ ಸ್ಟ್ಯಾನ್ಲೆ.

"ಸರ್, ಹಾಗಾದರೆ ನಾನು ಬಹುಶಃ ಅರೆನಿದ್ದೆ

ಯಲ್ಲಿದ್ದೇನೋ..."

"ಊಹುಂ, ನಾನು ಹಾಗೆ ಹೇಳಲಾರೆ, ನಮ್ಮ ಕಣ್ಣಿಗೆ ಕಾಣದ ವ್ಯಕ್ತಿಯೊಂದು ನಮ್ಮೊಂದಿಗೆ ಇದೆ ಎಂದು ನಾನು ಸ್ಪಷ್ಟವಾಗಿ ಬಲ್ಲೆ. ನಿನಗೂ ಹಾಗನ್ನಿಸುವುದಿಲ್ಲವೆ?"

"ನಾನು ಅಂಜುಗುಳಿಯಲ್ಲ ಸಾರ್," ಎಂದು ಅರೆಕ್ಷಣ ತಡೆದು. "ಅರ್ಥವಿಲ್ಲದ ಯೋಚನೆಗಳಿಗೆ ಎಡೆಗೊಡುವವನೂ ನಾನಲ್ಲ. ಆದರೆ ಅಲ್ಲಿ ಏನೋ ಇರಬೇಕು.. ಟೆಲಿಫೋನಿನ ಹತ್ತಿರ ಏನೋ ಇತ್ತು... ಸುಮಾರು ಒಂದು ಗಂಟೆಯ ವರೆಗೆ ಕೋಣೆಯಲ್ಲಿ ಅದು ತಿರುಗಾಡುತ್ತಲೇ ಇತ್ತು. ರಾತ್ರಿ ಸೆಕೆಯಲ್ಲೂ ನನಗೆ ಒಳಗೆ ಚಳಿ ಹುಟ್ಟಿತ್ತು."

ಸ್ಟ್ಯಾನ್ಲೆ ಅವನನ್ನೇ ನೋಡಿದ ತೀಕ್ಷ್ಣ ದೃಷ್ಟಿಯಿಂದ.

"ನಿನ್ನೆ ಬೆಳಿಗ್ಗೆ ಏನಾಯಿತು ನೆನಪಿದೆಯೆ?"

"ನೆನಪಿದೆ ಸಾರ್. ಕೈದಿ ಚಾರ್ಲ್ಸ್.."

"ಹಾಂ– ಹೌದು. ಇಂದು ನಿನಗೆ ಡ್ಯೂಟಿ ಇದೆಯೆ?"

"ಇದೆ ಸಾರ್. ಇಲ್ಲದಿದ್ದರೇನೇ ಚೆನ್ನಾಗಿತ್ತು."

"ನಿನ್ನ ಭಾವನೆಗಳನ್ನು ನಾನು ಅರ್ಥ ಮಾಡಿಕೊಳ್ಳಬಲ್ಲೆ. ನನಗೂ ಹಾಗೇ ಅನಿಸುತ್ತಿತ್ತು. ಅದು ಯಾರದೇ ಆತ್ಮವಿರಲಿ, ನನ್ನೊಡನೆ ಅದು ಮಾತಾಡಲು, ಏನೋ ಹೇಳಲು ಪ್ರಯತ್ನಿಸುತ್ತದೆಯೇನೋ ಅನಿಸುತ್ತದೆ. ಅಂದ ಹಾಗೆ ನಿನ್ನೆ ರಾತ್ರಿ ಜೈಲಿನಲ್ಲಿ ಏನಾದರೂ ಗಡಿಬಿಡಿ ಇತ್ತಾ?"

"ಹೌದು ಸಾರ್. ಸುಮಾರು ನಾಲ್ಕಾರು ಕೈದಿಗಳಿಗೆ ಭಯಂಕರ ಕನಸು ಬಿದ್ದ ಹಾಗಿತ್ತು. ಅವರೆಲ್ಲ ಬಡಬಡಿಸುತ್ತಿದ್ದರು, ಹೆದರಿ ಕಿರಿಚುತ್ತಿದ್ದರು."

"ಹಾಗೋ. ಇಂದು ರಾತ್ರಿ ಪುನಃ ಆ ಕಾಣದ ವ್ಯಕ್ತಿ ಫೋನಿನ ಹತ್ತಿರವೇನಾದರೂ ಹೋಗಲೆತ್ನಿಸಿದರೆ ಅಡ್ಡಿ ಮಾಡಬೇಡ. ರಾತ್ರಿ ಒಂಭತ್ತು ಕಾಲಿನಿಂದ ಹತ್ತೂಕಾಲು ಗಂಟೆಯವರೆಗೆ ನೀನು ಟೆಲಿಫೋನು ಇರುವ ಕೋಣೆಗೆ ಹೋಗಬೇಡ. ತಿಳಿಯಿತೆ?"

"ಹೆದರಿಕೆಯೇಕೆ ಸಾರ್?"

"ಹೆದರಿಕೆ? ಇಲ್ಲವೇ ಇಲ್ಲ. ನೀನೂ ಧೈರ್ಯದಿಂದಿರು," ಎಂದು ಆತನನ್ನು ಬೀಳ್ಕೊಟ್ಟ ಡಾ. ಸ್ಟ್ಯಾನ್ಲೆ.

ಅಂದು ರಾತ್ರಿ ಬೇರೆ ಕಡೆ ಕೆಲಸವಿದ್ದರೂ ಒಂಭತ್ತೂ ಕಾಲು ಗಂಟೆಯ ವೇಳೆಗೆ ಸರಿಯಾಗಿ ಅವನು ತನ್ನ ಕೋಣೆಯಲ್ಲಿ ಫೋನಿಗಾಗಿ ಕಾದು ಕುಳಿತ. ಚಾರ್ಲ್ಸ್‌ನ ಆತ್ಮಕ್ಕೇನೋ ಸಹಾಯ ಬೇಕಾಗಿದೆಯೆಂದು ಸ್ಟ್ಯಾನ್ಲೆ ನಂಬಿದ್ದ. ಅದ




"ನೀವು ಈಗಲೇ ಅವರ ರಾಜೀನಾಮೆಗೆ ಒತ್ತಾಯಿಸುವುದು ಬೇಡಾ... ನಿಮ್ಮ ವಿರುದ್ಧ ನ್ಯಾಯಾಲಯದಲ್ಲಿರುವ ಕೇಸಿನ ತೀರ್ಪು ಇಷ್ಟರಲ್ಲೇ ಹೊರಬೀಳುವುದಿದೆ...!"

ಹೋಗಿ ರಿಸೀವರನ್ನೆತ್ತಿ ಮಾತಾಡತೊಡಗಿದ.

"ನಾನು ಡಾ. ಸ್ಟ್ಯಾನ್ಲೆ. ಫಾದರ್ ಜೆರಿಯವರಿಗೆ ನೀನು ಯಾರೆಂಬುದನ್ನು ಸಿದ್ಧಮಾಡಿ ತೋರಿಸುತ್ತೀಯಾ?" ಎಂದು ಕೇಳಿ ಪಾದ್ರಿಯತ್ತ ತಿರುಗಿ, "ಒಪ್ಪಿದ್ದಾನೆ" ಎಂದ.

ಕೋಣೆಯಲ್ಲಿ ತುಂಬ ಸೆಕೆಯಿತ್ತು. ಕಿಟಕಿಗಳು ತೆರೆದಿದ್ದುವು. ಐದು ನಿಮಿಷಗಳವರೆಗೆ ಅವರು ಮೌನವಾಗಿದ್ದರು. ಇದ್ದಕಿದ್ದಂತೆಯೆ ತಂಗಾಳಿ ಬೀಸಿ ಮೇಜಿನ ಮೇಲಿದ್ದ ಕಾಗದಗಳೆಲ್ಲ ಹಾರಾಡತೊಡಗಿದುವು. ಡಾ. ಸ್ಟ್ಯಾನ್ಲೆ ಹೋಗಿ ಕಿಟಕಿಗಳನ್ನು ಮುಚ್ಚಿ ಬಂದು "ನಿಮಗೇನಾದರೂ ಅನಿಸುತ್ತದೆಯಾ?" ಎಂದು ಕೇಳಿದ ಜೆರಿಯನ್ನು.

"ಹೌದು. ಬಹಳ ತಣ್ಣಗಿನ ಗಾಳಿ ಬೀಸುತ್ತದೆ ಅನಿಸುತ್ತಿದೆ."

ಕಿಟಕಿ ಮುಚ್ಚಿದ್ದರೂ ಚಳಿಗಾಳಿ ಆವರಿಸಿತು.

"ಈಗ ಏನಾದರೂ ಅನಿಸುತ್ತದೆಯೆ?" ಮತ್ತೆ ಕೇಳಿದ ಸ್ಟ್ಯಾನ್ಲೆ.

ಜೆರಿ ಹೌದೆಂದು ತಲೆದೂಗಿದ. ಆತನೆದೆ ನಗಾರಿಯಂತೆ ಬಡಿದುಕೊಳ್ಳುತ್ತಿತ್ತು. ಏನೋ ಘಟಿಸುತ್ತದೆಯೆಂದು ಖಚಿತವಾದ ಆತ.

"ಈ ರಾತ್ರಿ ಎಲ್ಲ ಸಂಕಷ್ಟಗಳಿಂದ ನಮ್ಮನ್ನು ಪಾರುಮಾಡು ದಯಾಳು ತಂದೆಯೆ" ಎಂದು ಮೊರೆಯಿಡತೊಡಗಿದ.

"ಏನೋ ಬರುತ್ತಿದೆ...!" ಎಂದ ಸ್ಟ್ಯಾನ್ಲೆ. ಆತ ನೋಡಿದೆಡೆಯೆ ಜೆರಿಯೂ ಗಮನ ಹರಿಸಿದ. ಸುಮಾರು ಮೂರು ಗಜ ದೂರದಲ್ಲಿ ಕೋಣೆಯ ನಟ್ಟ ನಡುವೆ ಒಂದು ಪುರುಷಾಕೃತಿ ಕಾಣಿಸಿಕೊಂಡಿತು. ಆದರ ತಲೆ ಭುಜಕ್ಕೆ ತಾಗಿಕೊಂಡು ಗುರುತೇ ಸಿಗುತ್ತಿರಲಿಲ್ಲ. ಒಮ್ಮಿಂದೊಮ್ಮೆಲೆ ಹಾಸಿಯ ಹಲಗೆ ಜಾರಿದ ಸಪ್ಪಳ ಕೇಳಿ ಆ ಆಕೃತಿ ಮಾಯವಾಯಿತು. ಆ ಸ್ಥಳದಲ್ಲಿ ಹಾಸಿಯ ಹಗ್ಗ ಬಿದ್ದುಕೊಂಡಿತ್ತು!

ಇಬ್ಬರೂ ಒಂದು ಕ್ಷಣ ಗರಬಡಿದವರಂತೆ ಅದನ್ನೇ ನೋಡುತ್ತಿದ್ದರು. ಮಾತು ಹೊರಡದೆ ಬರಿ ಕಣ್ಣಾಲಿಗಳು ಮಾತ್ರ ಅಲುಗಾಡುತ್ತಿದ್ದವು. ಅವರು ಉಸಿರು ಕೂಡ ಬಿಗಿ ಹಿಡಿದಂತಿತ್ತು. ಮೈಯೆಲ್ಲ ಬೆವರು ಸುರಿಯುತ್ತಿತ್ತು. ಪಾದ್ರಿಯ ತುಟಿಗಳು ಪ್ರಾರ್ಥಿಸುತ್ತಿರುವಂತೆ ಪಟಪಟ ಬಡಿದುಕೊಳ್ಳುತ್ತಿದ್ದವು. ಸ್ಟ್ಯಾನ್ಲೆ ಧೈರ್ಯದಿಂದ ಒಂದು ಹೆಜ್ಜೆ ಮುಂದಿಟ್ಟು ಹಗ್ಗದತ್ತ ಕೈ ತೋರಿಸಿ,

"ಗಲ್ಲಿಗೇರಿಸಿದ ಕೂಡಲೇ ಆ ಹಗ್ಗ ಮಾಯವಾಗಿತ್ತು" ಎಂದ.

ಪುನಃ ಟೆಲಿಫೋನು ಬಾರಿಸತೊಡಗಿತು. ಈ ಸಲ ಜೆರಿಯೆ ಫೋನನ್ನೆತ್ತಿ ಮಾತಾಡಿದ.

"ಚಾರ್ಲ್ಸ್— ದೇವರ ಸನ್ನಿಧಾನದಲ್ಲಿ ನಿಂತಿರುವ ನೀನು ನಿಜವಾಗಿಯೂ ನಿನ್ನ ಪಾಪಗಳನ್ನು ಒಪ್ಪುತ್ತೀಯಾ?"

ಚಾರ್ಲ್ಸ್‌ನ ಮಾತುಗಳು ಕೇಳತೊಡಗಿದವು. ನಂತರ ಪಾದ್ರಿಯ ಬಾಯಿಂದ ಕ್ಷಮಿಸುವ ಮಾತುಗಳು ಮಣಮಣಗುಟ್ಟಿದವು. ಸ್ಟ್ಯಾನ್ಲೆ ಮೊಳಕಾಲೂರಿ ಕೈಜೋಡಿಸಿದ.

ಒಂದೆರಡು ಕ್ಷಣಗಳಲ್ಲೇ ಎಲ್ಲ ಶಾಂತವಾಯಿತು. ಫಾದರ್ ಜೆರಿ ರಿಸೀವರನ್ನು ಕೆಳಗಿಟ್ಟ.

ಇಷ್ಟರಲ್ಲಿ ಸ್ಟ್ಯಾನ್ಲೆಯ ಕೆಲಸದಾಳು ಪಾರ್ಕರ್ ಬಂದ. ಹಗ್ಗದೆಡೆ ನೋಡದೆ ಸ್ಟ್ಯಾನ್ಲೆ ಹೇಳಿದ.

"ಆ ಹಗ್ಗವನ್ನು ಒಯ್ದು ಸುಟ್ಟುಬಿಡು ಪಾರ್ಕರ್."

ಪಾರ್ಕರ್ ಸುತ್ತಲೂ ಕಣ್ಣಾಡಿಸಿದ. ನಂತರ ಅಚ್ಚರಿಯಿಂದ ಕೇಳಿದ.

"ಅಂ? ಹಗ್ಗ! ಎಲ್ಲಿದೆ ಸಾರ್ ಹಗ್ಗ? ಯಾವ ಹಗ್ಗವೂ ಇಲ್ಲಿ ಕಾಣುತ್ತಿಲ್ಲವಲ್ಲಾ?" ❁



# ಅನುವಾದದ ಮೂರು ಮುಖಗಳು

**ಎಂ. ಕೆ. ಗೋಪಿನಾಥ**

**ರಾತ್ರಿರ್ಗಮಿಷ್ಯತಿ ಭವಿಷ್ಯತಿ ಸುಪ್ರಭಾತಮ್**
**ಭಾಸ್ವಾನುದೇಷ್ಯತಿ ಹಸಿಷ್ಯತಿ ಪದ್ಮಸೀಚ।**
**ಏವಂ ವಿಚಿಂತಯತಿ ಕೋಶಗತೇ ದ್ವಿರೇಕ್ಷೀ**
**ಹಾ ಹಂತ ಹಂತ ನಲಿನೀಂ ಗಜ ಉಜ್ಜಹಾರ।।**

ಎಂಬುದು 'ಸೂಕ್ತಿ ಮುಕ್ತಾವಲೀ' ಗ್ರಂಥದಲ್ಲಿ ದೊರೆಯುವ ಒಂದು ಪ್ರಸಿದ್ಧ ಸುಭಾಷಿತ. ಈ ಶ್ಲೋಕದ ಹಿನ್ನೆಲೆಯಾಗಿ ಒಂದು ಸಣ್ಣ ಕಥೆಯಿದ್ದು ಅದು ಹೀಗಿದೆ:

ಮಧುವನ್ನು ಶೇಖರಿಸಲು ಹೊರಟಿದ್ದ ದುಂಬಿಯೊಂದು ಅರಳಿದ ಕಮಲ ಪುಷ್ಪವೊಂದರ ಮೇಲೆ ಕುಳಿತಿತು. ಮಧುವನ್ನೀಂಟುವ ಸಂಭ್ರಮದಲ್ಲಿ ಹೊತ್ತು ಜಾರಿದ್ದು ದುಂಬಿಗೆ ತಿಳಿಯಲೇ ಇಲ್ಲ. ಸಂಜೆಯಾಗಿ, ಸೂರ್ಯಾಸ್ತವೂ ಆಗಿ ಕಮಲದ ಹೂ ಮುಚ್ಚಿಕೊಳ್ಳಲು ದುಂಬಿ ಹೂವಿನೊಳಗೆ ಸೆರೆಯಾಗಿಬಿಟ್ಟಿತು. ತನಗೆ ಒದಗಿದ ಈ ಅನಿರೀಕ್ಷಿತ ವಿಪತ್ತಿನಿಂದ ವಿಚಲಿತವಾಗದ ದುಂಬಿ, 'ಈ ರಾತ್ರಿ ಇನ್ನೇನು ಕಳೆದುಹೋಗುತ್ತದೆ: ಬೆಳಗಾಗುತ್ತದೆ. ಸೂರ್ಯೋದಯದೊಡನೆ ಕಮಲದ ಹೂ ಬಿರಿದುಕೊಳ್ಳುತ್ತದೆ. ನಾನಾಗ ಪುನಃ ಸ್ವತಂತ್ರನಾಗುವೆ,' ಎಂದುಕೊಳ್ಳುತ್ತಾ ಇರಲು, ಬಾಯಾರಿದ ಆನೆಯೊಂದು ಆ ಕೊಳಕ್ಕೆ ನೀರು ಕುಡಿಯಲು ಬಂತು. ನೀರು ಕುಡಿದಾದ ಬಳಿಕ ಆ ತುಂಟ ಆನೆ ಸುಮ್ಮನೆ ಹಿಂತಿರುಗದೆ, ದುಂಬಿ ಸೆರೆಯಿದ್ದ ತಾವರೆ ಬಳ್ಳಿಯನ್ನು ಕಾಲಿನಿಂದ ಹಿಡಿದೆಳೆದು ಹೊಸಕಿಹಾಕಿಬಿಟ್ಟಿತು.

ಮನುಷ್ಯನ ಎಣಿಕೆಗೆ ಮೀರಿದ ಅನ್ಯಶಕ್ತಿಯೊಂದು ಅವನ ಲೆಕ್ಕಾಚಾರಗಳನ್ನೆಲ್ಲಾ ಏರುಪೇರು ಮಾಡಿಬಿಡುವುದೆಂದು ಸೂಚಿಸಲು ಅನ್ಯೋಕ್ತಿಯಾಗಿ 'ರಾತ್ರಿರ್ಗಮಿಷ್ಯತಿ' ಸೂಕ್ತಿಯನ್ನು ಉದಾಹರಿಸುವುದುಂಟು.

'ರಾತ್ರಿರ್ಗಮಿಷ್ಯತಿ' ಮುಕ್ತಕವು ಮೂವರು ಪ್ರಸಿದ್ಧ ಕನ್ನಡ ಕವಿಗಳ ಗಮನವನ್ನು ಸೆಳೆದಿದ್ದು, ಆ ಮೂವರು ಈ ಸೂಕ್ತಿಯನ್ನು ಪ್ರತ್ಯೇಕವಾಗಿ ಅನುವಾದಿಸಿರುವುದು ಒಂದು ವಿಶೇಷ ಘಟನೆ.

ಶ್ರೀ ತೀ. ನಂ. ಶ್ರೀಕಂಠಯ್ಯನವರ ಅನುವಾದ ಹೀಗಿದೆ

**ಇರುಳು ಕಳೆ ಹಾರುವುದು, ನಸುಕು**
**ಮೊಗದೋರುವುದು,**

ಏರುವನು ಭಾನು, ನಗೆ ಬೀರುವುದು
ಕಮಲ ಬಿರಿದು—
ಇಂತಿಂತು ಬಗೆಯುತಿರೆ ಕೋಶದಲಿ ಸಿಕ್ಕಿದಳಿ,
ಅಯ್ಯಯ್ಯೊ, ಬಳ್ಳಿಯನೆ ಕಿತ್ತೆಸೆದುದೊಂದು
ಹಸ್ತಿ!

(ತೀ. ನಂ. ಶ್ರೀಯವರ 'ಬಿಡಿಮುತ್ತು' ಮುಕ್ತಕಗಳ ಸಂಗ್ರಹದಿಂದ. ಪ್ರಕಾಶಕರು: 'ಕಾವ್ಯಾಲಯ')

ನಾಡಿನಾದ್ಯಂತ ನರುಗಂಪನ್ನು ಬೀರಿದ 'ಮೈಸೂರು ಮಲ್ಲಿಗೆ'ಯ ಖ್ಯಾತಿಯ ಕವಿ ಶ್ರೀ ಕೆ. ಎಸ್. ನರಸಿಂಹಸ್ವಾಮಿಯವರು ಸಂಸ್ಕೃತದ ಸೂಕ್ತಿಯನ್ನು ಕನ್ನಡಕ್ಕೆ ತರ್ಜುಮೆ ಮಾಡಿರುವುದು ಹೀಗೆ:

ಇನ್ನೇನು ಇರುಳು ಕಳೆದೀತು, ಬೆಳಕು
ಹರಿದೀತು,
ಬಾಲರವಿ ಹೊಳೆದು ತಾವರೆ ನಕ್ಕು ತೆರೆದೀತು,
ಇಂತೆನಲು ತಾವರೆಯ ಸೆರೆಯೊಳಗೆ
ತುಂಬಿಯೊಂದು;
ಅಯ್ಯೊ! ತಾವರೆಯನೆ ಕಿತ್ತಸೆದು ದಾನೆ
ಬಂದು.

(ಶ್ರೀ ಕೆ. ಎಸ್. ನ. ಅವರ 'ದೀಪದ ಮಲ್ಲಿ' ಕವನ ಸಂಗ್ರಹದಿಂದ ಪ್ರಕಾಶಕರು: ಕಾವ್ಯಾಲಯ)

'ಇಂದ್ರಚಾಪ' ಕೃತಿಯಲ್ಲಿನ ಸ್ವತಂತ್ರ ಹಾಗೂ ಅನುವಾದಿತ ಮುಕ್ತಕಗಳ ಕರ್ತೃವಾದ ಶ್ರೀ ಎಸ್. ವಿ. ಪರಮೇಶ್ವರ ಭಟ್ಟರು 'ರಾತ್ರಿರ್ಗಮಿಷ್ಯತಿ' ಸೂಕ್ತಿಯನ್ನು ಕನ್ನಡಿಸಿರುವುದು ಈ ರೀತಿಯಾಗಿ:

ರವಿ ನಾಳೆ ಬರುವನು ತಾವರೆ ಬಿರಿವುದು
ಬಿಡುಗಡೆ ಪಡೆದಪೆನೆಂದು
ಸೆರೆಯಿದ್ದ ದುಂಬಿಯಿಂತೆಣಿಪಂದು
ಕರಿಯೊಂದು
ಕಿತ್ತೆಸೆಯಿತಬ್ಜನಿಯನಂದು

ಭಾವಕ್ಕೆ ಎರವಾಗದ ಪಾಂಡಿತ್ಯಪೂರ್ಣ ಅನುವಾದ ತೀ. ನಂ. ಶ್ರೀಯವರಾದರೆ, ನರಸಿಂಹಸ್ವಾಮಿಯವರ ತರ್ಜುಮೆಯಲ್ಲಿ ಭಾವಕ್ಕೆ ಹೆಚ್ಚು ಒತ್ತು. ಅತ್ಯಂತ ಸಹಜಗತಿಯ ಲಯದ ಸೊಗಸುಗಾರಿಕೆ ಭಟ್ಟರ ಅನುವಾದದ ವೈಶಿಷ್ಟ್ಯ. ಉತ್ತಮ ಭಾಷಾಂತರಕ್ಕೆ ಮಾದರಿಗಳಾಗಿ 'ರಾತ್ರಿರ್ಗಮಿಷ್ಯತಿ'ಯ ಮೂರು ಅನುವಾದಿತ ರೂಪಗಳನ್ನು ಇಲ್ಲಿ ಗಮನಿಸಬಹುದು.

'ಭಾಷಾಂತರಕಾರರು ಕೊಲೆಗಾರರು' ಎಂದು ಹೇಳಿದ ಪಾಶ್ಚಾತ್ಯ ವಿದ್ವಾಂಸನು ಈ ಅನುವಾದಗಳನ್ನು ಗಮನಿಸಿದ್ದಲ್ಲಿ ಆ ಮಾತನ್ನು ಹೇಳುತ್ತಿರಲಿಲ್ಲವೇನೋ. ಅನ್ಯ ಭಾಷೆಯ ಕೃತಿಯೊಂದನ್ನು ಮೂಲದ ಚೆಲುವು ಅಂದಗಳಿಗೆ ಸ್ವಲ್ಪವೂ ಕುಂದಿಲ್ಲದಂತೆ ಹೇಗೆ ಅನುವಾದಿಸಬಹುದು ಎಂಬುದನ್ನು ಈ ಭಾಷಾಂತರಗಳು ತೋರಿಸಿಕೊಡುತ್ತವೆ. ಅಲ್ಲದೆ ಕವಿ ದೃಷ್ಟಿ ಮತ್ತು ಕವಿ ಚಿಂತನೆ ಮೂಲತಃ ಹೇಗೆ ಒಂದೇ ಬಗೆಯದಾಗಿರುತ್ತವೆ ಎಂಬುದನ್ನೂ ಈ ತರ್ಜುಮೆಗಳು ಸಾಬೀತುಗೊಳಿಸುತ್ತವೆ. ಮೂವರು ಭಾಷಾ ವಿಶಾರದರು ಒಂದು ಕೃತಿಯನ್ನು ಮೂರು ವಿಭಿನ್ನ ರೀತಿಗಳಲ್ಲಿ ಅನುವಾದಿಸಿದಾಗಲೂ ಇಡಿಯಾಗಿ ಮತ್ತು ಬಿಡಿಯಾಗಿ ತರ್ಜುಮೆಗಳು ಮಿಡಿಯುವ ಧ್ವನಿ-ಅರ್ಥಗಳು ಒಂದು ಬಗೆಯ ಮರುಹುಟ್ಟು ಪಡೆದು ಸಾರ್ಥಕ್ಯ ಗಳಿಸಿಕೊಳ್ಳುತ್ತವೆ ಎಂಬುದು ಆಶ್ಚರ್ಯಕರ. ✡



ಜೋನ್ ಬೇರಿಷ್ ಎಂಬ ಗಾಯಕಿ ಯಾರಿಗೂ ಹಸ್ತಾಕ್ಷರ ನೀಡುವುದಿಲ್ಲ. "ಬೇಡ. ಬೇಕಾದರೆ ಕೈ ಕುಲುಕುತ್ತೇನೆ" ಎನ್ನುವ ಆಕೆ "ಅದರಿಂದ ನನಗೇ 'ಏನಾದರೂ' ದೊರಕೀತು." ಎನ್ನುತ್ತಾಳೆ.

–ಚಾರ್ಲ್ಸ್ ಮೆಕ್‌ಹೆರ್ರಿ

ಪಿ. ಆರ್. ತಿಪ್ಪೇಸ್ವಾಮಿ

# ದಂತಶಿಲ್ಪಿ ಎಚ್. ವೆಂಕಪ್ಪನವರು

ನಿರ್ಜೀವ ದಂತದಲ್ಲಿ ಜೀವಕಳೆಯನ್ನು ತುಂಬುವಲ್ಲಿ ಬಿ. ಎಚ್. ವೆಂಕಪ್ಪನವರು ಕರ್ನಾಟಕಕ್ಕೆ ಕೀರ್ತಿ ತಂದುಕೊಟ್ಟವರು. ಅವರು ರಾಧಾಕೃಷ್ಣರ ವಿವಿಧ ಭಂಗಿಯ ಕೃತಿಗಳನ್ನು ದಂತದಲ್ಲಿ ಮನಮೋಹಕವಾಗಿ ನಿರ್ಮಿಸಿದ್ದಾರೆ. ಒಮ್ಮೆ ಮೈಸೂರಿನ ದಸರಾ ವಸ್ತು ಪ್ರದರ್ಶನದಲ್ಲಿ ಯುವರಾಜರ ರಜತ ಪಾತ್ರೆ ಇವರ 'ರಾಧಾಕೃಷ್ಣ' ದಂತಕೃತಿಗೆ ದೊರೆಯಿತು. ಶ್ರೀಕೃಷ್ಣನ ಕೊಳಲ ನಿನಾದವನ್ನಾಲಿಸಿ ಚಿತ್ರೆಯಂತೆ ಬಳುಕಿ ಬಂದ ರಾಧಾರಮಣಿ ಮಧುರ ಮೋಹನರೂಪಿಯ ಸ್ವಾಗತಕ್ಕೆ ಮೈಮರೆತಿರುವ ದೃಶ್ಯ ಕಲಾಪೂರ್ಣವಾಗಿ ಕೊರೆಯಲ್ಪಟ್ಟಿದೆ. ಮುಖದಲ್ಲಿ ಹಾವಭಾವ ಭಂಗಿಗಳನ್ನು ಶರೀರದ ನಿಲುವು ಒಲವುಗಳನ್ನೂ ಭಾವಪೂರ್ಣತೆಯಿಂದ ಕಡೆದಿದ್ದಾರೆ ವೆಂಕಪ್ಪ.

ಆದರೆ ಈ ಕೃತಿಯನ್ನು ಕೊಂಡ ವ್ಯಾಪಾರಿ ಮನೋಭಾವದ ವ್ಯಕ್ತಿಗಳು ಅದರ ಸಾವಿರಾರು ಪ್ರತಿಗಳನ್ನು ಫೋಟೋ ತೆಗೆಸಿ ಮಾರಾಟದ ಉದ್ಯಮಕ್ಕೆ ಎಡೆಕೊಟ್ಟರು. ಇದರ ಪರಿಣಾಮವಾಗಿ ಎಲ್ಲೆಲ್ಲೂ ಈ ಕೃತಿಯ ಪ್ರತಿಗಳು ಎಲ್ಲರ ಕಣ್ಣಮುಂದೆ ಸುಳಿಯುತ್ತಿರುವುದು ಸಂತಸದ ಸಂಗತಿಯಾದರೂ ಅದನ್ನು ರಚಿಸಿದ ವೆಂಕಪ್ಪನವರ ಹೆಸರು ಅಜ್ಞಾತವಾಗಿಯೇ ಉಳಿದದ್ದು ಒಂದು ರೀತಿಯಲ್ಲಿ ದೈವೀದುರ್ವಿಪಾಕವೆನ್ನಬೇಕು. ಈಗಲೂ ಅನೇಕರು ಮೂಲಕೃತಿಯನ್ನು ನಕಲು ಮಾಡಿ ಮಾರುವುದನ್ನು ಕಾಣಬಹುದಾಗಿದೆ. ಇವರ ಮತ್ತೊಂದು ಕೃತಿ 'ರಾಧಾಕೃಷ್ಣ' ಮನಸೂರೆಗೊಳ್ಳುವಂತಿದೆ. ಇದನ್ನು ಕಂಡ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಗೀತವೊಂದನ್ನು ರಚಿಸಿದ್ದಾರೆ ('ಸಂಕ್ರಾಂತಿ' ಕವನ ಸಂಕಲನದಲ್ಲಿ 'ರಾಧಾಕೃಷ್ಣ').

ರಾಧಾಕೃಷ್ಣರು ಒಂದು ಕಡೆ ಸೇರಿದ್ದಾರೆ. ಅವರ ಸರಸ ಸಲ್ಲಾಪ, ಪ್ರೇಮಪೂರ್ಣ ನೋಟಗಳನ್ನು ನೋಡಿದವರು ಬೆರಗಾಗಬೇಕು. ರಾಧೆಯ ಜಡೆಯನ್ನು ಕೃಷ್ಣ ಎಳೆದು ವಿನೋದ ಮಾಡುವಾಗ ಅವಳು ನಸುನಾಚಿದವಳಂತೆ ಪಕ್ಕಕ್ಕೆ ತಿರುಗಿದ್ದಾಳೆ. ಇವ

ರಿಬ್ಬರ ಪ್ರೇಮ ಸಲ್ಲಾಪಗಳನ್ನು ನೋಡಿ ಅಚ್ಚರಿಗೊಂಡು ಇನ್ನೆರಡು ನವಿಲುಗಳು ಅವರ ಪಾದದ ಬಳಿಯೇ ನಿಂತಿವೆ. ಈ ಅಪೂರ್ವ ಕೃತಿಯನ್ನು ರಚಿಸಿದ ವೆಂಕಪ್ಪನವರ ಕಲಾಚಾತುರ್ಯ ಮೆಚ್ಚುವಂತಹದು.

ಇನ್ನೊಂದು ಕೃತಿಯಲ್ಲಿ ರಾಜಭೋಗಗಳನ್ನು ತ್ಯಾಗಮಾಡಿ ಬಂದ ವಿಶ್ವಾಮಿತ್ರನನ್ನು ಮೇನಕೆ ಪ್ರೇಮದ ಬಲೆಗೆಳೆಯುತ್ತಿದ್ದಾಳೆ. ಮೋಹಪಾಶಕ್ಕೆ ಬಲಿಯಾದ ವಿಶ್ವಾಮಿತ್ರ ಓರೆಗಣ್ಣಿನಿಂದ ಆ ಮೋಹನಾಂಗಿಯ ನರ್ತನವನ್ನವಲೋಕಿಸುವ ಸುಂದರ ದೃಶ್ಯ ನೋಟಕರನ್ನು ಮೂಕರನ್ನಾಗಿಸುವಂತಿದೆ. ಶ್ರೀ ಕೃಷ್ಣರಾಜ ಒಡೆಯರು ಸ್ವತಃ ವಿಷಯವನ್ನು ಸೂಚಿಸಿ ವೆಂಕಪ್ಪನವರಿಂದ ದಂತದಲ್ಲಿ ಕೆತ್ತಿಸಿದ ಕೈಲಾಸ ಪರ್ವತದ ಪ್ಯಾನಲ್ ಈಗ ಚಿನ್ನದ ಕಟ್ಟಿನೊಂದಿಗೆ ಕಂಗೊಳಿಸುತ್ತಿದೆ. ಇಂಥ ನೂರಾರು ಕೃತಿಗಳು ನಾಡಿನಲ್ಲೂ ವಿದೇಶಗಳಲ್ಲೂ ಮೆರೆಯುತ್ತಿವೆ. ಇವರು ರಚಿಸಿದ ಚಂದ್ರತಾರ, ನಟರಾಜ, ಸರಸ್ವತಿ, ಚತುರ್ಮುಖ ಬ್ರಹ್ಮ ಮುಂತಾದ ಸುಂದರ ಕೃತಿಗಳು ರಾಜ ಮಹಾರಾಜರ ಅರಮನೆಗಳ ಅಲಂಕಾರದ ಸಾಧನೆಗಳಾಗಿವೆ. ಅನೇಕ ನಗರಗಳ ಅಗರ್ಭ ಶ್ರೀಮಂತರ ಮೆಚ್ಚಿನ ವಸ್ತುಗಳಾಗಿವೆ.

ಬಾಪೂಜಿಯವರಿಗೆ ವೆಂಕಪ್ಪನವರೆಂದರೆ ಅಚ್ಚುಮೆಚ್ಚು. ಅದ್ದರಿಂದಲೇ ೧೯೩೬ರಲ್ಲಿ ಲಖನೌದಲ್ಲಿ ನಡೆದ ಪ್ರದರ್ಶನದ ಆರಂಭೋತ್ಸವವನ್ನು ಬಾಪೂಜಿಯವರೇ ನೆರವೇರಿಸಿದರು. ಆಗ ಮೈಸೂರಿನ ಈ ಶಿಲ್ಪಿಗಳ ದಂತ ಕೃತಿಗಳನ್ನು ನೋಡಿ, ತುಂಬಾ ಮೆಚ್ಚಿಕೊಂಡರಲ್ಲದೆ ವೆಂಕಪ್ಪನವರು ದಂತವನ್ನು ಹೇಗೆ ಕೆತ್ತಬಲ್ಲರು ಎಂಬ



ವೆಂಕಪ್ಪನವರ ಕೃತಿಗಳನ್ನು ಗಾಂಧೀಜಿ ವೀಕ್ಷಿಸುತ್ತಿರುವುದು

[illegible]. ಶ್ರೀಯುತರ ಕೈಕಸಬನ್ನು ಕಂಡು ಮನಸಾರೆ ಕೊಂಡಾಡಿದರು. ಇದರ ಫಲವಾಗಿಯೇ ಬಾಪೂಜಿಯವರ ಇಚ್ಛೆಯಂತೆ ಅವರ ಮೊಮ್ಮಕ್ಕಳಾದ ಶ್ರೀ ನವೀನಚಂದ್ರ ಗಾಂಧಿಯವರು ವೆಂಕಪ್ಪನವರಲ್ಲಿದ್ದು ಕೊಂಡು ದಂತ ಶಿಲ್ಪದ ಅಭ್ಯಾಸವನ್ನು ಮಾಡಿದರು.

ಇವರ ಕೃತಿಗಳ ಸೌಂದರ್ಯಕ್ಕೆ ಮಾರು ಹೋಗದವರು [illegible]. ಯುವರಾಜರು ಇವರಿಂದ ದಂತದಲ್ಲಿ ಚಾಮುಂಡೇಶ್ವರಿ ವಿಗ್ರಹವನ್ನು ಮಾಡಿಸಿ ತಮ್ಮ ಪೂಜೆಗೆ ಇರಿಸಿಕೊಂಡಿದ್ದರು. ವಿಖ್ಯಾತ ಕಾದಂಬರಿಕಾರ ಆರ್ಥರ್ ಕಾನನ್ ಡಾಯಲರು ವೆಂಕಪ್ಪನವರ ಕಲೆಗೆ ಮಾರು ಹೋಗಿದ್ದರು. ವೆಂಕಪ್ಪನವರ ಜೊತೆಯಲ್ಲಿ ಖಿಡ್ಡಾ ಮುಂತಾದ ಸ್ಥಳಗಳನ್ನು ಭೇಟಿ ಮಾಡಿದರು. ತಮ್ಮ ಪತ್ನಿಗೆಂದು ವೆಂಕಪ್ಪನವರಿಂದ ದಂತದ ಗುಲಾಬಿ ಹೂಗಳ ಮಾಲೆಯನ್ನು ಕೊರೆಸಿದ್ದರು.

ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ಇವರ ಹುಟ್ಟೂರು. ತಂದೆ ರವಳನಾಥಪ್ಪ; ತಾಯಿ ನಾಗಮ್ಮ, ಅಜ್ಜ ಕೃಷ್ಣಪ್ಪ. ವೆಂಕಪ್ಪನವರ ತಾಯಿ ತಮ್ಮ ಹಿರಿಯ ವಯಸ್ಸಿನಲ್ಲಿ ತೀರಿಕೊಂಡರು. ಇವರ ತಂದೆಗೆ ಸಾಕಷ್ಟು ಜಮೀನೂ ಮನೆಯೂ ಇದ್ದವು. ಬಾಲಕ ವೆಂಕಪ್ಪನನ್ನು ಕಾರವಾರದಲ್ಲಿ ವ್ಯಾಸಂಗ ಮಾಡಲು ಬಿಡಲಾಯಿತು. ಶಾಲೆಯಲ್ಲಿ ಆವರು ಓದಿನ ಬದಲು ಬರೀ ಚಿತ್ರ ಬರೆಯುವ ಹವ್ಯಾಸ ಬೆಳೆಸಿಕೊಂಡಿದ್ದನ್ನು ಗವನಿಸಿದ ಉಪಾಧ್ಯಾಯರು ಹುಡುಗನ ಮನೆಯಲ್ಲಿ ದೂರು ಹೇಳಿದರು. ಶಾಲೆ ಬಿಡುವಂತಾಯಿತು.

ಕಲಾರಾಧಕರ ಸಂತತಿಗೆ ಸೇರಿದ ಬಾಲಕ ವೆಂಕಪ್ಪನ ತಾತಂದಿರಾದ ಕೀರ್ತಿಶೇಷ ಕೃಷ್ಣಪ್ಪನವರು ದಂತ-ಗಂಧದ ಕೆತ್ತನೆಯಲ್ಲಿ ಕೀರ್ತಿಯ ಶಿಖರವನ್ನೇರಿದ್ದರು. ೧೯೧೬ ರಲ್ಲಿ ಕೃಷ್ಣಪ್ಪನವರು ರಚಿಸಿದ ಕೃಷ್ಣಾರ್ಜುನರನ್ನು ಹೊತ್ತ



ಕೃತಿ ರಚನೆಯಲ್ಲಿ

ಸುಂದರವಾದ ಮೂರಡಿ ದಂತದ ರಥವು ಇಂದು ಲಂಡನ್ ಮ್ಯೂಸಿಯಂನಲ್ಲಿ ಶೋಭಿಸುತ್ತಿದೆ. ಇದಕ್ಕೆ ದಿವಂಗತ ಕೃಷ್ಣಪ್ಪನವರಿಗೆ ಸುವರ್ಣ ಪದಕ ದೊರೆತುದು ಕನ್ನಡ ಕಲೆಗೆ ಒಂದು ವಿಶೇಷ ಗೌರವವೇ ಸರಿ. ಬಾಲಕ ವೆಂಕಪ್ಪನ ಕಲಾಸಕ್ತಿಗೂ ಕಲಾಪ್ರೌಢಿಮೆಗೂ ವಂಶಪಾರಂಪರ್ಯವಾಗಿ ಬಂದ ಕಲೆಯೇ ಕಾರಣ.

ವೆಂಕಪ್ಪನವರ ತಾಯಿಯ ತವರು ಮನೆ ಕುಮಟದಲ್ಲಿತ್ತು. ಅಲ್ಲಿ ಇವರ ಸೋದರ ಮಾವ ಮಾಮನಪ್ಪ ಖ್ಯಾತ ಶಿಲ್ಪಿ ಎನಿಸಿದ್ದರು. ಹೊನ್ನಾವರ ಕುಮಟಾಕ್ಕೆ ತಿರುಗಾಡಿಕೊಂಡಿದ್ದ ವೆಂಕಪ್ಪ ತನ್ನ ಸೋದರಮಾವ ರಚಿಸುತ್ತಿದ್ದ ಗಂಧದ ಕೃತಿಗಳಿಂದ ಪ್ರಭಾವಿತನಾದ. ವೆಂಕಪ್ಪನ ತಂಗಿ ಗಿರಿಜಾಬಾಯಿಯ ಅತ್ತೆಯ ಮನೆ ಸಾಗರ



ರಾಧಾಕೃಷ್ಣ

ದಲ್ಲಿ ಹೀಗಾಗಿತ್ತು. ಅವರಿಗೆ ಆಗಾಗ ಸಾಗರಕ್ಕೆ ಬರುವ ಸದಾವಕಾಶ ದೊರೆಯುತ್ತಿತ್ತು. ಇಷ್ಟೇ ಅಲ್ಲದೆ ಶಿಲ್ಪಕಲಾ ಕೇಂದ್ರಗಳಾಗಿದ್ದ ಬನವಾಸಿ, ಜಡೆ, ಹುಲೇಕಲ್ಲುಗಳಲ್ಲಿದ್ದ ವೆಂಕಪ್ಪನ ಅಕ್ಕಂದಿರ ಮನೆಗಳಿಗೂ ಬಂದು ಹೋಗುತ್ತಿದ್ದುದರಿಂದ ವೆಂಕಪ್ಪನವರ ಕಲಾದೃಷ್ಟಿ ಮತ್ತೂ ವಿಶಾಲವಾಯಿತು: ಪಕ್ವವಾಯಿತು.

ಬಾಲ್ಯದಲ್ಲಿ ತಾಯಿಯನ್ನು ಕಳೆದುಕೊಂಡ ಅವರು ತಮ್ಮ ೧೫ ವರ್ಷಗಳ ತನಕ ಅಕ್ಕಂದಿರ ಮನೆಗಳಿಗೆ ಓಡಾಡುತ್ತಾ ಕಾಲ ಕಳೆದುಬಿಟ್ಟಿದ್ದರು. ಆದರೂ ೨೦ ನೇ ವರ್ಷದ ವೇಳೆಗೆ ಗಂಧದಲ್ಲಿ ಮೂರ್ತಿಗಳನ್ನು ರಚಿಸುವುದರಲ್ಲಿ ಒಂದು ಸ್ಥಿತಿಗೆ ಮುಟ್ಟಿದ್ದರು. ತನ್ನ ಕಾಲ ಮೇಲೆ ತಾನು ನಿಲ್ಲಬಲ್ಲೆನೆಂಬ ಧೈರ್ಯವೂ ಇವರಿಗೆ ಬಂದಿತು.

ಸಾಗರದಲ್ಲಿದ್ದಾಗ ವೆಂಕಪ್ಪ ಗಂಧದಲ್ಲಿ ಉತ್ತಮ ಕೃತಿ ರಚಿಸಿ ತೋರಿದ್ದರು. ಇದನ್ನು ಗಮನಿಸಿದ ಅಧಿಕಾರಿಯೊಬ್ಬರಿಂದಾಗಿ ಬೆಂಗಳೂರಿನ ಸರಕಾರಿ ಕೈಗಾರಿಕಾ ವರ್ಕ್‌ಷಾಪಿಗೆ ಸೇರುವಂತಾಯಿತು. ಈ ವೇಳೆಗೆ ಇವರು ತಂದೆಯವರನ್ನು ಕಳೆದುಕೊಂಡು ಹದಿನೈದು ವರ್ಷಗಳಾಗಿದ್ದುವು. ಶಿರಸಿಗೆ ಸಮೀಪದ ಹುಲೇಕಲ್ಲಿನಲ್ಲಿ ಅಕ್ಕನ ಮನೆಯ ಪಕ್ಕದಲ್ಲಿ ವಾಸವಾಗಿದ್ದ ಶೇಷಗಿರಿಯಪ್ಪನವರ ಪುತ್ರಿ ಪದ್ಮಾವತಿಯ ಸೌಂದರ್ಯಕ್ಕೆ ಇವರು ಮಾರುಹೋದರು. ಅವಳನ್ನು ಲಗ್ನವಾಗುವುದಾಗಿ ಹಟ ಹಿಡಿದರು. ಇದರಿಂದಾಗಿ ಸೋದರಮಾವನ ಮಗಳೊಂದಿಗೆ ಆಗಬೇಕಾಗಿದ್ದ ಲಗ್ನ ತಪ್ಪಿಹೋಯಿತು. ವೆಂಕಪ್ಪ ತಾವೇ ಸಂಪಾದಿಸಿ ತಂದ ಹಣದಿಂದ ತಮ್ಮ ಲಗ್ನವನ್ನು ತುಸು ವೈಭವದಿಂದಲೇ ಮಾಡಿಕೊಂಡರು. ಲಗ್ನವಾಗಿ ಹುಟ್ಟೂರಾದ ಹೊನ್ನಾವರದ ಸ್ವಂತ ಮನೆಯಲ್ಲಿ ಎರಡು ವರ್ಷಗಳವರೆಗೆ ಕಳೆದು ನಂತರ ನೇರವಾಗಿ ಮೈಸೂರಿಗೆ ಬಂದರು. ಚಾಮರಾಜೇಂದ್ರ ವೃತ್ತಿ ಶಿಕ್ಷಣಶಾಲೆಯಲ್ಲಿ ಇವರಿಗೆ ಬಿಡುವಿನ ವೇಳೆಯ

ತಂದುಕೊಟ್ಟವು.

ವೆಂಕಪ್ಪನವರದು ಸರಳ ಜೀವನ. ಪ್ರತಿದಿನ ಬೆಳಿಗ್ಗೆ ಅರಮನೆಯ ಆವರಣದಲ್ಲಿರುವ ತ್ರಿನೇತ್ರೇಶ್ವರನ ದರ್ಶನ ಪಡೆದು ಬರುತ್ತಿದ್ದರು. ಸ್ನಾನಮಾಡಿ ಬಹಳ ಭಕ್ತಿಭಾವದಿಂದ ಕೆಲಸಕ್ಕೆ ತೊಡಗುತ್ತಿದ್ದರು. ಚಾಣಗಳಿಗೆ ವಂದಿಸಿ ಕೃತಿ ರಚನೆಗೆ ಕೈಹಾಕುತ್ತಿದ್ದರು. ಭರತಪುರದ ರಾಜರಿಗೆ ಒಮ್ಮೆ ಗೋಪಾಲಕೃಷ್ಣ ವಿಗ್ರಹ ರಚಿಸಿ ಕೊಡಲು ಒಪ್ಪಿದರು. ರಾತ್ರಿ ಎಲ್ಲಾ ನಿದ್ದೆಗೆಟ್ಟು ಮೂರೇದಿನಗಳಲ್ಲಿ ಮುಗಿಸಿಕೊಟ್ಟರು.

ವೆಂಕಪ್ಪನವರದು ತುಂಬಿದ ಸಂಸಾರ, ಸಾಹಸ ಮಯ ಕಲಾಜೀವನ. ಸದಾ ಶಾಂತಚಿತ್ತರೂ, ಹಸನ್ಮುಖಿಗಳು. ನೋವುಗಳ ಪರಂಪರೆಯನ್ನು



ವೆಂಕಪ್ಪನವರು ತಮ್ಮ ಕೊನೆಯ ದಿನಗಳಲ್ಲಿ ರಚಿಸಿದ ಅಪೂರ್ವ ಕೃತಿ ಮಹಿಷಾಸುರ ಮರ್ದಿನಿ

ಬಾಳಿನಲ್ಲಿ ನುಂಗಿಕೊಂಡು ಬಂದ ಹಿರಿೀಯ ಜೀವ. ದುಂಡನೆಯ ಮಟ್ಟಸದ ಕುಳ್ಳನೆಯ ವೆಂಕಪ್ಪ ನವರು ಮೈಸೂರು ಪೇಟೆಗೆ ಹೊರಟರೆಂದರೆ ಅವರ ಸುತ್ತಲೂ ಒಂದು ಪರಿವಾರವೇ ಇರ ಬೇಕಿತ್ತು. ಂಕಪ್ಪನವರು ತಮ್ಮ ಕೃತಿ ಮಾರಾಟ ದಿಂದ ಬಂದ ಹಣಕ್ಕೆ ಅನೇಕ ಸಾರಿ ಚಿನ್ನದ ಸರವನ್ನೋ ಇನ್ನೇನನ್ನೋ ಕೊಂಡು ತರುವುದು ವಾಡಿಕೆಯಾಗಿತ್ತು. ಕಣ್ಣಿಗೆ ಕಂಡ ಬಟ್ಟೆಯನ್ನು ಮನೆಗೆ ತಂದು ಮಡದಿ, ಮಕ್ಕಳನ್ನು ತೃಪ್ತಿ ಪಡಿಸುತ್ತಿದ್ದರು. ಪತ್ನಿಗೆ ಮಾತು ಕೊಟ್ಟರೆಂದರೆ ಅದು ಆಗಲೇಬೇಕು ಎಂಬ ಛಲ ಇವರದಾಗಿತ್ತು. ಪತ್ನಿ ಜೊತೆ ಮಾತಾಡುತ್ತ, 'ಕಾರು ತರ್ತೀನಿ ಜೊತೆಯಲ್ಲಿ ಕೂತು ಓಡಾಡೋಣ.' ಎಂದು ಆಗಾಗ ತಮಾಷೆ ಮಾಡುತ್ತಿದ್ದರಂತೆ. ಒಮ್ಮೆ ಬೆಂಗಳೂರಿಗೆ ಹೋಗಿ ಬಂದವರು, 'ಕಾರು ತಂದಿದ್ದೀನಿ' ಎಂದು ತಿಳಿಸಿದರು ತಮ್ಮ ಪತ್ನಿಗೆ. ಏನೋ ಪುಟ್ಟ ಕಾರು ತಂದಿರ ಬಹುದೆಂದು ತಿಳಿದು ಪಾರ್ವತಮ್ಮ ನಿಜವಾದ ಕಾರನ್ನು ನೋಡಿ ಆಶ್ಚರ್ಯಪಟ್ಟರಂತೆ.

ರಾಧಾ-ಕೃಷ್ಣ ಮೂರ್ತಿಗೆ ಬೇಡಿಕೆ ವಿಪರೀತ ವಾಯಿತು. ಬೇಡಿಕೆಗೆ ತಕ್ಕಂತೆ ಹಣವೂ ಬಂತು. ಎರಡು ಟ್ಯಾಕ್ಸಿಗಳನ್ನು ತಂದು ಬಾಡಿಗೆ ದುಡಿಯಲು ಬಿಟ್ಟರು. ಒಂಟಿಕೊಪ್ಪಲಿನಲ್ಲಿ ತಮ್ಮದೇ ಆದ ಮನೆಯಲ್ಲಿ ವಾಸಮಾಡುವಂತಾಯಿತು. ಅಲ್ಲದೆ ಮತ್ತೊಂದು ಮನೆಯೂ ಸಿದ್ಧವಾಯಿತು. ವೆಂಕಪ್ಪನವರ ಸಂಸಾರ ದೊಡ್ಡದಾಯಿತು. ೫ ಜನ ಹೆಣ್ಣು ಮಕ್ಕಳು, ೪ ಜನ ಗಂಡು ಮಕ್ಕಳು ಇವರಿಗೆ. ಹೆಣ್ಣು ಮಕ್ಕಳೆಲ್ಲಾ ಹಿರಿಯರಾಗಿದ್ದು ಅವರ ಲಗ್ನಗಳ ಭರಾಟೆಯಲ್ಲಿ ಒಂದು ಮನೆ ಕೈಬಿಟ್ಟಿತ್ತು. ೧೯೫೪ರಲ್ಲಿ ಇವ ರಿಗೆ ಸಾಗರದ ವೃತ್ತಿ ಶಿಕ್ಷಣಶಾಲೆಗೆ ಮೈಸೂರಿನಿಂದ ವರ್ಗವಾಯಿತು. ಮೈಸೂರಿನಲ್ಲಿ ಮಕ್ಕಳನ್ನು ಬಿಟ್ಟು ತಾವು ಪತ್ನಿ ಸಮೇತ ಸಾಗರಕ್ಕೆ ಬಂದರು. ವೆಂಕಪ್ಪನವರ ಕೃತಿಯೊಂದನ್ನು ಸಾಗರದ ಅಂಗಡಿಯಲ್ಲಿ ನೋಡಿದ ಗೌರ್ನರ್,

ಮಂಗಲದಾಸ್ ಪಕ್ವಾಸಾ ವೆಂಕಪ್ಪನವರ ಮನೆಗೆ ಭೇಟಿ ನೀಡಿದರು. ಈ ಸುದ್ದಿ ದೊಡ್ಡದೇ ಆಯಿತು. ವೆಂಕಪ್ಪನವರು ರಾತ್ರಿಯ ವೇಳೆ ಪೆಟ್ರೋಮ್ಯಾಕ್ಸ್ ಬೆಳಕಿನಲ್ಲಿ ಕೃತಿ ರಚಿಸುತ್ತಿದ್ದರಿಂದಲೋ ಏನೋ ಅವರ ಬಲಗಣ್ಣು ನಂದಿ ಹೋಯಿತು. ಆದರೂ ಒಂದೇ ಕಣ್ಣಿನಿಂದ ಕೆಲಸವನ್ನು ಮಾಡುತ್ತಾ ಬಂದರು. ೧೯೬೫ರಲ್ಲಿ ಸರಕಾರಿ ಕೆಲಸದಿಂದ ನಿವೃತ್ತರಾದ ಕೂಡಲೇ ಮೈಸೂರಿಗೆ ಬಂದು ನೆಲಸಿದರು. ರಕ್ತದ ಏರೊತ್ತಡ ಕಾಣಿಸಿಕೊಂಡಿತು. ಉಳಿದ ಹೆಣ್ಣು ಮಕ್ಕಳ ಲಗ್ನದ ಸಲುವಾಗಿ ಮನೆಯ ಮೇಲೆ ಸಾಲ ತೆಗೆದರು. ಅವರ ನಿವೃತ್ತಿ ಹಣ ಆ ಒಂದು ಮನೆಯ ಸಾಲವನ್ನು ತೀರಿಸಿತು. ಇರಲು ಒಂದು ಮನೆ ಉಳಿಯಿತು. ರಕ್ತದ ಒತ್ತಡದಿಂದಾಗಿ ಮನೆಯಲ್ಲೇ ಇರುತ್ತಿದ್ದರು. ನಾನು ವೆಂಕಪ್ಪನವರನ್ನು ಆಗಾಗ ಭೇಟಿ ಮಾಡುವುದು ರೂಢಿಯಾಗಿತ್ತು. ನಾನು ಯಾವ ಚಿತ್ರವನ್ನು ರಚಿಸಿದರೂ ಮೊದಲು ವೆಂಕಪ್ಪನವರಿಗೆ ತೋರಿಸುತ್ತಿದ್ದೆ. ಅವರು ಸಹೃದಯದಿಂದ ತಮ್ಮ ಮೆಚ್ಚುಗೆಯನ್ನು ಸೂಚಿಸಿ ಹುರಿದುಂಬಿಸುತ್ತಿದ್ದರು. ಒಳ್ಳೆಯ ಕಲೆಯನ್ನು ಕಲಾವಿದರನ್ನು ಮೆಚ್ಚುವ ಧಾರಾಳ ಗುಣ ಇವರದಾಗಿತ್ತು. ವೆಂಕಪ್ಪನವರು ಅಮೃತಶಿಲೆಯಲ್ಲೂ ಕೃತಿ ರಚನೆ ಮಾಡಿದ್ದಾರೆ. ಆಳೆತ್ತರದ ಕೃತಿಗಳನ್ನು ಅಮೃತಶಿಲೆಯಲ್ಲಿ ಕಡೆಯಬೇಕೆಂಬ ಇವರ ಮಹದಾಸೆ ಅನಾರೋಗ್ಯದಿಂದಾಗಿ ಕೈಗೂಡಲಿಲ್ಲ. ನಾವು ಕೆಲವು ಮಿತ್ರರು ದೆಹಲಿಯ ಕಲಾ ಪ್ರದರ್ಶನದ ಸಲುವಾಗಿ ಹೊರಟಿದ್ದೆವು. ಹೋಗುವ ಮುನ್ನ ವೆಂಕಪ್ಪನವರನ್ನು ಭೇಟಿಯಾಗಿದ್ದೆವು. ಹಾಸಿಗೆ ಹಿಡಿದ ಅವರು 'ಹೋಗ್ತೀರಾ ನನ್ನ ಕೈ ಬಿಟ್ಟಿರಾ?' ಎಂದು ಆಡಿದ ಮಾತುಗಳನ್ನು ನೆನೆದರೆ ಈಗಲೂ ಕಣ್ಣು ಮಂಜಾಗುತ್ತದೆ. ೨೩-೧೨-೬೬ರ ಶುಕ್ರವಾರ ರಾತ್ರಿ ಮೈಸೂರಿನ ಕೆ. ಆರ್. ಆಸ್ಪತ್ರೆಯಲ್ಲಿ ನಿಧನರಾದ ವಾರ್ತೆ ದೆಹಲಿಯಲ್ಲಿದ್ದ ನಮಗೆ ಮುಟ್ಟಿದಾಗ ದಿಗ್ಭ್ರಮೆಯಾಯಿತು. ನಿಜವಾಗಿಯೆಂದರೆ ವೆಂಕಪ್ಪನವರ ಕಲೆಗಾರಿಕೆಗೆ ರಾಜ್ಯ ಸರಕಾರದಿಂದ ಎಂದೋ ಪ್ರಶಸ್ತಿ, ಗೌರವ ಸಲ್ಲಬೇಕಿತ್ತು. ಆದರೆ ಸಲ್ಲಲಿಲ್ಲ ಎಂಬ ವ್ಯಥೆ ಮಾತ್ರ ನಮ್ಮನ್ನು ಕಾಡುತ್ತಿದೆ.

✡



## ಧರ್ಮ

ಎಲ್ಲ ಮತ ಧರ್ಮಗಳೂ ವೃತ್ತದ ಪರಿಧಿಯ ಮೇಲಿನ ಬಿಂದುಗಳಂತೆ, ವೃತ್ತದ ಕೇಂದ್ರವೇ ಪರಮಾತ್ಮ ಸಾಕ್ಷಾತ್ಕಾರ. ಎಲ್ಲ ತ್ರಿಜ್ಯಗಳೂ ಕಡೆಗೆ ಕೇಂದ್ರ ಬಿಂದುವನ್ನೇ ಸೇರುವಂತೆ ಎಲ್ಲ ಮತ ಧರ್ಮಗಳೂ ಒಬ್ಬನೇ ಪರಮಾತ್ಮನೆಡೆಗೆ ಕರೆದೊಯ್ಯುವ ವಿವಿಧ ಉಪಾಸನಾ ಮಾರ್ಗಗಳು. ಇವುಗಳಲ್ಲಿ ಮೇಲೂ ಕೀಳೆಂಬ ಭಾವನೆ ಇಲ್ಲ. ಆದರೂ, ನಮ್ಮ ಧರ್ಮ ನಮಗೆ ಉತ್ತಮ. ಎಲ್ಲರೂ ಅವರವರ ಧರ್ಮವನ್ನು ಸರಿಯಾಗಿ ಅರ್ಥಮಾಡಿಕೊಂಡು ಆಚರಿಸಿದರೆ ಪ್ರೀತಿಯುತ ಸಹಬಾಳ್ವೆ ಸಿದ್ಧಿಸುತ್ತದೆ. ಇದು ಆದರ್ಶ ಹಿಂದುವಿನ ನಿಲುವು.

ಸಂಗ್ರಹ: ಬಿ. ವಿ. ರಾಮೇಗೌಡ

# ಸುಖ ಪ್ರಯಾಣಕ್ಕೆ......!

ಎಚ್.ಬಿ.ಮಂಜುನಾಥ್



ಬೇಜಾರು ಕಳೆಯಲು ಕ್ಯಾಸೆಟ್ ಕೇಳಿಸುತ್ತೇವೆ, ಇಷ್ಟವಿಲ್ಲದವರು ಕಿವಿಗೆ ಈ ಹತ್ತಿ ತುರುಕಿಕೊಳ್ಳಬಹುದು.



ನಿಂತವರೂ ನಿರಾತಂಕವಾಗಿ ನಿದ್ರಿಸಬಹುದು **ಬಿಗಿ**ಯಾಗಿ ಬೆಲ್ಟ್ ಬಿಗಿದಿರುವುದರಿಂದ ಕುಳಿತವರ ಮೇಲೆ ಬೀಳುವ ಭಯವಿಲ್ಲ.



ಓಕರಿಕೆ, ವಾಂತಿ ಬರುವಂತಾದರೆ ಹಿಂದಿನ ಕಿಟಕಿ ಬಳಿ ಹೋಗಬೇಕಾಗಿಯೇ ಇಲ್ಲ. ಅಲ್ಲಲ್ಲೇ ವ್ಯವಸ್ಥೆ ಮಾಡಲಾಗಿದೆ.

ನಮ್ಮ ಗೆಳತಿಯೊಬ್ಬರು ಇತ್ತೀಚೆಗೆ ಸಿಂಹಳಕ್ಕೆ ಹೋದಾಗ ಬಂದ ಅನುಭವ ಇದು.

ಅವರು ತಮ್ಮ ಸಂಗಡಿಗರೊಡನೆ ಒಮ್ಮೆ ಅನುರಾಧಾಪುರದಲ್ಲಿ ಒಂದು ಗಣಪತಿ ದೇವಸ್ಥಾನಕ್ಕೆ ಹೋದರು. ಅಲ್ಲಿ ದೇವರ ಮುಂದೆ ಎಲ್ಲಾ ರೀತಿಯ ಹಣ್ಣುಗಳನ್ನು ಹೆಚ್ಚಿ ತಟ್ಟೆಗಳಲ್ಲಿಟ್ಟಿದ್ದರು. ನೈವೇದ್ಯ ಆಗಿರುವಂತೆ ಕಂಡುಬಂದದ್ದರಿಂದ ಅಲ್ಲಿದ್ದ ದೇವಸ್ಥಾನದ ಮೇಲ್ವಿಚಾರಕರನ್ನು "ಈ ಹಣ್ಣುಗಳನ್ನು ತೆಗೆದುಕೊಳ್ಳಬಹುದೇ" ಎಂದು ಕೇಳಿದರು. ಅವರು ಆಗಲಿ ಎಂದರು. ಇವರೆಲ್ಲರೂ ಹಣ್ಣುಗಳನ್ನು ಮನಸಾರೆ ತಿಂದು ಅಲ್ಲಿಂದ ಹೊರಟರು.

ಬಿಸಿಲು ಜೋರಾಗಿತ್ತು. ಹತ್ತಿರದಲ್ಲೇ ಒಂದು ಕಲ್ಲು ಮಂಟಪವಿತ್ತು. ಅವರ ಹಾಗೆಯೇ ಬಂದ ಅನೇಕ ಭಕ್ತಾದಿಗಳು, ಪ್ರವಾಸಿಗರು ಅಲ್ಲಿ ಕುಳಿತು ದಣಿವಾರಿಸಿಕೊಳ್ಳುತ್ತಿದ್ದರು. ಇವರು ಸ್ವಲ್ಪ ಹೊತ್ತು ಅಲ್ಲೇ ಕುಳಿತುಕೊಂಡರು. ಇವರ ಮುಂದುಗಡೆ ಹೆಂಗಸೊಬ್ಬಳು ಮಗುವನ್ನು ಹೊಡೆಯುತ್ತಿದ್ದಳು. ಅದರ ಕೈಯಲ್ಲೂ ಹೆಚ್ಚಿದ ಹಣ್ಣಿನ ಹೋಳುಗಳು. ಮಗುವನ್ನು ಏಕೆ ಆಕೆ ಹೊಡೆಯುತ್ತಿದ್ದಾಳೆ ಎಂದು ಪಕ್ಕದವರನ್ನು ಇವರು ವಿಚಾರಿಸಿದಾಗ ಅವರು "ನೋಡಿ, ಇಲ್ಲಿ ಮಕ್ಕಳಿಗೆ ರೋಗರುಜಿನ ಬಾರದಂತೆ ಹೆಚ್ಚಿದ ಹಣ್ಣಿನ ಹೋಳುಗಳನ್ನು ತಂದು ನಿವಾಳಿಸಿ ದೇವರ ಮುಂದೆ ಇಟ್ಟು ಹೋಗುವುದು ಇಲ್ಲಿಯ ಪದ್ಧತಿ. ಅಂತಹ ಹಣ್ಣಿನ ಹೋಳುಗಳನ್ನು ಈ ಮಗು ತಿಂದುಬಿಟ್ಟಿದೆ" ಎಂದರು.

ಆಗ ನನ್ನ ಗೆಳತಿಯ ಪಾಡನ್ನು ಊಹಿಸುವುದೂ ಬೇಡ.

-ಶ್ರೀಮತಿ ರಾಜಮ್ಮ ಮತ್ತು ಶಾರದಾ ಶಾಮಣ್ಣ

ನಾನು ಸಾರ್ವಜನಿಕ ಉದ್ದಿಮೆಯ ಒಬ್ಬ ನೌಕರ. ನಮ್ಮ ವೈದ್ಯಶಾಲೆಯಲ್ಲಿ ಅಲೋಪತಿ, ಹೋಮಿಯೋಪತಿ, ಆಯುರ್ವೇದ ಪದ್ಧತಿಯ ಚಿಕಿತ್ಸೆಗೆ ಅವಕಾಶವಿದೆ. ಪ್ರತಿ ವೈದ್ಯಕೀಯ ಕ್ಷೇತ್ರದ ಪರಿಣತರು ವಾರಕ್ಕೆರಡು ದಿನ ನಮ್ಮ ವೈದ್ಯಶಾಲೆಗೆ ಭೇಟಿ ನೀಡಿ ರೋಗಿಗಳನ್ನು ಪರೀಕ್ಷಿಸಿ ಅವರಿಗೆ ಚಿಕಿತ್ಸೆ ನೀಡುವ ಕ್ರಮವಿದೆ. ನಾನು ವಾಯುಪ್ರಕೋಪದ ಉಪಶಮನಕ್ಕೆ ಇಂಗ್ಲಿಷ್ ಔಷಧಿ ಸೇವಿಸಿ ಅದರಿಂದ ಪರಿಣಾಮ ಸಿಗದೆ ಬೇಸತ್ತು ಆಯುರ್ವೇದ ಚಿಕಿತ್ಸೆಗೆ ಒಳಪಡಲು ನಿರ್ಧರಿಸಿ ಆಯುರ್ವೇದ ವೈದ್ಯರನ್ನು ಕಾಣಲು ಹೋದೆ. ವೈದ್ಯರನ್ನು ಕಂಡು ನನಗೆ ಇರುವ ತೊಂದರೆ ಬಗ್ಗೆ ವಿವರಿಸಿ ನಾನು ತೆಗೆದುಕೊಂಡು ಪರಿಣಾಮ ಬೀರದ ಇಂಗ್ಲಿಷ್ ವೈದ್ಯ ವಿಧಾನದಲ್ಲಿ ನಾನು ಪಟ್ಟ ಬವಣೆಗಳೊಂದಿಗೆ ಔಷಧದ ಪಟ್ಟಿಯನ್ನು ಅವರಿಗೆ ವಿವರಿಸಿದೆ. ಅವರು ಆಯುರ್ವೇದ ವೈದ್ಯರ ಬಗ್ಗೆ ದೊಡ್ಡದೊಂದು ಭಾಷಣವನ್ನು ಬಿಗಿದು ಅದರ ಮಹತ್ವ ಮತ್ತು ಪೂರ್ಣವಾಗಿ ಬೇರು ಸಹಿತ ರೋಗಗಳನ್ನು ಅದು ನಿವಾರಣೆ ಮಾಡುವ ವಿಧಾನಗಳನ್ನು ತಿಳಿಸಿದರು. ಇಂಗ್ಲಿಷ್ ಔಷಧದ ಬಗ್ಗೆ ಅವರ ದುಷ್ಪರಿಣಾಮದ ಬಗ್ಗೆ ಬಹಳ ಮಾತನಾಡಿದರು. ಇಂಗ್ಲಿಷ್ ವೈದ್ಯವನ್ನು ಎಷ್ಟು ಸೌಜನ್ಯರಹಿತ ಶಬ್ದಗಳಿಂದ ದೂಷಿಸಬಹುದೋ ಅಷ್ಟೂ ದೂಷಿಸಿದರು. ಇಷ್ಟಕ್ಕೆ ನಿಲ್ಲಿಸದೆ ಅವರು ಚಿಕಿತ್ಸೆ ನೀಡಿದ ದೊಡ್ಡ ದೊಡ್ಡ ರಾಜಕಾರಣಿಗಳು, ಮಂತ್ರಿ ಮಹೋದಯರು, ಚಿತ್ರನಟರು, ಹಿನ್ನೆಲೆ ಗಾಯಕರು ಮುಖ್ಯ ಸರಕಾರಿ ಅಧಿಕಾರಿಗಳನ್ನು ಹೆಸರಿಸಿದರು. ಈ ಮೇಲ್ಕಂಡವರೆಲ್ಲ ಇವರ ಮನೆಗೆ ಬಂದು ಕಾದಿದ್ದು ಔಷಧ ತೆಗೆದುಕೊಂಡು ಹೋಗುವುದಾಗಿಯೂ ತಿಳಿಸಿದರು. ಅಲ್ಲದೆ ವಾಯು ಪ್ರಕೋಪಕ್ಕೆ ಆಯುರ್ವೇದದಲ್ಲಿ ಒಳ್ಳೆಯ ಔಷಧವಿರುವುದಾಗಿ ಹೇಳಿದರು. ಅಲೋಪತಿ ಚಿಕಿತ್ಸೆ ಅವರ ದುಷ್ಪರಿಣಾಮಗಳನ್ನೂ ವಾಯು ಪ್ರಕೋಪಕ್ಕೆ ಆ ಔಷಧಗಳ ಸೇವನೆಯಿಂದ ದೇಹದ ಮೇಲೆ ಆಗುವ ಕೆಟ್ಟ ಪರಿಣಾಮಗಳನ್ನೂ ಹೇಳುವುದನ್ನವರು ಮರೆಯಲಿಲ್ಲ.


363-9

ಅವರ ಭಾಷಣ ಕೇಳಿ ನನಗೆ ಇಂಗ್ಲಿಷ್ ಔಷಧಿಯ ಬಗ್ಗೆ ಇದ್ದ ಅಲ್ಪ ಸ್ವಲ್ಪ ವ್ಯಾಮೋಹ ಮಾಯವಾಯಿತು. ವೈದ್ಯರು ಕೊಟ್ಟ ಔಷಧಿಯ ಚೀಟಿ ಹೊತ್ತು ನಾನು ನಡೆದೆ.

ಇದಾಗಿ ಒಂದು ವಾರವಾಗಿರಬಹುದು. ನಮ್ಮ ತಂದೆಯವರ ರಕ್ತ ಪರೀಕ್ಷೆಯ ವಿವರಗಳನ್ನು ತೋರಿಸಲು ವೈದ್ಯಶಾಲೆಯ ಮುಖ್ಯ ವೈದ್ಯಾಧಿಕಾರಿಗಳನ್ನು ಭೇಟಿ ಮಾಡಲು ಹೋದೆ. ಮುಖ್ಯ ವೈದ್ಯಾಧಿಕಾರಿಗಳ ಸಂದರ್ಶನದ ಕೋಣೆ ಮುಚ್ಚಿತ್ತು. ಯಾರೋ ಬೇರೆ ವೈದ್ಯರೊಡನೆ ಅವರು ಸಮಾಲೋಚನೆ ನಡೆಸುತ್ತಿರುವುದಾಗಿ ತಿಳಿಯಿತು. ಹದಿನೈದು ನಿಮಿಷದ ನಂತರ ಅವರ ಕೋಣೆಯ ಕದ ತೆಗೆಯಿತು. ಹೊರ ಬಂದವರು ಆಯುರ್ವೇದ ವೈದ್ಯರು! ರಕ್ತ ಪರೀಕ್ಷೆಯ ವಿವರ ತೋರಿಸಿ ನಾನು ಮುಖ್ಯ ವೈದ್ಯಾಧಿಕಾರಿಗಳಲ್ಲಿ (ಅವರು ನನಗೆ ಬಹಳ ಪರಿಚಿತರಾದ್ದರಿಂದ) ಆಯುರ್ವೇದ ವೈದ್ಯರ ಬಗ್ಗೆ ನನ್ನ ಗೌರವ ವ್ಯಕ್ತ ಪಡಿಸಿದೆ. ಅದಕ್ಕೆ ಅವರು "ನಿಮ್ಮ ಆಯುರ್ವೇದ ವೈದ್ಯರಿಗೆ ನಾನು ಈಗ್ಗೆ ಆರು ತಿಂಗಳಿದ ವಾಯುಪ್ರಕೋಪಕ್ಕೆ ಚಿಕಿತ್ಸೆ ನೀಡುತ್ತಿದ್ದೇನೆ. ಮೊನ್ನೆ ಕೊಟ್ಟ ಮಾತ್ರೆಗಳಿಂದ ಪರಿಣಾಮ ಚೆನ್ನಾಗಿ ಆಗಿದೆ ಎಂದು ಅದೇ ಮಾತ್ರೆಗಳನ್ನು ಬೇಡಿ ಬಂದಿದ್ದರು. ಮಾತ್ರೆಗಳನ್ನು ಬರೆಸಿಕೊಂಡರಲ್ಲದೆ ಅವರು ಇಚ್ಛಿಸಿದ ಪ್ರಕಾರ ಅವರ ದೇಹ ಪರೀಕ್ಷಿಸಿ ಮತ್ತೆ ಬೇರೆ ಕೆಲವು ಹೊಸ ಮಾತ್ರೆಗಳನ್ನೂ ಬರೆದು ಕೊಟ್ಟೆ" ಎಂದರು. -ಶ್ರೀಕಂಠಯ್ಯ

ಇತ್ತೀಚೆ ನಿಧನರಾದ ಕೇಂದ್ರದ ವಾರ್ತಾ ಮತ್ತು ಪ್ರಸಾರ ಖಾತೆಯ ಮಾಜಿ ಮಂತ್ರಿ ಕೆ. ಕೆ. ಷಾ ಅವರು ತಮಿಳುನಾಡಿನ ರಾಜ್ಯಪಾಲರಾಗಿದ್ದಾಗಿನ ಘಟನೆ ಇದು. ಮೈಸೂರಿನ ಮಹಾರಾಜಾ ಕಾಲೇಜಿನ ಪತ್ರಿಕೋದ್ಯಮ ವಿದ್ಯಾರ್ಥಿಗಳಾದ ನಾವು ನಮ್ಮ ಶೈಕ್ಷಣಿಕ ಪ್ರವಾಸದ ಅಂಗವಾಗಿ ಆ ರಾಜ್ಯಪಾಲರನ್ನು ಭೇಟಿ ಮಾಡುವ ಕಾರ್ಯಕ್ರಮವನ್ನು ಹಾಕಿಕೊಂಡು ಮೊದಲೇ ಅವರಿಂದ ಅನುಮತಿಯನ್ನು ಪಡೆದಿದ್ದೆವು.

ಮದರಾಸನ್ನು ತಲಪಿದ ಮೇಲೆ ಗೊತ್ತು ಪಡಿಸಿದ ದಿನದಂದು ನಾವು ರಾಜಭವನಕ್ಕೆ ಹೋದೆವು. ಆಗ ವೇಳೆ ಎರಡು ಗಂಟೆ. ಅಲ್ಲಿ ನಮಗೆಲ್ಲಾ ಕಾಫಿ, ತಿಂಡಿಗಳ ಆತಿಥ್ಯ ಆಯಿತು. ನಂತರ ರಾಜ್ಯಪಾಲರನ್ನು ಭೇಟಿಗೆಂದು ನಾವು ಹಾಲೊಂದರಲ್ಲಿ ಕುಳಿತೆವು.

ಆಗ ತಾನೇ ಅಲ್ಲಿಗೆ ಬಂದ ಷಾ ಅವರು ನಮ್ಮನ್ನೆಲ್ಲಾ ಹಾರ್ದಿಕವಾಗಿ ಸ್ವಾಗತಿಸುತ್ತಾ, "ನೀವೆಲ್ಲರೂ ಪ್ರಖ್ಯಾತ ಮಹಾರಾಜಾ ಕಾಲೇಜಿನ ವಿದ್ಯಾರ್ಥಿಗಳು. ಅದರಲ್ಲೂ ಪತ್ರಿಕೋದ್ಯಮ ವಿಷಯವನ್ನು ಅಭ್ಯಸಿಸುತ್ತಿದ್ದೀರಿ. ನಾನು ನಿಮಗೆ ಒಂದು ಪ್ರಶ್ನೆ ಕೇಳಬಯಸುತ್ತೇನೆ. ಈಗ latest news ಏನು ಹೇಳಿ?" ಎಂದರು.

ಅವರು ಈ ಪ್ರಶ್ನೆ ನಮಗೆ ತುಂಬಾ ಅನಿರೀಕ್ಷಿತವಾಗಿತ್ತು. ಈ ಪ್ರಶ್ನೆಯನ್ನು ನಾವು ಅವರಿಂದ ಎದುರುನೋಡಿರಲಿಲ್ಲ. ನಮ್ಮಲ್ಲೊಬ್ಬ ಆಗಲೇ ತನ್ನ ಬಳಿಯಿದ್ದ ರೇಡಿಯೋವನ್ನು ಚಾಲುಮಾಡಿದ. ಗಂಟೆ ಎರಡೂವರೆ ಆಗಿದ್ದರಿಂದ ಇಂಗ್ಲಿಷ್ ವಾರ್ತಾ ಪ್ರಸಾರ ಮುಗಿದು ಹೋಗಿತ್ತು. ಏನೂ ತೋಚದೆ ರೇಡಿಯೋ ಆರಿಸಿದ. ಮತ್ತೊಬ್ಬ ವೃತ್ತ ಪತ್ರಿಕೆ ನೋಡತೊಡಗಿದ. ಅದರಲ್ಲಿ ಏನೂ ಬಿಸಿ ಸುದ್ದಿ ಇರಲಿಲ್ಲ. ಆ ವೇಳೆಗಾಗಲೇ ಅವೆಲ್ಲಾ ಹಳತಾಗಿದ್ದವು. ನಮಗೇ ಏನೂ ಹೇಳಲು ತೋಚಲಿಲ್ಲ.

ನಮ್ಮ ಅಸಹಾಯಕತೆಯನ್ನು ನೋಡಿ ಷಾ ಅವರೇ ಹೇಳಿದರು, "ತಮಿಳುನಾಡಿನ ರಾಜ್ಯಪಾಲರಾದ ಷಾ ಅವರನ್ನು ಮೈಸೂರಿನ ಮಹಾರಾಜಾ ಕಾಲೇಜಿನ ಪತ್ರಿಕೋದ್ಯಮ ವಿದ್ಯಾರ್ಥಿಗಳು ಭೇಟಿಮಾಡುತ್ತಿದ್ದಾರೆ. ಇದೇ ಈಗಿನ latest news ಅಲ್ಲವೇ?"

—ಎಂ. ಜೆ. ಸುಬ್ರಮಣ್ಯಂ

ನೀರಿಗಾಗಿ ಕಾಯುತ್ತಿರಲಿಲ್ಲ. ಕಾಮೇಶ್ವರಿ ಅಡಿಗೆ ಮನೆಯಿಂದ ಹೊರ ಬಂದು ಒಮ್ಮೆ ನೋಡಿದರೆ ಸಾಕು. "ಏನೇ ಲಕ್ಷ್ಮಿ......" ಎಂಬ ಧ್ವನಿ ಕೇಳಿದರೆ ಸಾಕು. ಹತ್ತಿರ ಬಂದು ಸವರ ಬೇಕಾಗಿರಲಿಲ್ಲ. ದೂರದ ನೋಟ, ಒಂದೇ ಒಂದು ಮಾತು...

"ಮ್...ಮಾ..."

ಕಾಮೇಶ್ವರಿ ಬರುವವರೆಗೂ ಅದು ನಿಲ್ಲಿಸು-ವಂತೆ ಕಾಣಲಿಲ್ಲ. ಆ ಕಿರುಚಾಟ ಕೇಳಿ ಸಹಿಸ ಲಾರದ ಜನನಿ, ಕಾಲೇಜಿಗೆ ಹೊರಡಲು ಮಪಡಿ ಇಳಿಯುತ್ತಾ ಒಮ್ಮೆ ಅಡಿಗೆ ಮನೆಯತ್ತ ಇಣುಕಿದಳು. ಒಳಗಿದ್ದ ಅಮ್ಮನೊಂದಿಗೆ ಆಶ್ಚರ್ಯದಿಂದ, "ಏನಮ್ಮಾ, ಲಕ್ಷ್ಮಿ ಹಾಗೆ ಕೂಗ್ತಾ ಇದೆ. ನೀನು ಸುಮ್ಮನೆ ಇದೀಯಲ್ಲಾ?" ಎಂದಳು.

"ಹೂಂ..." ಎಂದು ದುಃಖವನ್ನು ಅದು-ಮಿಟ್ಟುಕೊಂಡಳು.

"ಯಾಕಮ್ಮ... ಏನೋ ಒಂದು ರೀತಿ-ಯಿದೀಯಲ್ಲಾ, ಹಸು, ಅಮ್ಮಾ ಎನ್ನು-ತ್ತಿದ್ದಂತೆಯೇ ಒಲೆಯ ಮೇಲೆ ಹಾಲನ್ನು ಇಟ್ಟಿದ್ದರೂ ಓಡುತ್ತಿದ್ದೆ. ಇವತ್ತು ಅಷ್ಟು ಹೊತ್ತಿನಿಂದ ಕಿರುಚಾಡ್ತಾ ಇದೆ. ಪಟ ಮಾಡಿ ಒಳಗೇ ಕೂತಿದೀಯಲ್ಲಾ?"

"ಹೌದು. ಇವತ್ತು ಒಂದು ದಿನ ತಾನೇ ಕೂಗುತ್ತೆ. ನಾಳೆಯಿಂದ ಎಷ್ಟೇ ಕೂಗಿ ಕೊಂಡರೂ ನಾನೇನು ಓಡಿಹೋಗ್ತೇನೆಯೇ? ನಿಮ್ಮ ದೊಡ್ಡಮ್ಮ ಹೋಗ್ತಾರೆ..."

"ಯಾಕಮ್ಮ... ಪಕ್ಕದ ರಸ್ತೆಯಲ್ಲಿರುವ ನಮ್ಮ ದೊಡ್ಡಮ್ಮ ಯಾಕೆ ಇಲ್ಲಿಗೆ ಬಂದು ಈ ಕೆಲಸ ಮಾಡುತ್ತಾರೆ?"

"ದೊಡ್ಡಮ್ಮ ಇಲ್ಲಿಗೆ ಬರೋದಿಲ್ಲ. ಲಕ್ಷ್ಮಿಯೇ ಅಲ್ಲಿಗೆ ಹೋಗುತ್ತೆ."

"ಲಕ್ಷ್ಮಿ ಅವರ ಮನೆಗೆ ಹೋಗುತ್ತದೆಯೇ?... ಏನಮ್ಮಾ? ಯಾಕೆ ಅಲ್ಲಿಗೆ ಹೋಗಬೇಕು?"

"ಯಾಕೇಂತ ನನ್ನನ್ನ ಕೇಳಿದರೆ? ನಿಮ್ಮ ಅಪ್ಪನನ್ನು ಕೇಳು. ಹೋಗಿ...ದೊಡ್ಡಮ್ಮ-ನನ್ನು ಕೇಳು. ಇವರಮ್ಮನ ವಜ್ರದ ಓಲೆಯನ್ನು ನಿಮ್ಮ ದೊಡ್ಡಮ್ಮ ಇಟ್ಟು ಕೊಂಡಿದ್ದಾರಲ್ಲವಾ? ಅದನ್ನು ತಂದು ನಿನ್ನ ಮದುವೆಯಲ್ಲಿ, ನಿನಗೆ ಕೊಡಬೇಕಂತ ನಿಮ್ಮ ಅಪ್ಪ ಆಸೆಯಿಂದ ಕೇಳಿದ್ದಾರೆ. ಅದಕ್ಕೆ ೧೦,೦೦೦ ರೂಪಾಯಿಗಳ ಜತೆಗೆ ಲಕ್ಷ್ಮಿಯ ಬೆಲೆಯನ್ನು ಮಾಡಿದ್ದಾರೆ. ನಿಮ್ಮ ಅಪ್ಪನೂ ಸರೀಂತ ಒಪ್ಪಿ ಹಣ ಕೊಟ್ಟು ಬಂದು, ನಾಳೆ ಲಕ್ಷ್ಮಿಯನ್ನು ಅವರ ಮನೆಗೆ ಅಟ್ಟುವುದಾಗಿ ಹೇಳಿ ಓಲೆಯನ್ನು ತಂದಿದ್ದಾರೆ. ನಿನ್ನೆ ರಾತ್ರಿ ನನಗೆ ಈ ವಿಚಾರ ತಿಳಿಯಿತು. ಲಕ್ಷ್ಮಿಯನ್ನು ಕಳುಹಿಸಬಾರದೂಂತ ಇಡೀ ರಾತ್ರಿ ನಾನು ಜಗಳವಾಡಿದೆ. ಗೋಳಾಡಿದೆ... 'ನಮ್ಮ ಅಮ್ಮನ ವಜ್ರದ ಓಲೆ ಮಗುವಿಗೆ ಸಿಗುತ್ತೇಂತ ನಾನು ಸಂತೋಷ-ವಾಗಿದ್ದೆ. ಇವಳಾದರೋ ಹಸುವಿಗೆ ಅಳ್ತಾ ಇದ್ದಾಳೆ' ಅಂತ ಸಿಡುಕುತ್ತಿದ್ದಾರೆ. ಇದು ಹೋದರೆ ಇನ್ನೊಂದು ಹಸು, ಒಳ್ಳೆ ಸೀಮೆ ಹಸುವನ್ನೇ ತರ್ತೇನೆ ಅಂತ ಹೇಳ್ತಾರೆ. ಮುಂದೆ ಮಾತಾಡಿದರೆ ಸಿಟ್ಟಾಗ್ತಾರೆ. ಜನನಿ, ನೀನೇ ಹೇಳಿ ನೋಡು... ನಿನ್ನನ್ನೂ ಲಕ್ಷ್ಮಿಯನ್ನೂ ಬಿಟ್ಟು ನಾನು ಒಂದು ದಿನವಾದರೂ ಇದ್ದೇನೆ-ಯೇಂತ ನೀನೇ ಹೇಳು? ಒಂದು ರಾತ್ರಿ-ಯಾದರೂ ಎಲ್ಲಿಗಾದ್ರೂ ಹೋಗಿದೀನಿಯೇ? ಅಮ್ಮ, ಅಣ್ಣ-ತಮ್ಮ, ಅಕ್ಕ-ತಂಗಿ ಅಂತ ಎಲ್ಲೀಗಾದ್ರೂ ಹೋಗಿದೀನಿಯೇ?"

"ನೀನು ಮಾತನಾಡುವ ಕುಲಮಗಳು (ಮೊದಲ ಮಗಳು), ಅದು ಮಾತಾಡದ ಕೊನೆಯ ಮಗಳು ಅಂತ್ಲೇ ನನ್ನ ಭಾವನೆ. ಅದು ಮನೆಗೆ ಬಂದ ಈ ನಾಲ್ಕು ವರ್ಷ ಏನಾದ್ರೂ ವ್ಯತ್ಯಾಸವಾಗಿದೆಯೇ? ಆ ಲಕ್ಷ್ಮಿಯನ್ನು ಕೊಡಲು ಯಾರು ತಾನೆ ಒಪ್ಪುತ್ತಾರೆ? ಓಡಿಸೋದಿಕ್ಕೆ ಯಾರಿಗೆ ತಾನೆ ಮನಸ್ಸು ಬರುತ್ತೆ?"

ಹಿಂದಿನಿಂದ ಅದನ್ನು ಕೇಳಿಸಿಕೊಳ್ಳುತ್ತಲೇ ಒಳಗೆ ಬಂದ ಕಂದಸ್ವಾಮಿ ಕೋಪದಿಂದ,

ಉತ್ತರಿಸಿದ "ಹೌದು...ಓಡಿಸೋಲ್ಲ. ಅದಕ್ಕೆ ಹಾಲು ನಿಂತು ಹೋದರೆ ಏನು ಮಾಡಬೇಕೂಂತ ನಿನ್ನ ಉದ್ದೇಶ?"

"ಆಗಲೂ ಇಲ್ಲೇ ಇಟ್ಕೋತೇನೆ."

"ಕಾಮೇಶ್ವರಿ, ಸುಮ್ಮನೆ ಮಾತನಾಡಬೇಡ. ಹೆತ್ತ ಮಗಳಾದರೂ ಮದ್ವೆ ಮಾಡಿ ಗಂಡನ ಮನೆಗೆ ಕಳುಹಿಸಲೇಬೇಕು. ಹಾಗಿರುವಾಗ ಕೇವಲ ಈ ಮೂಕ ಪ್ರಾಣಿಗಾಗಿ ಹೀಗೆ ದುಃಖಿಸುತ್ತಿರುವೆ... ನಿನ್ನ ಹಸುವಿಗಿಂತ ನನಗೆ ನನ್ನ ತಾಯಿಯ ವಜ್ರದ ಓಲೆ ಮುಖ್ಯ. ಅದನ್ನು ಹೇಗಾದರೂ ಮಾಡಿ ಅವರಿಂದ ತೆಗೆದುಕೊಳ್ಳಬೇಕೆಂದು ನಮ್ಮಮ್ಮ ಹೋದಾಗಿನಿಂದ ಪ್ರಯತ್ನಿಸುತ್ತಿರುವೆ. ಈಗ ತಾನೆ ಅತ್ತಿಗೆ ಮನಸ್ಸು ಬದಲಾಯಿಸಿ, ಕೊಡಲು ಒಪ್ಪಿದ್ದಾರೆ. ಕೇವಲ ಈ ಹಸುವಿಗೆ ಆಸೆಪಟ್ಟು ಅದನ್ನು ಕಳೆದುಕೊಳ್ಳಬೇಡ. ಹಸುವನ್ನು ಅಟ್ಟಿಕೊಂಡು ಹೋಗಲು ನಾಳೆ ನಮ್ಮ ಅಣ್ಣ ಬರ್ತಾರೆ, ಅವರು ಬಂದಾಗ ಏನಾದ್ರೂ ಹೇಳಿ ತಡೆದು ಬಿಡಬೇಡ, ಹಾಗೇನಾದ್ರೂ ಮಾಡಿದರೆ ನಾನು ಮನುಷ್ಯನಾಗೋಲ್ಲ..."

"ಸರೀಮ್ಮಾ..." ಎಂದು ಮಗಳು ಮಧ್ಯೆ ಏನನ್ನೋ ಹೇಳಲು ಬಂದಳು. "'ಬೇರೆ ಹಸು ತೆಗೆದುಕೊಡ್ತೇನೆ' ಅಂತ ಅಪ್ಪ ಹೇಳ್ತಾ ಇದಾರಲ್ಲ, ಮತ್ತೇನು? ಲಕ್ಷ್ಮಿಯನ್ನು ಸಾಕಿದಂತೆ ಅದನ್ನೂ ಸಾಕಿದರೆ ಸರಿಹೋಗುತ್ತೆ: ಬೇಕಾದ್ರೆ ಲಕ್ಷ್ಮೀ ಅಂತೇ ಹೆಸರಿಡು..."

"ಬೇರೆ ಹಸು ತೆಗೆದ್ರೆ ಇದಕ್ಕೆ ಜೊತೆಯೆ? ಆ ಹಸು ಲಕ್ಷ್ಮಿ ಆಗೋದಿಕ್ಕೆ ಸಾಧ್ಯವೆ? ಬೇರೊಬ್ಬ ಹುಡುಗಿಯನ್ನು ಜನನಿ ಅಂತ ಕರೆದರೆ ಅವಳು ಜನನಿಯಾಗಿಬಿಡುವಳೆ? ಇದ್ಯಾಕೆ ನಿಮಗೆ ಅರ್ಥ ಆಗ್ತಿಲ್ಲ? ಅವರಿಗಂತೂ ತಿಳಿಯೋದಿಲ್ಲಾಂದ್ರೆ ಈ ಹುಡುಗೀಗಾದ್ರೂ ತಿಳಿಯೋದಿಲ್ಲವೆ?"

ಕಾಮೇಶ್ವರಿ ದುಃಖಿಸುತ್ತಾ ನಿಟ್ಟುಸಿರು ಬಿಟ್ಟಳು. ಅಡಿಗೆಯ ಮನೆಯ ಕಿಟಕಿಯಿಂದ ಕೊಟ್ಟಿಗೆಯಲ್ಲಿದ್ದ ಹಸುವನ್ನು ಅಡಿಯಿಂದ ಮುಡಿಯವರೆಗೆ ನೋಡುತ್ತಿದ್ದಂತೆಯೇ ಕಂದಸ್ವಾಮಿಯ ಅಣ್ಣನ ಧ್ವನಿ ಕೇಳಿಬಂತು. ವರಾಂಡದಲ್ಲಿದ್ದ ಉಯ್ಯಾಲೆಯ ಮೇಲೆ ಕುಳಿತು ಮಾತನಾಡಿ, ತೂಗಾಡಿ, ಕಾಫಿ ಕುಡಿದು ಕ್ಷೇಮ-ಸಮಾಚಾರ ವಿಚಾರಿಸಿ ನಂತರ "ಏನು ಕಂದಸ್ವಾಮಿ ಹಸು ಅಟ್ಟಿಕೊಂಡು ಹೋಗಲೇ?" ಎಂದು ಕೊಟ್ಟಿಗೆಯ ಬಳಿ ಹೋದಾಗ, ಲಕ್ಷ್ಮಿ ಅರ್ಥಮಾಡಿಕೊಂಡು ನಡುಗುತ್ತಾ ಎದ್ದು ನಿಂತಿತು. ಹಗ್ಗವನ್ನು ಒಮ್ಮೆ ತಿವಿದು, ದುರು ದುರು ನೋಡುತ್ತಾ, ಕಾಮೇಶ್ವರಿಗಾಗಿ ಎಂಬಂತೆ ಅಮ್ಮಾ...ಮ್ಮಾ... ಎಂದು ಕೂಗಿಕೊಂಡಾಗ... ಬಂದವರು ಹೆದರಿ, "ಏನೋ ಕಂದಸ್ವಾಮಿ ಇದು..." ಎಂದು ಹೆದರಿ ಪಕ್ಕಕ್ಕೆ ನಿಂತರು.

ಕಂದಸ್ವಾಮಿ "ಏನಿಲ್ಲ ಅಣ್ಣಾ, ನೀವು ಹೊಸಬರು, ಮುಟ್ಟಿದ ತಕ್ಷಣ ಹೆದರುತ್ತಾ ಇದೆ, ಅಷ್ಟೆ" ಎಂದು ಪಕ್ಕಕ್ಕೆ ಬಂದು ಹಿಂದಿನಿಂದ ಜೋರಾಗಿ ಏಟು ಕೊಡಲು ಲಕ್ಷ್ಮಿ ಹಠಹಿಡಿದಿರುವಂತೆ ಕಂಡಿತು. ಮತ್ತೆ ಹಿಂದೆ ಬಂದು ಒಂದೇಟು ಕೊಟ್ಟು, "ಏಯ್ ಲಕ್ಷ್ಮೀ... ಗಂಭೀರವಾಗಿ ಅವರ ಜೊತೆ ಹೋಗು..." ಎಂದು ಗದರಿಸಿ ಹಗ್ಗ ಬಿಚ್ಚಿ ಕರೆದುಕೊಂಡು ಹೊರಡಲು ಅವರ ಕೈಗೆ ಕೊಟ್ಟಾಗ ಲಕ್ಷ್ಮಿ ಮೊಂಡುತನದಿಂದ ನೆಗೆನೆಗೆದು ಆ ಕೊಟ್ಟಿಗೆಯನ್ನು ಸುತ್ತಿ ಸುತ್ತಿ ಬರಲು ಕಂದಸ್ವಾಮಿ ಕೋಪದಿಂದ ಜೋರಾಗಿ ಮತ್ತೆ ನಾಲ್ಕೈದು ಏಟು ಕೊಟ್ಟು ಹಗ್ಗ ಹಿಡಿದು, "ಬನ್ನಿ ಅಣ್ಣ, ನಾನೇ ನಿಮ್ಮ ಮನೆಯ ವರೆಗೆ ಬಿಟ್ಟು ಬರ್ತೀನಿ" ಎಂದು ಮುಂದಾಗಲು, ಲಕ್ಷ್ಮಿ '...ಅಮ್ಮಾ...ಮ್ಮಾ' ಎಂದು ಅರಚುತ್ತಾ ಹಿಂದೆ ಹೋಗುತ್ತಿರೆ...

ಕೊಟ್ಟಿಗೆಯಂತೆ ಅವಳ ಮನಸ್ಸೂ ಬರಿದಾಗಿ ಹೋಯ್ತು. ಲಕ್ಷ್ಮಿ ಹೋಗಿ ಎರಡು ದಿನಗಳಾಗಿರಬಹುದು. ಮೂರನೆಯ ದಿನ ಬೆಳಿಗ್ಗೆ ಕಾಮೇಶ್ವರಿ ಕಾಫಿ ಬೆರಸುತ್ತಿರುವಾಗ ಹೊರಗಿನ ಗೇಟ್ ಬಳಿ ಲಕ್ಷ್ಮಿಯ ಧ್ವನಿ ಕೇಳಿಬಂತು, ತಕ್ಷಣ ಕುಡಿಯುತ್ತಿದ್ದ ಕಾಫಿಯನ್ನು ಕೆಳಗಿಟ್ಟು ಓಡಿಹೋದಳು.

ಗೇಟ್ ಪಕ್ಕದಲ್ಲಿ ಲಕ್ಷ್ಮಿ ನಿಂತಿತ್ತು. ಅವಳನ್ನು ನೋಡಿದ ಕೂಡಲೇ ನೆಗೆದು ಓಡಿ ಬಂತು, ಹತ್ತಿರ ಹೋಗಿ...ಮ್ಮಾ...ಮ್ಮಾ ಎಂದು ಅರಚಿದಾಗ ಮನುಷ್ಯರಂತೆ ಕಣ್ಣಂಚಿನಲ್ಲಿ ನೀರು ತುಂಬಿ ಕೊಳ್ಳಲು ಕಾಮೇಶ್ವರಿ ಕರಗಿಹೋದಳು. ಅವರ ಮುಖವನ್ನು ನೀವಿ, ಮೈಯನ್ನೆಲ್ಲಾ ಸವರಿ "ಹೇಗಿದ್ದೀಯಾ ಲಕ್ಷ್ಮಿ...?" ಎಂದು ಕೇಳು ತ್ತಿದ್ದಂತೆಯೇ ಕಂಪಸ್ವಾಮಿಯ ಅಣ್ಣ ಪೆರಿಯ ಸ್ವಾಮಿಯ ಧ್ವನಿ ಹಿಂದಿನಿಂದ ಕೇಳಿಬಂತು:

"ನೋಡಮ್ಮಾ... ಇದು ಗೊಂತಿನಿಂದ ಕಿತ್ತು ಕೊಂಡು ಬಂದುಬಿಟ್ಟಿದೆ. ಮೂರು ದಿನದಿಂದಲೂ ಮುಸುಂಡಿ ತರ ನೀರನ್ನಲ್ಲದೆ, ಒಂದು ಹಿಡಿ ಹುಲ್ಲು, ತವಡು ಏನೂ ಮುಟ್ಟಿಲ್ಲ, ಎಷ್ಟು ಹಟಮಾರಿ."

"ಹೌದಾ!..." ಎಂದು ತನ್ನ ಬಳಿ ಬಂದ ಲಕ್ಷ್ಮಿಯನ್ನು ನೋಡಿ ಸಂತೋಷಪಟ್ಟಳು.

"ಮೂರು ದಿನಗಳಿಂದ ಉಪವಾಸವಿದೆಯಾ?" ಎಂದು ಒಳಗೋಡಿದಳು. ಹುಲ್ಲಿನ ಕಂತೆ ತಂದು ಬಾಗಿಲಲ್ಲೇ ಹಾಕಿದಳು.

"ತಿನ್ನಮ್ಮ... ಈಗ್ಲೇ ಬಂದೆ" ಎಂದು ಹೇಳಿ, ಒಳ ಬಂದು ಒಂದು ಬಕೆಟ್ಟಿನಲ್ಲಿ ಬೂಸ, ಹಿಂಡಿ ಎಲ್ಲಾ ಕಲಸಿ ತಂದಿಟ್ಟಳು. ಮೂರು ದಿನದಿಂದ ಉಪವಾಸವಿದ್ದ ಲಕ್ಷ್ಮಿ ಮೂರೇ ನಿಮಿಷದಲ್ಲಿ ಬರಿದು ಮಾಡಿತು. ಇದನ್ನು ನೋಡಿ ತೃಪ್ತಿ ಯಾದವಳಂತೆ ಕಾಮೇಶ್ವರಿ ನಿಂತಿದ್ದಳು. "ಇನ್ನು ನಾನು ಬರ್ತೀನೆ" ಎಂದು ಪೆರಿಯಸ್ವಾಮಿ ಹಗ್ಗ ಹಿಡಿದುಕೊಂಡು ಹೊರಡಲು...

ಹೆಜ್ಜೆ ಇಡದೆ ಚಂಡಿ ಮಾಡುತ್ತಿದ್ದ ಲಕ್ಷ್ಮಿ ಯನ್ನು ಅವರು ಎಳೆದಾಗ, ಎಳೆತವನ್ನು ತಾಳದೆ ತನಗೇ ಕತ್ತು ನೋಯುತ್ತಿರುವಂತೆ ಕಾಮೇಶ್ವರಿ ದುಃಖಿಸಿದಳು.

ಹಸು ಬಂದು ಹೋದಂದಿನಿಂದ ಅವಳ ದುಃಖ ಜಾಸ್ತಿಯಾಯಿತು. ಅಡಿಗೆ ಮಾಡುವಾಗ, ಸ್ನಾನ ಮಾಡುವಾಗ, ಮಲಗಿರುವಾಗಲೆಲ್ಲಾ ಅಂಬಾ... ಅಂಬಾ... ಎನ್ನುವ ಧ್ವನಿ ಕೇಳಿ ಬರುತ್ತಿರು- ವಂತಾಗಲು...

"ಇದೋ...ಬಂದೆ...ಲಕ್ಷ್ಮೀ..." ಎಂದು ಎದ್ದು ಓಡಿ ಹಿತ್ತಲ ಬಾಗಿಲನ್ನು ತೆಗೆದು ನೋಡಿ, ಕಾಣದೆ ಬೇಸರದಿಂದ ಒಳ ಬರುವಳು.

ದುಃಖಗೊಂಡ ಕಾಮೇಶ್ವರಿ ಒಂದು ದಿನ ಮೂರು ಗಂಟೆಯ ವೇಳೆಗೆ ಜನನಿಗೆ ಇಷ್ಟವಾದ ಓಂಪುಡಿ, ಕಾಫಿಮಾಡಿ ಅವಳ ನಿರೀಕ್ಷಣೆಯಲ್ಲಿ ಬಾಗಿಲ ಬಳಿ ಬಂದು ಮತ್ತೆ ವರಾಂಡದ ಕುರ್ಚಿ ಯಲ್ಲಿ ಕುಳಿತಳು.

ಸಂಜೆ ೬ ಗಂ. ೧೦ ನಿಮಿಷ...

'ಜನನಿ ಇನ್ನೂ ಏಕೆ ಬರಲಿಲ್ಲ? ಹೀಗೆ ತಡ- ವಾಗಿ ಬಂದಾಗಲೆಲ್ಲಾ ಏನೋ ನೆಪ ಹೇಳ್ತಾಳಲ್ಲ, ಕಾಲೇಜ್‌ನಲ್ಲಿ ಏನಾದ್ರೂ ಮೀಟಿಂಗ್ ಇರ- ಬಹುದೆ!? ಅಥವಾ ಫ್ರೆಂಡ್ಸ್ ಜತೆ ಸಿನಿಮಾ, ಮಾರ್ಕೆಟ್ ಅಂತ ಹೋಗಿರಬಹುದೆ? ಇನ್ನೂ ಸ್ವಲ್ಪ ಹೊತ್ತು ನೋಡೋಣ' ಎಂದು ಯೋಚಿಸುತ್ತಿದ್ದಳು.

ಅಡಿಗೆ ಮನೆಗೆ ಹೋಗಿ ದೀಪ ಹತ್ತಿಸಿ, ತಾನು ಕಾಫಿ ಬೆರೆಸಿ ಕುಡಿದು ವರಾಂಡಕ್ಕೆ ಬಂದಳು. ಗೇಟ್ ಬಳಿ ಬಂದು ರಸ್ತೆಯಂಚಿನವರೆಗೂ ಕಣ್ಹಾಯಿಸಿದಳು. ಮಗಳ ಸುಳಿವಿಲ್ಲ.

ಗಂಟೆ ಏಳಾಗುತ್ತಿದ್ದಂತೆ ಹೆದರಿಕೆ ಹೆಚ್ಚಾಗಿ ಹೃದಯದ ಬಡಿತ ಜಾಸ್ತಿಯಾಯಿತು. ಏಳೂ ಕಾಲು ಏಳೂವರೆ, ಎಂಟರ ವರೆಗೂ ಹೊರ- ಗಡೆಯೇ ನಿಂತಿದ್ದಳು. ಅಂಗಡಿ ಮುಚ್ಚಿಕೊಂಡು ಮನೆಗೆ ಬಂದ ಗಂಡನೊಂದಿಗೆ, "ಏನ್ರಿ...ಜನನಿ ಇನ್ನೂ ಬಂದಿಲ್ಲ..." ಎಂದು ಗದ್ಗದಿತಳಾದಳು.

ಅವನೂ ಆಶ್ಚರ್ಯದಿಂದ ಹೆಂಡತಿಯತ್ತ ನೋಡಿ "ಮನೇಗೆ ಬರಲಿಲ್ಲಾಂದ್ರೆ... ಕಾಲೇಜಿಂದ್ಲೇ ಬರಲಿಲ್ಲವೇ? ಇಲ್ಲ ಬಂದು ಮತ್ತೆ ಹೋಗಿ- ದಾಳೋ?"

"ಕಾಲೇಜ್‌ನಿಂದಾನೇ ಬಂದಿಲ್ಲಾರೀ...!"

"ಏನೇ... ಬರಲಿಲ್ಲಾಂತ ೮.೩೦ ರ ವರೆಗೂ ಸುಮ್ಮನೇ ಇದ್ದೀಯಲ್ಲಾ... ನಿನಗೆ ಬುದ್ಧಿ ಇದೆಯಾ? ಪಕ್ಕದ ರಸ್ತೆಯಲ್ಲಿ ಅವಳ ಜತೆ ಓತಾ

ಇರೋ ಒಬ್ಬಳು ಹುಡುಗಿ ಇದಾಳಲ್ಲ... ಅವಳ ಹೆಸರೇನು? ನಿತ್ಯ ಅಲ್ಲವೇ...ವಿದ್ಯಾ...ಯಾರೋ ಅವನನ್ನು ಕೇಳಿಕೊಂಡು ಬರಬಾರದಿತ್ತೆ? ಇಲ್ಲದಿದ್ದರೆ ಅಂಗಡಿಗಾದ್ರೂ ಬಂದು ನನಗೆ ಹೇಳಬಾರದಿತ್ತೆ?"

ಆ ಹೆಂಗಸು ಅಳಲಾರಂಭಿಸಿದಳು. "ನಾನು ಎಂದು ತಾನೆ ಹೀಗೆಲ್ಲಾ ಹೊರಗೆ ಹೋಗಿದೇನೆ? ನಿಮ್ಮ ಅಂಗಡಿಗೆ ತಾನೆ ಎಂದು ಬಂದಿದೇನೆ?"

"ಯಾವ ಸಮಯದಲ್ಲಿ ಏನು ಮಾಡಬೇಕೆಂದು ತಿಳಿಯದ ನೀನು ಅದ್ಯಾವ ಹೆಂಗಸು? ಸರಿ, ಬಾಗಿಲು ಹಾಕ್ಕೋ. ನಾನು ಆ ಹುಡುಗಿ ಮನೇಗೆ ಹೋಗಿ ವಿಚಾರಿಸಿಕೊಂಡು ಬರ್ತೀನಿ."

ಬಾಗಿಲು ಹಾಕಿ ಚಿಲುಕ ಸಿಕ್ಕಿಸಿ, ಕಾಮೇಶ್ವರಿ ದೇವರಿಗೆ ದೀಪ ಹಚ್ಚಿ ಪ್ರಾರ್ಥಿಸಿಕೊಂಡಾಗ, ಕಂದಸ್ವಾಮಿ ಅಲ್ಲಿ ವಿದ್ಯಾಳನ್ನು ವಿಚಾರಿಸುತ್ತಿದ್ದರು.

"ಏನಮ್ಮಾ ನೀನು ಬಂದ್‌ಬಿಟ್ಟೆ, ನಮ್ಮ ಜನನಿ ಇನ್ನೂ ಬರಲಿಲ್ಲವಲ್ಲ?"

"ಜನನಿ ಇವತ್ತು ಕಾಲೇಜ್‌ಗೆ ಬರಲಿಲ್ಲ ಮಾಮಾ..."

"ಕಾಲೇಜ್‌ಗೆ ಬರಲಿಲ್ಲವೇ? ಏನಮ್ಮ ಇದು, ಬೆಳಿಗ್ಗೆ ನಾನು ಅಂಗಡಿಗೆ ಹೋಗುವ ಮೊದಲೇ ಹೊರಟು ಹೋದಳಲ್ಲಮ್ಮಾ..."

ಆ ಹುಡುಗಿ ನಿಧಾನವಾಗಿ ಎಲ್ಲ ನಿಜಾಂಶವನ್ನು ಹೇಳಿದಳು. "ಜನನಿ ಅರ್ಧ ಕಾಲೇಜ್‌ಗೆ ಬರೋದೇ ಇಲ್ಲ. ಬಂದರೂ ಒಂದೆರಡು ಪೀರಿಯಡ್ಸ್ ಇದ್ದು ಹೊರಟೇ ಹೋಗುತ್ತಾಳೆ. ಸ್ಕೂಟರ್‌ನಲ್ಲಿ ಒಬ್ಬ ಹುಡುಗನ ಜತೆ ಮಹಾಬಲಿಪುರಂ, ಗೋಲ್ಡನ್ ಬೀಚ್, ಪಿಚ್ಚರ್ ಅಲ್ಲಿಗೆ-ಇಲ್ಲಿಗೇಂತ ಹೋಗ್ತಾನೇ ಇರ್ತಾಳೆ, ಇವತ್ತೂ ಅವನ ಜತೆ ಹೋಗಿರಬೇಕು."

ಹಿಂದಿರುಗುವಾಗ ಕಂದಸ್ವಾಮಿಯ ಹೆಜ್ಜೆ ಭಾರವಾಗಿತ್ತು. ತೂರಾಡುವಂತಾಯಿತ್ತು. ಮನೆಗೆ ಬಂದು ಹೆಂಡತಿಗೆ ವಿಷಯ ಹೇಳಿ ತಲೆ ತಲೆ ಚಚ್ಚಿಕೊಂಡು ಗೋಳಾಡಿದ. ಕಾಮೇಶ್ವರಿ ಏನೂ ತೋಚದಂತಾಗಿ ಕಲ್ಲಾಗಿ ನಿಂತಳು. ಪಾಪ ಕಂದಸ್ವಾಮಿ ನಡಗುತ್ತಿದ್ದ.

"ಹೆಣ್ಣೇನೇ... ಅದು, ನಮ್ಮ ಮಾನ-ಮರ್ಯಾದೆ ಕುಟುಂಬ ಗೌರವ ಎಲ್ಲ ಗಾಳಿಗೆ ತೂರಿಬಿಟ್ಟು ಯಾವನ ಜತೆಯಲ್ಲೋ ಸುತ್ತತಾ ಇದೆಯಲ್ಲಾ. ಇದಕ್ಕೆ ಬದಲು ಒಳ್ಳೆಯ ಜಾಗದಲ್ಲಿ ಮದುವೆ ಮಾಡಿಸಿಬಿಡಬೇಕೆಂದು ನಾನು ಹಗಲೂ ರಾತ್ರಿ ಕನಸು ಕಟ್ತಾನೇ ಇದೇನೇ. ಇವಳು ಯಾರ ಜತೇಲೋ ಹೊರಟು ಹೋದಳಲ್ಲ."

ಈಗ ಗಂಡನ ಮಾತು ಕೇಳಿ ಕಾಮೇಶ್ವರಿ ಪರಿತಪಿಸಿದಳು.

"ಹಾಗೆ ಹೇಳಬೇಡಿ, ಓಡಿ ಹೋದಳೂಂತ ಹೇಳಬೇಡಿ. ನನ್ನ ಮಗಳು ಹಾಗೆಲ್ಲ ಮಾಡೊಲ್ಲ."

"ಹೌದು ಮನೆ ಬಿಟ್ಟು, ಒಂದು ಮೆಟ್ಟಲು ಇಳೀದೆ, ನೀನು ಈ ರೀತಿ ನಂಬಿಕೆ ಇಟ್ಟಿದ್ದೀಯಾ ನೋಡು. ಆ ನಂಬಿಕೆಯೇ ಅವಳನ್ನು ಕೆಡಿಸಿದ್ದು, ಆ ನಂಬಿಕೆಯ ಧೈರ್ಯದಿಂದಲೇ ಅವಳು ಇಂಥ ಕೆಲಸ ಮಾಡಿದಾಳೆ."

ಅವರ ಹೃದಯದಲ್ಲಿ ಅಂಟಿಕೊಂಡಿದ್ದ ಅಂಜಿಕೆ ರಾತ್ರಿಯೆಲ್ಲಾ ನಿದ್ದೆಗೊಡದೆ ಕಳೆಯಿತು. ಮರು ದಿನವೂ ಅಂಗಡಿ ಬಾಗಿಲು ತೆಗೆಯದೇ, ಒಳಗೇ ಕೂಡಿಹಾಕಿದವರಂತೆ ಇದ್ದರು. ಊಟ ಹಿಡಿಸದೆ, ನಿದ್ದೆಯಿಲ್ಲದೆ, ಏನು ಮಾಡಲೂ ತೋಚದೆ ಮೂಲೆಯಲ್ಲಿ ಮುದುರಿ ಕೂತಿದ್ದರು.

"ಏನ್ರೀ ... ಪೋಲೀಸ್ ಕಂಪ್ಲೇಂಟಾದ್ರೂ ಕೊಡೋಣವೇ..." ಎಂದು ದೀನ ಸ್ವರದಲ್ಲಿ ಅವಳು ಗೊಣಗಿದಳು.

"ಹೌದು...ಹೋಗೇ! ಹೆಣ್ಣನ್ನು ಸಾಕುವ ತಾಕತ್ತಿಲ್ಲ. ಹೇಳೋಕೆ ಬಂದಳು!"

ಮೂರನೆಯ ದಿನ ಬೆಳಿಗ್ಗೆ ಅವರ ಹೆಸರಿಗೆ ಒಂದು ಪತ್ರ ಬಂದಿತು. ಜನನಿಯೇ ಬರೆದಿದ್ದಳು:

'ಪ್ರೀತಿಯ ತಂದೆ-ತಾಯಿಗಳಿಗೆ...

'ನನ್ನನ್ನು ಕಾಣದೆ ನೀವು ಹೆದರುತ್ತಿರಬಹುದು. ನಿಮಗೆ ಇದರ ಹೊರತು ಬೇರೆ ದಾರಿಯಿಲ್ಲ. ನಾನು ಒಬ್ಬನನ್ನು ಮನಸಾರೆ ಇಷ್ಟಪಟ್ಟೆ. ಅವನೂ ನನ್ನನ್ನು ಇಷ್ಟಪಟ್ಟ. ನಾವು ಮದುವೆಯಾಗಲು ನಿಶ್ಚಯಿಸಿದೆವು. ಅವನು ನಮ್ಮ ಜಾತಿಯಲ್ಲ, ಕುಲವಲ್ಲ. ಆದ್ದರಿಂದ ಇಬ್ಬರ ಮನೆಯಲ್ಲೂ ಸಮ್ಮತಿಸುವುದಿಲ್ಲವೆಂದೇ ಮನೆ ಬಿಟ್ಟು ಬಂದುಬಿಟ್ಟೆವು.

'ಇಂದು ಬೆಳಿಗ್ಗೆ ಗಣಪತಿ ದೇವಸ್ಥಾನದಲ್ಲಿ ಮದುವೆ ಮುಗಿಸಿಕೊಂಡು, ಬೇರೆ ಕಡೆ ಸಂಸಾರ ಹೂಡಲು ಹೋಗುತ್ತಿರುವಾಗ ಇದನ್ನು ಬರೆಯುತ್ತಿದ್ದೇನೆ. ಆ ಊರಿನಲ್ಲಿ ಇಬ್ಬರೂ ಕೆಲಸಕ್ಕೆ ಸೇರಿಕೊಂಡು ಬಿಡ್ತೇವೆ. ಕೈಗೆ ಬರುವ ಹಣದಿಂದ ನೆಮ್ಮದಿಯಾಗಿ ಜೀವನ ನಡೆಸ್ತೇವೆ. ಆದ್ದರಿಂದ ನನ್ನನ್ನು ಕ್ಷಮಿಸಿಬಿಡಿ. ಇದರ ಹೊರತು ಬೇರೆ ದಾರಿಯೇ ಇಲ್ಲ. ದಯವಿಟ್ಟು ಕ್ಷಮಿಸಿಬಿಡಿ,

ಇಂತೀ,
ಜನನಿ'

ಪತ್ರ ಓದಿದ ನಂತರ ಹೆಂಡತಿಗೆ ಕೊಟ್ಟರು. ಒಂದು ಬಾರಿ, ಎರಡು ಬಾರಿ, ಮೂರು ಬಾರಿ ಎಂದು ಓದಿದ ಮೇಲೆ ಪತ್ರ ಕೈಜಾರಿ ಬಿತ್ತು. ಅದು ಗಾಳಿಯಲ್ಲಿ ಹಾರಿ ಮೂಲೆಯಲ್ಲಿ ಕಂಡಾಗ, ಮನೆಯ ಬಾಗಿಲ ಬಳಿ ಲಕ್ಷ್ಮಿ 'ಅಮ್ಮಾ...!' ಎಂದು ದೀನ ಸ್ವರದಲ್ಲಿ ಕೂಗಿದ್ದು ಕಾಮೇಶ್ವರಿಗೆ ಭ್ರಮೆಯೆನಿಸಿತು. ಆದರೆ ಲಕ್ಷ್ಮಿ ಎಡಬಿಡದೆ ಕೂಗುತ್ತಾ ಗೇಟ್ ತಳ್ಳಿಕೊಂಡು ಒಳಗೆ ಓಡಿ ಬಂತು. ತೆರೆದ ಬಾಗಿಲಿಂದ ಕಣ್ಣಿಗೆ ಬೀಳಲು ಲಕ್ಷ್ಮೀಯಂತೆಯೇ ಅವಳೂ ಪರದಾಡುತ್ತಾ ಎದ್ದು ಓಡಿದಳು. ಲಕ್ಷ್ಮಿಯ ಮುಖವನ್ನು ಆಲಂಗಿಸಿಕೊಳ್ಳಲು, ಹಿಂದಿನಿಂದ ಓಡಿ ಬಂದ ಪೆರಿಯಸ್ವಾಮಿ ನಿಟ್ಟುಸಿರು ಬಿಟ್ಟು, "ಇದರದು ದೊಡ್ಡ ಗೋಳಾಗಿ ಹೋಯ್ತು. ಮತ್ತೆ ಹಗ್ಗ ಕಿತ್ತುಕೊಂಡು ಓಡಿ ಬಂದುಬಿಟ್ಟಿತು. ಅಪತ್ತಾ ನೀನು ಹಾಕಿದ ಹುಲ್ಲು, ಹಿಂಡಿ, ಕುಡಿಯಲು ಕೊಟ್ಟ ನೀರು ಹೊರತಾಗಿ ನಮ್ಮ ಮನೆಯಲ್ಲಿ ಏನನ್ನು ಮೂಸಿಲ್ಲ. ಒಂದು ಹಸುವಿಗೆ ಇಷ್ಟು ಹಟವೇ? ರಾತ್ರಿ-ಹಗಲೂ...ಮ್ಮಾ...ಮ್ಮಾ... ಎಂದು ಅರಚುತ್ತಾ ಪ್ರಾಣ ಬಿಡುವಂತಿದೆ. ಆ ಪಾಪ ನನಗೇಕಪ್ಪ ಕಂದಸ್ವಾಮಿ?" ಎಂದು ಮರುಗಿದರು.

ಅದನ್ನು ಕೇಳಿ ಕಾಮೇಶ್ವರಿಯ ದುಃಖ ಮತ್ತಷ್ಟು ಉಮ್ಮಳಿಸಿ ಬಂತು. ಮೌನವಾಗಿ ಒಳಗೆ ಹೋದ ಕಂದಸ್ವಾಮಿ ವಜ್ರದ ಓಲೆಯ ಪೆಟ್ಟಿಗೆಯನ್ನು ತಂದು ಅಣ್ಣನ ಎದುರಿಗೆ ನೀಡಿದನು.

"ಏನಪ್ಪಾ...ಇದು...?"

"ಅತ್ತಿಗೆಯ ಹತ್ತಿರ ಕೊಟ್ಟುಬಿಡಿ ಅಣ್ಣಾ... ಇನ್ನು ಮುಂದೆ ಇದರ ಅವಶ್ಯಕತೆ ಇಲ್ಲ."

"ನೀನು ಏನ್ ಹೇಳ್ತಾ ಇದೀಯೆ?...?"

"ಅಣ್ಣಾ...ಈಗ ನನ್ನನ್ನು ಏನೂ ಕೇಳಬೇಡಿ. ತಿಳಿದಾಗ ನಿಮಗೂ ಅರ್ಥವಾಗುತ್ತೆ. ದಯವಿಟ್ಟು ಓಲೆಯನ್ನು ತೆಗೆದುಕೊಂಡು ಹೋಗಿ."

ಪೆಟ್ಟಿಗೆಯನ್ನು ತೆಗೆದುಕೊಂಡು ಅವರು ಹೊರಗೆ ಹೋದ ಮೇಲೆ ಕಾಮೇಶ್ವರಿ, ಮಾತನಾಡದ ನಾಲ್ಕು ಕಾಲಿನ ಪ್ರಾಣಿ ಲಕ್ಷ್ಮೀಗೂ ಹೊಟ್ಟೆಯಲ್ಲಿ ಹುಟ್ಟಿ ೧೮ ವರ್ಷ ಬೆಳೆದು, ಪ್ರಪಂಚಜ್ಞಾನ ತಿಳಿದ ಜನನಿಗೂ ಮಧ್ಯೆ ಇದ್ದ ಬಹಳ ಮುಖ್ಯವಾದ ಆ ಒಂದು ಚಿಕ್ಕ ವ್ಯತ್ಯಾಸವನ್ನು ತಿಳಿದು ಗಟ್ಟಿಯಾಗಿ ಅಳಲಾರಂಭಿಸಿದಳು.

'ನೈತಿಕ ಜವಾಬ್ದಾರಿ! ಅನೈತಿಕ ಜವಾಬ್ದಾರಿ ಅಂತನೂ ಇರ್ತದೇನು? ಹೌದು. ಇರ್ತದ. ಅಂದ್ರ ವ್ಯವಹಾರ ಅನೈತಿಕ ಆಗಿರಬಹುದು, ಆದ್ರ ಜವಾಬ್ದಾರಿ ವಹಿಸಿಕೊಳ್ಳೋದು ನೈತಿಕ ಕರ್ತವ್ಯ ಆಗಿರತ್ತದ "ಗುಂಡಣ್ಣನ ಬಾಯಿಂದ ಬಂತು ಅಣಿಮುತ್ತು.

# ನೈತಿಕ ಜವಾಬ್ದಾರಿ

**ಅನಂತ ಕಲ್ಲೋಳ**

ಯಾವ ಧೂಮಕೇತು ಪ್ರಕಟ ಆಗ್ಯದಕ್ಕೋ ಏನೋ ಹಾಲೀ ಮುಖ್ಯಮಂತ್ರಿ-ಗಳೆಲ್ಲ ಸಾಲು ಸಾಲಾಗಿ ರಾಜೀನಾಮೆ ಕೊಡಲಿಕ್ಕ ಹತ್ಯಾರ! ಧೂಮಕೇತು ಕಾಣಿಸಿತು ಅಂದ್ರ ಆಗಬಾರದ್ದೆಲ್ಲಾ ಆಗೋದು, ನಡೆಯಬಾರದ್ದೆಲ್ಲ ನಡೆಯೋದು ಖರೇ ಅಪ್ಪ!" ಗುಮ್ಮ ಅಂತ ದಂಗು ಬಡಿದು ಕುಳಿತಿದ್ದ ಗುಂಡಣ್ಣಗೆ ನಾನಂದೆ. ಗುಂಡ ಅದಕ್ಕ ಪ್ರತಿಕ್ರಿಯೆ ವ್ಯಕ್ತಪಡಿಸಲಿಲ್ಲ. ಪೆಟ್ಟು ಬಿದ್ದ ಗುಂಡಕಲ್ಲಿನ್ಹಾಂಗ ಗುಂಡ ಗಪ್ಪಂತ ಬೆಪ್ಪನ್ಹಾಂಗ ಕುಕ್ಕರಬಡಿದಿದ್ದ.

ನನಗೆ ಆಗದೀ ಖರೇ ಅನಿಸಿತು; ಧೂಮಕೇತು ಕಂಡರ ಇಂಥಾದ್ದೆಲ್ಲ ಅನಾಹುತ ಆಗೋದs ಅಂತ! ಈಗ ನೋಡ್ರೆಲ್ಲ, ಯಾವತ್ತೂ ವಟಾವಟಾ ಹಚ್ಚಿದ ಗುಂಡಣ್ಣ ಬಾಯಿ ಸತ್ತಾವ-ರಾಂಗ ಕುಂತಾನ. ಇಂಥ ಸ್ಥಿತಿ ನೋಡಾಣ, ನಡೀಕೊಳ್ಳೋಣ? ಅಲ್ರಿ. ನಾಳಿನ ದಿನ ನಾಳಿಗೆ ಬಂಡ್ಯಾಗಿನ ನಿರ್ವಾಹಕ ಚಿಲ್ರೆ ಪಲ್ರೆ ಅಂತ ಬಾಯಿ ಮಾಡೋದನ್ನ ಬಿಟ್ಟು 'ಸಾಹೇಬರೇ, ತಾವು ಎಲ್ಲಿಗೆ ಹೋಗುವ್ರಿ?' ಎಂದು ಸೌಜನ್ಯ ದಿಂದ ಕೇಳಿ ಸರಿಯಾಗಿ ಚೀಟಿ, ಚಿಲ್ಲರೆ ಕೊಟ್ಟು ಮುಗುಳು ನಕ್ಕರ ನಿಮ್ಮ ಎದೀ ಧಸಕ್ಕ ಅನ್ನಲಿಕ್ಕಿಲ್ಲ? ಸರತಿಗೊಮ್ಮೆ ರ್‍ಯಾಸ್ಕಲ್, ಸ್ಟುಪಿಡ್ ಎನ್ನದೇ ಮಾತನಾಡದ ನಿಮ್ಮ ಹಿರಿ ಅಧಿಕಾರಿ, 'ಓ ಹೋ ಹೋ ದೇಶಪಾಂಡೆಯವರೇ ಬನ್ನಿರಿ, ಕುಳಿತುಕೊಳ್ಳಿರಿ' ಎಂದು ಪ್ರೀತಿಯಿಂದ ಮಾತನಾಡಿದ್ರ ನಿಮ್ಮ ಕಣ್ಣು ಪೆಕರುಗಾಗಲಿಕ್ಕಿಲ್ಲವೇ? ಹೆಚ್ಚು ಕಡಿಮೆ ಹಾಂಗs ಆಗ್ಯದ; ನಮ್ಮ ಗುಂಡಣ್ಣ ಗಪ್ ಚುಪ್ ಕೂತದ್ದನ್ನು ನೋಡಿ!

ಗುಂಡಣ್ಣ ಏನಾರೆ ಮೌನ ವ್ರತ ಸುರು ಮಾಡ್ಯಾನೋ ಹ್ಯಾಂಗ ಎಂದು ವಿಚಾರದಲ್ಲಿ ಬಿದ್ದೆ. ಎಂಥಾ ಸಣ್ಣಾಪುಟ್ಟಾ ಘಟನೆಗಳು ಸಂಭವಿಸಿದರೂ ತನ್ನ ಟೀಕೆ ಟಿಪ್ಪಣಿಗಳನ್ನು ನನ್ನ ಕಿವಿಯೊಳಗ ತೈಲಧಾರೆಯಂತೆ ಅಖಂಡ ವಾಗಿ, ಅವಿರತವಾಗಿ, ಅನಪೇಕ್ಷಿತವಾಗಿ ಅನಿರೀಕ್ಷಿತವಾಗಿ ಅಷ್ಟೇ ಏಕೆ ಅಸಹ್ಯವಾಗಿ ಸುರುವುವ ಆಸಾಮಿ ಗುಂಡಣ್ಣ. ಆದ್ರ ಇಂದು ಇಷ್ಟೊಂದು ಗಂಭೀರ ಸುದ್ದಿಗಳು ಪ್ರಕಟ ಆಗಿದ್ದರೂ ತನ್ನ ಪ್ರತಿಕ್ರಿಯಾ ಪ್ರಕಟಿಸದೇ ಕಿವಿ ಯಲ್ಲಿ ಬೆರಳು ತೂರಿ ತಿರುವತ್ತ ಕುಳಿತಿದ್ದ. ನಾನು ಬೆಕ್ಕಸ ಬೆರಗಾಗಿ ಆತನನ್ನು ನೋಡ ತೊಡಗಿದೆ. ಊ್ಞ ಹ್ಞೂ, ಆತನ ಮೊಗದಲ್ಲಿ ಯಾವುದೇ ಭಾವ ಗೋಚರವಾಗಲಿಲ್ಲ. ಭಾವಾ-ತೀತ ಧ್ಯಾನದಲ್ಲಿ ಮುಳುಗಿದಂತಿತ್ತು ಗುಂಡಣ್ಣ! ನಾನೂ ಪಟ್ಟು ಬಿಡದೆ ಆತನ ಮುಖ ಭಾವದಲ್ಲಿಯೇ ನೋಟ ನೆಟ್ಟು ಕುಳಿತೆ.

ಕಿವಿಯಲ್ಲಿ ತುರುಕಿದ ಬೆರಳನ್ನು ಗುಂಡಣ್ಣ ಹೊರ ತೆಗೆಯುತ್ತಿದ್ದಂತೆ ನನಗನಿಸಿತು ಆತ ಬಾಯಿ ಬಿಡಬಹುದೆಂದು. ನನ್ನ ಅನಿಸಿಕೆ ಹುಸಿ ಹೋಯಿತು; ಗುಂಡಣ್ಣನ ಕಿರುಬೆರಳು 'ಕರ್ಣ' ಭೇಟಿಯ ನಂತರ 'ನಾಸಿಕ' ಪ್ರವೇ-ಶಿಸಿತು! ಈ ಕಾರ್ಯಕ್ರಮಕ್ಕೆ ಏನಿಲ್ಲೆಂದರೂ ಮತ್ತೆ ಹತ್ತು ನಿಮಿಷ ಹತ್ತುತ್ತವೆ ಗುಂಡಣ್ಣನಿಗೆ. ನಾನೂ ಸೋಲಲಿಲ್ಲ; ಆವನ ಕಾಯಕವನ್ನು ನಿರುಕಿಸುತ್ತ ಆತನ ಮುಖಚರ್ಯೆಯಲ್ಲಿಯೇ ಕಣ್ಣು ಕೀಲಿಸಿದೆ. ಆತನ ಮೊಗದಲ್ಲಿ ಅಗಾಧ ಬ್ರಹ್ಮಾನಂದದ ನಿಗೂಢ ಮೌನ ತಾನೇ ತಾನಾಗಿ ವ್ಯಾಪಿಸಿತ್ತು!

ಕಿವಿ, ಮೂಗು ಹೊರಳಿಗಳನ್ನು ಶುಚೀಕರಿಸಿದ ಕಿರುಬೆರಳು ಹೊರಬೀಳುತ್ತಿದ್ದಂತೇ ನಾನು

ನಿಟ್ಟುಸಿರು ಬಿಟ್ಟೆ. ಮರುಕ್ಷಣವೇ ಗಾಬರಿಯಾಗಿ ಗಮನಿಸಿದೆ: ಗುಂಡಣ್ಣನ ಕಿರುಬೆರಳು ಮತ್ತಾವ ಕಾಯಕಕ್ಕೆ ಮುಂದಾಯಿತು ಎಂದು! ಗಡಿಬಿಡಿಸಿ ಆತನ ಬಾಯಿ ಕಡೆಗೆ ನೋಟ ಹರಿಸಿದಾಗ ಆತನ ತುಟಿ ಬಿರಿದಂತೆ ಕಂಡಿತು. ಆಳವಾದ ಗವಿಯಿಂದ ಧನಿ ಬಂದಂತೆ ಅನಿಸಿತು.

"ನೈತಿಕ ಜವಾಬುದಾರಿ ಅಂದ್ರೇನು?"

ನಾನು ಅತ್ತ ಇತ್ತ ಕಕ್ಕಾವಿಕ್ಕಿಯಾಗಿ ನೋಡಿದೆ. ಈ ಪ್ರಶ್ನೆಯನ್ನು ಎಸೆದವರು ಬೇರೆ ಯಾರೂ ಅಲ್ಲ; ಗುಂಡಣ್ಣನೇ ಎಂಬುದು ಖಾತ್ರಿಯಾಯಿತು. ಆದರೂ ಖಚಿತಪಡಿಸಿಕೊಳ್ಳಬೇಕೆಂದು ಗುಂಡನನ್ನು ನೋಡಿದೆ. ಹೌದು ಆತನ ಬಾಯಲ್ಲಿ ಕಿರುಬೆರಳೇನೂ ಇರಲಿಲ್ಲ; ಅಂದ ಮೇಲೆ ಅವನೇ ಮಾತನಾಡಿರಬೇಕು!

"ನೈತಿಕ ಜವಾಬುದಾರಿ ಅಂದ್ರ moral responsibility!" ಆನಂದಿತನಾಗಿ ನಾನಂದೆ. ಕೊನೆಗೂ ಗುಂಡಣ್ಣ ಬಾಯಿ ಬಿಚ್ಚಿದನಲ್ಲ ಎಂದು ಸಂತಸವಾಗಿತ್ತು. ಕಿರುಗಣ್ಣಿನಿಂದ ಆತನ ಕಿರುಬೆರಳಿನ ಕಡೆಗೆ ನೋಡಿದೆ. ಅದು ಆತ ಕುಳಿತ ಜಮಖಾನೆಯನ್ನು ತೀಡುವುದರಲ್ಲಿ ತೊಡಗಿತ್ತು.

"Immoral responsibility ಅಂತ ಇರ್ತದೇನು?" ಗುಂಡಣ್ಣನ ಪಾಟೀ ಸವಾಲು.

ನಾನು ಗಡಿಬಿಡಿಸಿದೆ. ಜವಾಬುದಾರಿ, ಹೊಣೆಗಾರಿಕೆ, responsibility ಎಂದರೆ ಎಲ್ಲಾನೂ ನೈತಿಕವಾದದ್ದೇ ಇರಬೇಕಲ್ಲ! ಆಕಳ ಗೋಮೂತ್ರ, ಸತ್ತ ಹೆಣ, ಗೇಟ್ ಬಾಗಿಲು ಅಂತ ಅಧಾಂಗ ನೈತಿಕ ಜವಾಬುದಾರಿ ಎಂಬ ಪದಪ್ರಯೋಗ ಅನವಶ್ಯಕ ದ್ವಿರುಕ್ತಿ ಇರಬಹುದೇ ಎಂದು ಸಂಶಯ ಬಂದಿತು. ಇದೇ ಯೋಚನೆಯಲ್ಲಿದ್ದಾಗ ಗೋಡೆಯ ಮೇಲಿನ ರವಿವರ್ಮರ ಸುಪ್ರಸಿದ್ಧ 'ವಿಶ್ವಾಮಿತ್ರ–ಮೇನಕೆ'ಯರ ಚಿತ್ರ ಕಂಡಿತು.

"ಓಹೋ, ಅನೈತಿಕ ಜವಾಬುದಾರಿ ಎಂಬುದು ಸಹ ಇರ್ತದಲ್ಲ, ನೋಡು ಆ ಫೋಟೋ" ಆ ಪಟದ ಕಡೆಗೆ ಗುಂಡಣ್ಣನ ಗಮನ ಹರಿಸಿದೆ.

ಗುಂಡಣ್ಣ ಒಪ್ಪಲಿಲ್ಲ.

"ಮೇನಕೆಯ ಕೂಸಿನ ಯೋಗಕ್ಷೇಮ ವಹಿಸೋದು ವಿಶ್ವಾಮಿತ್ರನ ಜವಾಬುದಾರಿ, ಪ್ರಚಲಿತ ಭಾಷಾ ಪ್ರಯೋಗದಲ್ಲಿ ಹೇಳಬೇಕೆಂದರ moral responsibility."

"ಅಂದ್ರ ಅವರ ವ್ಯವಹಾರದಾಗ morality ಇತ್ತು ಅಂತ ನಿನ್ನ ಅಂಬೋಣೇನು?" ನಾನು ಕೇಳಿದೆ.

"ನಿನಗ ಅರ್ಥ ಆಗಾಣಿಲ್ಲೋ ತಮ್ಮ" ಗುಂಡಣ್ಣ ಉದ್ಗರಿಸಿದ. ನನಗ ಅತೋನಾತ ಕೋಪ ಬಂತು, ನಾ ಅಂದ್ರ ಹಸಗೂಸು ಅಂತ ತಿಳ್ಕೊಂಡಾನ ಮಗಾ!

"ನನಗ ಅರ್ಥ ಆಗೋ ಹಾಂಗ ಹೇಳೋ" ನಾನು ಗುಡುಗಿದೆ.

"ವ್ಯವಹಾರದಾಗ morality ಇತ್ತು ಅಂತ ನಾ ಎಲ್ಲಿ ಅಂದೆ? ವ್ಯವಹಾರ ಅನೈತಿಕ ಆಗಿರಬಹುದು ಆದ್ರ ಜವಾಬುದಾರಿ ವಹಿಸಿಕೊಳ್ಳೋದು ನೈತಿಕವಾಗಿ ಕರ್ತವ್ಯವಾಗಿತ್ತು ಅಂತ ಅಂದೆ. ತಿಳೀತೇನು?"

ಏನೋ ತಿಳಿಧಾಂಗ ಆತು ಆದ್ರ ಪೂರ್ತಿ ಹೊಳೀಲಿಲ್ಲ. ಹಾಂಗ ಅಂತ ಹೇಳಿದ್ರ ಮತ್ತ ನನ್ನ ಪೂರಾ ಪಡಪ್ಪೋಶಿ ಅಂತ ಅಂದುಕೊಂಡಾನು ಗುಂಡಣ್ಣ ಅಂತ ಸುಮ್ಮನ ಹೂಂಕಾರದ ಗೋಣು ಅಲ್ಲಾಡಿಸಿದೆ. ಗುಂಡಣ್ಣನಿಗೆ ಧರವಸೆ ಇರಲಿಲ್ಲ. ಆತ ತನ್ನ ಕಿರುಬೆರಳು ಎತ್ತಿದ. ನಾನು ಗಾಬರಿಯಾದೆ ಬಲಗೈ ಕಿರುಬೆರಳು ನಿಗುರಿಸಿಕ್ಕೊ–ಸುತ್ತ ಗುಂಡಣ್ಣ ಅಂದ,

"ವ್ಯವಹಾರ ಹೊಲಸು ಇದ್ದೀತು! ಹಾಗಂತ ನ್ಯಾಯಾಲಯ ಹೇಳಿದ ಮ್ಯಾಗ ಜವಾಬುದಾರಿ ತಮ್ಮದು ಅಂತ. ಅಂದ್ರ ರಾಜೀನಾಮೆ ಕೊಡುವ ಜವಾಬುದಾರಿ ತಮ್ಮದು ಎಂದು ದಾರಿ ಹಿಡಿಯೋದು ನೈತಿಕತೆ ಅಂತ ಅನಿಸಿಕೋತದ ಇದೂ ಒಂದು ಹೊಸಾ ಫ್ಯಾಡು... ಹ ಹ್ಹಾ" ಎಂದು ನಗುತ್ತ "ನೀ ಏನಂತಿ?" ಎಂದು ಆ ಕಿರುಬೆರಳ ಕೈ ಮುಂದೆ ಮಾಡಿದ. ಅದನ್ನು ನೋಡುತ್ತ ಕೂಡಲೇ ಅಂದೆ,

"ಹೌದೌದು ಹೊಲಸು ವ್ಯವಹಾರವಾದ್ರೂ ತಮ್ಮದು ಜವಾಬುದಾರಿ ಅಂಬೋದು ನೈತಿಕತೆ" ಗುಂಡಣ್ಣನಿಗೆ ಖುಷಿಯಾಯ್ತು. ಆತ ಪುನಃ ತನ್ನ ಕಿರುಬೆರಳನ್ನು ತನ್ನ ಕಿವಿಯ ಕಡೆಗೋ ಮೂಗಿನ ಕಡೆಗೋ ಒಯ್ಯುತ್ತಿದ್ದಂತೇ ನೋಡಲಾಗದೆ ಪತ್ರಿಕೆಯನ್ನು ಎತ್ತಿಕೊಂಡು ಅಡ್ಡ ಹಿಡಿದೆ. ✡

# ಮಾದಕ ಮದ್ದಿನ ಮಾಟ

ಇದು ಸಂಜೀವಿನ ಆತ್ಮವೃತ್ತಾಂತ. ತನ್ನ ತೊಂದರೆಗಳಿಗೆಲ್ಲ ತಂದೆ-ತಾಯಿಗಳೇ ಕಾರಣವೆಂದಾತನ ಭಾವನೆ. ವಿಷಗಳಿಗೆಯೊಂದರಲ್ಲಿ ಆತ ಮಾದಕ ಮದ್ದಿನ ಚಟಕ್ಕೆ ಬಿದ್ದ... ಮುಂದೇನಾಯಿತೆಂದು ಆತನ ಬಾಯಿಂದಲೇ ಕೇಳಿ...

ಕೆ. ರಾಮಕೃಷ್ಣ ಉಡುಪ

ಆರು ವರ್ಷಗಳ ಹಿಂದೆ, ಮೇ ಮೊದಲ ವಾರದ ಒಂದು ಸಾಯಂಕಾಲ. ಪುಣೆಯ ಶಿವ ಮಂದಿರದೊಳಗಿನ ಒಂದು ಮೂಲೆಯ ಕೋಣೆ ಸೇರಿ ಕಿಟಕಿ ಬಾಗಿಲುಗಳನ್ನೆಲ್ಲ ಮುಚ್ಚಿ ಅಗುಳಿ ಹಾಕಿದೆ. ತಡೆಯಲಾಗದ ಆ ನೋವು ನನ್ನನ್ನು ತಿಂದುಹಾಕಲೆಂದು, ಆ ಕತ್ತಲು ತುಂಬಿದ ನೆಲದ ಮೇಲೊಂದು ಚಾದರ ಹಾಕಿ ಬಿದ್ದುಕೊಂಡೆ.

ಮೊತ್ತಮೊದಲು ನಾನು ಬಹಳವಾಗಿ ಬೆವರಿದೆ. ನಂತರ ನನ್ನ ಎಲ್ಲ ಅಂಗಾಂಗಳಲ್ಲೂ ಮಿತಿ ಮೀರಿದ ನೋವು ತುಂಬಿ ಬರತೊಡಗಿತು. ಹರಿತವಾದ ಕಾದ ಕತ್ತಿಯಿಂದ ನನ್ನ ದೇಹವನ್ನೇ ಕತ್ತರಿಸುತ್ತಿರುವಂಥ ದಾರುಣ ವೇದನೆ ಏರಿಬಂತು: ನನ್ನ ನಾಲಗೆ ಮರಳು ಕಾಗದದಂತಾಯಿತು. ಹೇಗಾದರೂ ಇಲ್ಲಿಂದ ತಪ್ಪಿಸಿಕೊಂಡು ಜೀವನವೇ ಸಾಕೆಂದು ತೋರಿತು. ಆದರೂ ಅಲ್ಲೇ ಬಿದ್ದು ಸಾಯಲು ಹಟ ತೊಟ್ಟೆ.

ಇದು ಆ ಮದ್ದಿನ ಲೋಕದ ಘೋರ ಯಾತನೆಯಿಂದ ಹೊರಬರಲು ನಾನು ನಡೆಸಿದ ಕಟ್ಟಕಡೆಯ ಪ್ರಯತ್ನ.

ಈ ಮಾದಕ ಲೋಕದ ಪರಿಚಯ ನನಗೆ ೧೯೭೭ರ ದೀಪಾವಳಿ ರಜಾ ಸಮಯದಲ್ಲಿ ತಿಳಿಯದೆಯೇ ಆಗಿಹೋಯಿತು. ಆಗ ನಾನು ಮುಂಬಯಿ ಕಾಲೇಜೊಂದರ ಪ್ರಥಮ ಪದವಿ ತರಗತಿಯಲ್ಲಿ ಓದುತ್ತಿದ್ದೆ. ಮಹಾರಾಷ್ಟ್ರದ ಹಳ್ಳಿಯೊಂದರಲ್ಲಿ ವಿದ್ಯಾರ್ಥಿಗಳ ಸಮಾಜಸೇವಾ ಶಿಬಿರ ನಡೆಯುತ್ತಿತ್ತು. ಆದರಲ್ಲಿ ವಿದ್ಯಾರ್ಥಿ ಮಿತ್ರರೊಡನೆ ನಾನೂ ಸೇರಿದ್ದೆ. ಅಲ್ಲಿ ನನಗೆ ಮಿತ್ರ ಎಂಬವನ ಪರಿಚಯವಾಯಿತು. ಆತ ಸಿಗರೇಟ್ ಪೇಪರಿನಲ್ಲಿ ಅರೆಗಪ್ಪು ಸಾಮಗ್ರಿಯನ್ನು ಸುತ್ತಿ ಕಡ್ಡಿ ಗೀರಿ ಸೇದುವುದನ್ನು ಕಂಡೆ. 'ಒಂದು ದಮ್ಮು ಹೊಗೆ ಸೇದಿ ನೋಡು' ಎಂದು ನನ್ನನ್ನಾತ ಆಮಂತ್ರಿಸಿದ. ಒಂದು ಸಲ ಸ್ವಲ್ಪ

(ವಿವಿಧ ಮೂಲಗಳಿಂದ)

ಸೇದಿ ನೋಡಿದೆ. ಒಡನೆಯೇ ಹೊಸ ಹುರುಪಿನ ಆನಂದ ನನ್ನ ದೇಹದೊಳಗೆ ತುಂಬಿ ಹರಿದಂತಾಯಿತು.

"ಇದು ಏನು?" ನಾನು ಕೇಳಿದೆ.

"ಗಾಂಜಾ ಮಾರಾಯಾ! ಮಜಾ ಏರುವುದಲ್ಲವೇ?"

"ನಿಜವಾಗಿಯೂ."

ಶಿಬಿರದಿಂದ ಹಿಂದಿರುಗಿದ ಮೇಲೆ ಪ್ರತಿದಿನ ನಾನು ಗಾಂಜಾ (ಹಶೀಶ್) ಸೇದಲಾರಂಭಿಸಿದೆ. ಮಿತ್ರ ಮತ್ತು ಅವನ ಗೆಳೆಯರು ಒಡನಾಡಿಗಳಾಗಿದ್ದರು. ಆ ಕಾಲದಲ್ಲಿ ಜೀವನ ಆನಂದಮಯವಾಗಿತ್ತು. ಈ ಮಾದಕ ಮದ್ದಿನ ಮಜಾ ಮಾತ್ರವಲ್ಲದೆ, ನನಗೊಬ್ಬ ಗೆಳತಿಯು ದೊರಕಿದಳು. ಅವಳ ಹೆಸರು ಶೋಭಾ. ತೆಳ್ಳಗೆ ಬೆಳ್ಳಗೆ ಇದ್ದಳು. ಉದ್ದವಾದ ಕೂದಲಿನ ಸುಂದರಿ.

ನನ್ನ ಮತ್ತು ಶೋಭಾಳ ಸಂಬಂಧ ನಿಕಟವಾಗುತ್ತ ಬಂದಾಗ, ನಾವು ದೊಡ್ಡ ತೊಂದರೆಗೊಳಗಾದೆವು. ಕಾರಣ—ನನ್ನ ಮತ್ತವಳ ಜಾತಿ ಬೇರೆ ಬೇರೆ. ಶೋಭಾಳ ಹೆತ್ತವರು ನಾನು ಮತ್ತು ಅವಳು ಸಂಧಿಸುವುದನ್ನು ವಿರೋಧಿಸಿದರು. ಶೋಭಾ ನನ್ನನ್ನು ನೋಡಲೇಬಾರದೆಂದು ಅವಳನ್ನು ತಡೆದಿಟ್ಟರು. ಆಗ ಅವಳು—'ಹೇಗಾದರೂ ಓಡಿಹೋಗಿ ಗುಟ್ಟಾಗಿ ಮದುವೆಯಾಗುವ'—ಎಂದು ಸೂಚಿಸಿದಳು. ಆದರೆ ನನ್ನ ಆಸೆ ಡಾಕ್ಟರನಾಗಬೇಕೆಂದು. ಅಂದರೆ, ಇನ್ನೇಳು ವರ್ಷ ಕಲಿತು ಮುಗಿಯಲಿಕ್ಕೆ ಇದೆ. ಈಗಲೇ ಮದುವೆಯಾದರೆ ಆ ಯೋಜನೆ ಕನಸಾಗಿಯೇ ಉಳಿಯಬಹದು. ಶೋಭಾ ಎಷ್ಟು ಬೇಡಿಕೊಂಡರೂ ನಾನು ಮನಸ್ಸನ್ನು ಗಟ್ಟಿ ಮಾಡಿಕೊಂಡಿದ್ದೆ. ಹಾಗಾಗಿ ನಮ್ಮಿಬ್ಬರ ಅಂತಿಮ ವಿದಾಯ ತುಂಬ ದೀರ್ಘವೂ ಕಣ್ಣೀರು ತುಂಬಿದ್ದೂ ಆಗಿತ್ತು.

## ನಿತ್ಯ ಹೊಗೆ ಸೇವೆ

ಈ ನೋವನ್ನು ಇನ್ನೊಬ್ಬರೊಡನೆ ಹಂಚಿಕೊಳ್ಳಬೇಕೆಂದು ಆಸೆಯಾಯಿತು. ಆದರೆ ನನಗಾರೂ ಆಪ್ತ ಮಿತ್ರರಿದ್ದಿಲ್ಲ. ಮನೆಯವರೊಡನೆಯೂ ತನ್ನ ಬೇಸರವನ್ನು ಹೇಳಿಕೊಳ್ಳುವಂತಿಲ್ಲ. ನನ್ನ ತಂದೆ ಶೀಘ್ರಕೋಪಿ, ಹಟವಾದಿ. ನನ್ನ ಮತ್ತು ತಂದೆಯ ವಿಚಾರಗಳಲ್ಲಿ ತುಂಬ ಅಂತರವಿತ್ತು. ಬಹು ಹಿಂದೆ ಒಂದು ಸಲ ನನ್ನ ನ್ನಾತ ಶಾಲೆಯಿಂದ ಕರೆದೊಯ್ಯಲು ಬಂದಿದ್ದಾಗ, ನಾನು ನನ್ನ ಗೆಳೆಯನೊಡನೆ— "ಆತ ನಮ್ಮ ಕೆಲಸದಾಳು" ಎಂದು ಹೇಳಿದ್ದೆ. ಆತ ನಮ್ಮ ತಾಯಿಯ ಮೇಲೆ ಸದಾ ದಬ್ಬಾಳಿಕೆ ನಡೆಸುತ್ತಿದ್ದ. ಅಮ್ಮನಿಗೆ ಸಹ, ತನ್ನ ಇಬ್ಬರು ಮಕ್ಕಳ ಯೋಚನೆ ಅಷ್ಟಾಗಿ ಇದ್ದಿಲ್ಲ. ಸಮಾಜದಲ್ಲಿ ತನ್ನ ದೊಡ್ಡಸ್ತಿಕೆ ತೋರಿಸುವುದರಲ್ಲೇ ಅವಳ ಆಸಕ್ತಿ. ನನ್ನ ತಮ್ಮ ಮುಖೇಶನಿಗೆ ಆಗ ಹದಿನಾಲ್ಕು ವರ್ಷ ವಯಸ್ಸು. ಅವನೊಡನೆ ಮಾತಾಡಿಕೊಂಡಿರಬಹುದಲ್ಲ ಎಂದೊಮ್ಮೆ ಯೋಚನೆ ಬಂತು. ಆದರೆ ಇವನ್ನೆಲ್ಲ ಅರ್ಥ ಮಾಡಿಕೊಳ್ಳುವ ವಯಸ್ಸು ಅವನದಲ್ಲ.

ಶೋಭಾ ಅಗಲಿಹೋದ ದುಃಖವನ್ನು ಕುಗ್ಗಿಸಲು ಹಶೀಶ್ ಸಹಾಯಕವಾಯಿತು. ಹಾಗಾಗಿ ನಿತ್ಯ ಅದನ್ನು ಸೇದತೊಡಗಿದೆ. ಒಂದು ರೂಪಾಯಿ ತೆತ್ತು, ಸಣ್ಣ ಅಂಟುವ ಗುಳಿಗೆ ಕೊಂಡು, ಕಾಲೇಜಿನ ಪಾರ್ಕಿನಲ್ಲಿ ಹೊಗೆ ಹಾರಿಸಿ ಮಜಾ ಮಾಡುತ್ತಿದ್ದೆ. ನಿಶ್ಚಿತ ಸ್ವೇಚ್ಛಾ-ಲೋಕದಲ್ಲಿ ತೇಲಿ ಹೋಗುವಂತಾಗುತ್ತಿತ್ತು. ಇದೊಂದು ಕೆಟ್ಟ ಚಟವಾಗಬಹುದೆಂದು ನನಗಾಗ ತೋರಲೇ ಇಲ್ಲ. ಏಕೆ? ಬೇಡಾದಾಗ ಅದನ್ನು ಬಿಟ್ಟುಬಿಡಲೂಬಹುದು ಎಂದು ತಿಳಿದಿದ್ದೆ.

ಕ್ರಮೇಣ ನಾನು ಕ್ಲಾಸಿನ ಪಾಠಗಳಲ್ಲಿ ಹಿಂದೆ ಬೀಳತೊಡಗಿದೆ. ಕೊನೆಗೆಷ್ಟರ ಮಟ್ಟಿಗೆ ಬಂತೆಂದರೆ— ೧೯೭೫ ಮೇ ತಿಂಗಳ ಇಂಟರ್ ಸೈನ್ಸ್ ಪರೀಕ್ಷೆಯಲ್ಲಿ ಒಂದು ಪ್ರಶ್ನೆಗೂ ಉತ್ತರ ಬರೆಯದೆ ಹೊರ ನಡೆದು ಬರುವಂತೆಯೂ ಆಯಿತು.

ನಾನು ಇಂಟರ್ ಪಾಸಾಗದೆ ಮೆಡಿಕಲ್ ಕಾಲೇಜು ಸೇರುವಂತಿಲ್ಲ. ಆಗ, ನನ್ನ ಡಾಕ್ಟರ್ ಆಗುವ ಯೋಜನೆಯನ್ನೇ ಅದುಮಿಡಲು ತೊಡ

ದೆ. ತಂದೆ-ತಾಯಿ ಸಹ ನಾನು ಡಾಕ್ಟರಾಗಬೇಕೆಂದು ಬಯಸಿದ್ದು ಸಮಾಜದಲ್ಲಿ ತಮ್ಮ ಪ್ರತಿಷ್ಠೆ ಹೆಚ್ಚಬೇಕೆಂದು ಅಲ್ಲವೆ? ಅದಕ್ಕಾಗಿ— ನನಗೆ ಒಳ್ಳೆಯ ಮಾರ್ಕ್ಸ್ ಬಂದದ್ದರಿಂದ ಮುಂಬಯಿಯ ಪ್ರಸಿದ್ಧ ಮೆಡಿಕಲ್ ಕಾಲೇಜಿನಲ್ಲಿ ಪ್ರವೇಶ ದೊರಕಿದೆ— ಎಂದು ಸುಳ್ಳು ಹೇಳಿ ನಂಬಿಸಿದೆ. ಅವರೂ ಹಿಗ್ಗಿ ಹೋದರು.

ವಸ್ತುತಃ ನಾನು ಇಂಟರ್ ಕಾಲೇಜಿನಲ್ಲಿ 'ಮರಳಿ ಯತ್ನವ ಮಾಡು'ತ್ತಿದ್ದೆ. ಒಂದು ದಿನ ಇಡೀ ಕಾಲೇಜಿನ ಆವರಣದಲ್ಲೇ ಬೆತ್ತಲೆ ಓಡಿದ್ದ ಬಂದ ವರ್ಷ ಮಧ್ಯದಲ್ಲಿ ನನ್ನನ್ನು ಕಾಲೇಜಿನಿಂದ ಹೊರ ಹಾಕಿದರು. ಹೇಗಿದ್ದರೂ, ಓದುವ ಕೆಲಸ ಎಂದೋ ಬಿಟ್ಟಿದ್ದರಿಂದ, ನನಗೆ ಅದರಿಂದಾವ ವ್ಯತ್ಯಾಸವೂ ತೋರಲಿಲ್ಲ. ಇಷ್ಟರಲ್ಲಿ, ನಾನು ಹಶೀಶ್‌ನಿಂದ ಅಫೀಮಿಗೆ (Opium) ಬದಲಾಯಿಸಿಕೊಂಡಿದ್ದೆ. ಹಾಗಾಗಿ ನನ್ನ ಹೆಚ್ಚಿನ ಸಮಯವನ್ನು ಮಧ್ಯ ಮುಂಬಯಿಯ ಮಾದಕ ಮದ್ದಿನ ಗುಹೆಗಳಲ್ಲಿ ಕಳೆಯುತ್ತಿದ್ದೆ.

## ದುಬಾರಿ ಆಸೆ

ತಿಂಗಳುಗಳು ಉರುಳಿದವು. ಒಂದು ದಿನ ಬೆಳಗ್ಗೆ ಏಳುವಾಗಲೇ ನಾನು ತುಂಬಾ ದಣಿದಿದ್ದೆ. ಶೀತ, ತಲೆನೋವು, ಬಾಧಿಸತೊಡಗಿತು. ಸ್ವಲ್ಪ ಅಫೀಮು ಸೇವಿಸಿದ ನಂತರ ಅದು ಕಡಿಮೆಯಾಯಿತು. ಮರುದಿನ ಬೆಳಗ್ಗೆಯೂ ಹಾಗೆಯೇ ಆಯಿತು. ಇವೆಲ್ಲ ಮಾದಕ ಮದ್ದಿನ ಚಟದ ಪರಿಣಾಮವೆಂದು ತಿಳಿದುಬಂತು.

ಆ ವೇಳೆ, ಪುಣೆಯ ರಜನೀಶ ಆಶ್ರಮ ತನ್ನ ಚಟುವಟಿಕೆಗಳ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ನಾನು ಸಹ ಅಲ್ಲಿ ಹೋಗಿ ಒಬ್ಬ ಶಿಷ್ಯನಾಗಿ ಸೇರಿಕೊಂಡೆ. ಕಾವಿ ನಿಲುವಂಗಿ ಧರಿಸಿ, ಸ್ವಾಮಿ ರಜನೀಶರ ಲಾಕೆಟ್ ಉಳ್ಳ ಜಪಮಾಲೆಯನ್ನು ಹಾಕಿಕೊಂಡೆ.

ಆದರೆ ಈ ಮಾದಕಮದ್ದು ಮಾತ್ರ, ನನ್ನ ಜೀವನವನ್ನು ಸಂಪೂರ್ಣ ಆಕ್ರಮಿಸಿಯಾಗಿತ್ತು. ನಿತ್ಯ ಅಫೀಮು ಸೇವಿಸುವುದಲ್ಲದೆ, ಹೆರಾಯಿನ್, ಎಲ್. ಎಸ್. ಡಿ., ಮಾರ್ಫೈನ್‌ಗಳನ್ನೂ ಸೇವಿಸಿ ನೋಡತೊಡಗಿದೆ. ಹೊಸ ಹೊಸ ಮಾದಕ ಅನುಭವಗಳಿಗೆ ನನ್ನ ಆಸೆ ಹೆಚ್ಚುತ್ತ ಹೋಗಿ, ಒಂದು ದಿನ ಹಣ ಕೊಟ್ಟು ನನ್ನ ನಾಲಗೆಗೆ ಹಾವಿನಿಂದ ಕಚ್ಚಿಸಿಕೊಂಡೂ ಇದ್ದೆ. ಬರಬರುತ್ತ ದಿನಕ್ಕೆ ಸಾಮಾನ್ಯ ೧೫೦/- ರೂಪಾಯಿಗಳು ನನ್ನ ದುಶ್ಚಟಗಳ ಸಂತೃಪ್ತಿಗಾಗಿ ಬೇಕಾಗಿ ಬಂತು. ನನ್ನ ಹೆಚ್ಚಿನ ಬಟ್ಟೆಬರೆಗಳನ್ನು ಮಾರಿ ಹಾಕಿದೆ. ಮುಂಬಯಿಯ ಅಫೀಮು ಗುಹೆಗಳಲ್ಲಿ ನಾನೊಬ್ಬ ಮೆಡಿಕಲ್ ವಿದ್ಯಾರ್ಥಿ ಎಂದು ಹೇಳಿಕೊಳ್ಳುತ್ತಿದ್ದೆ. ಆ ಮೂಲಕ, ಅಲ್ಲಿರುವ ಮಾದಕ ಮದ್ದಿನ ಆರಾಧಕರಿಂದ ಮೆಡಿಕಲ್ ಟೆಸ್ಟಿಗಾಗಿ ಫೀಸನ್ನು ಕೇಳುತ್ತಿದ್ದೆ.

ನಾನೇನು ಮಾಡುತ್ತಿದ್ದೇನೆ? ಇದರಿಂದೇನಾಗಬಹುದು? ಎಂಬ ವಿಷಯದಲ್ಲಿ ಯೋಚನೆಯನ್ನು ಸಹ ನಾನು ಮಾಡುತ್ತಿದ್ದಿಲ್ಲ. ಆದರೆ ೧೯೭೮ ರಲ್ಲಿ ನನಗೆ ಬಂದ ಕಾಮಾಲೆ ಕಾಯಿಲೆಯಿಂದಾಗಿ ಸತ್ತಂತೆಯೇ ಆದೆ. ನನ್ನನ್ನು ನಾನೇ ಕೊಂದುಕೊಳ್ಳುತ್ತಿದ್ದೇನೆಂದೂ ನನಗಾಗ ತೋರಿತು. ಕೊನೆಗೆ ಮುಂಬಯಿಯ ಮುನಿಸಿಪಲ್ ಆಸ್ಪತ್ರೆಯೊಂದನ್ನು ಸೇರಿ, ಈ ಚಟದಿಂದ ಮುಕ್ತನಾಗಲು ಯೋಚಿಸಿದೆ. ಅದೂ ಫಲಕಾರಿಯಾಗಲಿಲ್ಲ. ಆಗಾಗ ಅಫೀಮು ಸೇದಿ, ನಾಲ್ಕು ದಿನಗಳ ಮೇಲೆ ಅಲ್ಲಿಂದಲೂ ಹೊರಬಂದು ಮನೆ ಸೇರಿದೆ.

## ನಯವಾದ ಸುಳ್ಳು

ಆಗ, ನಾನೇನು ಮಾಡುತ್ತಿದ್ದೇನೆಂದು ನನ್ನ ಹೆತ್ತವರು ಕೇಳುವ ಮೊದಲೇ ಅವರಿಗೊಂದು ನಯವಾದ ಸುಳ್ಳು ಹೇಳಿದೆ— "ಭಾರತದ ದೊಡ್ಡ ವೈದ್ಯ ವಿಜ್ಞಾನಿಯೊಬ್ಬರು, ತನ್ನ ಸಹಾಯಕ ವಿಜ್ಞಾನಿಯಾಗಿ ನನ್ನನ್ನು ತೆಗೆದುಕೊಳ್ಳಲು ಬಯಸಿದ್ದಾರೆ; ಅದಕ್ಕೆ ಪೂರ್ವಭಾವಿಯಾಗಿ ವೈದ್ಯ ವಿಜ್ಞಾನದಲ್ಲಿ ವಿಶೇಷ ತರಬೇತಿಗಾಗಿ ರಶಿಯಕ್ಕೆ ೧೯೮೦ನೇ ಮೇ ತಿಂಗಳಲ್ಲಿ ನನ್ನನ್ನು ಕಳಿಸ

ಬಿದ್ದಾರೆ"— ಎಂದು ಮೊದಲಾಗಿ 'ರೈಲು' ಬಿಟ್ಟೆ.

ಆದರೆ ದಿನದಿಂದ ದಿನಕ್ಕೆ ನಾನು ಜೀವಚ್ಛವ ವಾಗುತ್ತಿರುವುದನ್ನು ಕಂಡ ಅಮ್ಮ ಗಾಬರಿಯಾಗಿ "ನಿನಗೇನಾಗಿದೆ ಸಂಜು? ನೋಡುವಾಗಲೇ ಭಯವಾಗುತ್ತಿದೆಯಲ್ಲಾ!" ಎಂದು ಕೇಳಿದಳು.

"ನನಗೆ ಕ್ಯಾನ್ಸರ್ ತಾಗಿದೆ ಅಮ್ಮಾ" ಎಂದು ಗೊಣಗಿದೆ.

"ಅಯ್ಯೋ ದೇವರೇ! ಈ ತನಕ ಏಕಿದನ್ನು ನಮಗೆ ಹೇಳಲಿಲ್ಲ! ಈಗಲೇ ನಿನ್ನನ್ನು ಡಾಕ್ಟರರ ಹತ್ತಿರ ಕರೆದೊಯ್ಯುವೆ" ಎಂದು ಅಳತೊಡಗಿ ದಳು.

ನನ್ನ ಗುಟ್ಟೆಲ್ಲ ರಟ್ಟಾಗಬಹುದೆಂದು ತಿಳಿದು "ನಮ್ಮ ಕಾಲೇಜಿನ ಪಕ್ಕದ ಕ್ಯಾನ್ಸರ್ ಆಸ್ಪತ್ರೆ ಯಿಂದ ನಾನು ಈಗಾಗಲೇ ಔಷಧಿ ತೆಗೆದುಕೊಳ್ಳು ತ್ತಿದ್ದೇನೆ" ಎಂದು ಇನ್ನೊಂದು ಸುಳ್ಳನ್ನು ನಯ ವಾಗಿ ಹೇಳಿದೆ. ಅಲ್ಲಿಯ ಡಾಕ್ಟರರು ಇದು ಶೀಘ್ರ ಗುಣವಾಗುವುದೆಂದು ಧೈರ್ಯ ಕೊಟ್ಟಿ ದ್ದಾರೆಂದೂ ಹೇಳಿದೆ.

ಈ ಕಥೆಯನ್ನು ಮನೆಯವರೆಲ್ಲ ನಂಬಿದರು. ಮಾತ್ರವಲ್ಲದೆ 'ಔಷಧೋಪಚಾರ'ಕ್ಕಾಗಿ ಇನ್ನಷ್ಟು ಹಣ ಕೇಳಲಿಕ್ಕೂ ಈ ಕಥೆ ಸಹಾಯಕವಾಯಿತು. ಆ ಹಣದಿಂದ ನನಗೆ ಬೇಕಿದ್ದ 'ಮದ್ದ'ನ್ನು ಇನ್ನಷ್ಟು ಕೊಂಡು ಬಳಸಿದೆ. ನನ್ನೀ ಚಟ ಎಂಥ ದೈತ್ಯಾಕಾರ ತಾಳಿತೆಂದರೆ ಬೆಳಗ್ಗಿನದ್ದು ಹಾಸಿಗೆ ಬಿಡಬೇಕಾದರೆ ಕನಿಷ್ಟ ಮೂರು ಗ್ರಾಂ ಅಫೀಮು ಬೇಕಾಗುತ್ತಿತ್ತು.

ಈ ಮಧ್ಯೆ ನನ್ನ ಆಪ್ತ ಸ್ನೇಹಿತರಿಬ್ಬರು ಸತ್ತು ಹೋದ ಸುದ್ದಿ ಬಂತು. ಅವರು ಸಹ ನನ್ನಂತೆಯೇ 'ಮಾದಕ ಮದ್ದಿ'ನ ಆರಾಧಕರಾ ಗಿದ್ದರು. ಹೆಚ್ಚು ಕಡಿಮೆ ೩೦ರ ವಯಸ್ಸಿನವರು. ಸುರೇಶನ ನುಚ್ಚುನೂರಾದ ದೇಹ ಅವರ ಮನೆಯ ಕಾರ್ ಪಾರ್ಕಿನ ಮುಂದೆ ಬಿದ್ದಿತ್ತು. ಪ್ರಾಯಶಃ ಆತ ಬಹು ಅಂತಸ್ತಿನ ಮನೆಯ ಆರನೆಯ ಮಹಡಿಯಿಂದ ಎಲ್. ಎಸ್. ಡಿ. ಆವೇಶಕ್ಕೊಳ ಗಾಗಿ ಕೆಳ ಜಿಗಿದಿರಬೇಕು. ಬೆನ್ನಿ ಎಂಬ ಇನ್ನೊಬ್ಬ ಗೆಳೆಯ, ಪುಣೆಯಲ್ಲಿಯ ಕುಪ್ರಸಿದ್ಧ ಅಫೀಮು ಗುಹೆಯೊಂದರ ಮುಂಭಾಗದಲ್ಲಿ ಭಯಂಕರವಾಗಿ ಗಾಯಗೊಂಡು ಮೂರ್ಛೆ ಬಿದ್ದಿದ್ದ. ಆಸ್ಪತ್ರೆಗೆ ಸಾಗಿಸುವಷ್ಟರಲ್ಲೇ ಆತ ಸತ್ತು ಹೋದ. ಈ ಇಬ್ಬರು ಗೆಳೆಯರ ಸಾವು ನನ್ನ ಎದೆಯನ್ನು ನಡುಗಿಸಿ ಬಿಟ್ಟಿತು. ಇದೇ ರೀತಿ ಸಾಯುವುದು ನನ್ನ ಹಣೆಯಲ್ಲೂ ಬರೆದಿದೆಯೋ ಏನೋ!

ಇನ್ನೇನು ಮಾಡುವುದೆಂದು ನಾನು ಚಿಂತಾ ಕ್ರಾಂತನಾಗಿದ್ದಾಗ ಮನೆಯವರೆಲ್ಲ ನಾನು ಯಾವಾಗ ಮಾಸ್ಕೋಗೆ ಹೊರಡುವುದೆಂದು ಕೇಳತೊಡಗಿದರು. ಏನೇನೋ ಸಬೂಬು ಹೇಳಿದೆ, ಕೊನೆಗೆ ಮೇ ಏಳರಂದು ನನ್ನ ಮಾಸ್ಕೋ ಪ್ರಯಾಣ ಎಂದು ನಂಬಿಸಿದೆ. ಅದು ನನ್ನ ಮಾತಾಪಿತರ ವಿವಾಹ ರಜತೋತ್ಸವ ದಿನದ ನಂತರದ ಐದನೇ ದಿನ!

## ದೃಢ ನಿರ್ಧಾರ

ನನ್ನ ರಶಿಯಾ ಪ್ರಯಾಣದ ದಿನ ಹತ್ತಿರ ಬಂತು. ಅಂದೇ, ಈ ಮಾದಕ ಮದ್ದಿನ ಮಾಟದಿಂದ ಸಂಪೂರ್ಣ ಬಿಡುಗಡೆ ಹೊಂದಲೇ ಬೇಕು-ಎಂಬ ಕಟು, ಕಠಿನ, ಪ್ರತಿಜ್ಞೆಗೈಯಲು ನಿರ್ಧರಿಸಿದೆ. ಎಷ್ಟಕ್ಕೂ ಈ ಪ್ರತಿಜ್ಞಾಭಂಗ ಆಗ ಬಾರದೆಂದು ನಾಲ್ಕಾರು ದಿನಗಳಿರುವಾಗಲೇ ಮನಸ್ಸು ಗಟ್ಟಿಮಾಡಿಕೊಳ್ಳತೊಡಗಿದೆ. ಅದ- ಕ್ಕಾಗಿಯೇ ಪುಣೆಯ ಒಂದು ಮೂಲೆಯಲ್ಲಿರುವ ಹಾಳು ಶಿವಮಂದಿರಕ್ಕೆ ಹೋಗಲು ನಿಶ್ಚಯಿ- ಸಿದೆ.

ಮೇ ಏಳನೇ ಬುಧವಾರ ಒಂದು ಸಣ್ಣ ಚೀಲ ದಲ್ಲಿ ಕೆಲ ಸಾಮಾನುಗಳನ್ನು ತುಂಬಿ ಮನೆಯಿಂದ ತಪ್ಪಿಸಿಕೊಂಡು ಬಂದೆ. ಪುಣೆಗೆ ಹೋಗುವ ಬಸ್ಸಿನಲ್ಲಿ ಹೊರಟೇ ಬಿಟ್ಟೆ.

"ನಿಮ್ಮ ಮುಂದಿರುವ ಕೋಣೆಯೊಂದನ್ನು ಕೆಲ ದಿನಗಳ ಮಟ್ಟಿಗೆ ನನಗೆ ಬಿಟ್ಟು ಕೊಡಬಹುದೇ?" ಎಂದು ಪೂಜಾರಿಯನ್ನು ಕೇಳಿದೆ. ತಲೆಯಿಂದ

[illegible] ನನ್ನನ್ನು ನೋಡಿದರು. "ಮಾದಕ ಮದ್ದಿನಿಂದ ಬಿಡುಗಡೆ ಪಡೆಯಲು ಯತ್ನಿಸುವಿರಾ?" ಎಂದು ಕೇಳಿದರು. ನಾನು ತಲೆಯಲ್ಲಾಡಿಸಿದೆ. ಅವರಾಗ ಕೈ ಎತ್ತಿ ಮೌನಾಶೀರ್ವಾದ ಮಾಡಿದರು.

ಕತ್ತಲು ಕೋಣೆಯೊಳಗೆ ನೆಲದ ಮೇಲೆ ಬಟ್ಟೆಯೊಂದನ್ನು ಹರಡಿ ಬಿದ್ದುಕೊಂಡೆ. ಒಂದೇ ಸವನೆ ಏರೇರಿ ಬರುತ್ತಿರುವ ಮೈ ಕೈನೋವಿಂದ ನರಳಾಡುತ್ತ ಮೂರು ದಿನಕ್ಕೂ ಮಿಕ್ಕಿ ಹೊರಳಾಡಿದೆ. ಒಮ್ಮೆ, ಬೆಂಕಿಯ ಮಧ್ಯದಲ್ಲಿ ಉರಿಯುತ್ತಿರುವ ಯಾತನೆ ತುಂಬಿ ಬಂತು. ಮತ್ತೊಮ್ಮೆ ಜೇನ್ನೊಣಗಳ ಹಿಂಡೇ ಬಂದು ನನ್ನ ದೇಹದ ಅಂಗಾಗಗಳನ್ನೆಲ್ಲ ಕಚ್ಚಿ ಹೀರುವಂಥ ಅಸಹ್ಯ ವೇದನೆಯ ಅನುಭವವಾಯಿತು. ಹೇಗೋ ಏನೋ ಭಾನುವಾರ ಬೆಳಗಾಗುವ ವೇಳೆ ಮೆಲ್ಲನೆ ನೋವು ಕಡಿಮೆಯಾದಂತಾಯಿತು. ನಾಲ್ಕಾರು ಘಂಟೆಗಳ ಮೇಲೆ ನಿಧಾನವಾಗಿ ನನ್ನನ್ನೆಳೆದುಕೊಂಡು ಹೇಗೋ ಕೋಣೆಯಿಂದ ಹೊರ ಬಂದೆ. ಮೈ ಚರ್ಮವೆಲ್ಲ ಬೂದು ಬಣ್ಣದ್ದಾಗಿತ್ತು. ಕೂದಲು ಸುಟ್ಟ ತಾಮ್ರದ ತಂತಿಯಂತಿತ್ತು. ಕೆನ್ನೆ ಹೂತು ಹೋಗಿ, ಕಣ್ಣು ಹೊರ ಚಾಚಿ ಬಂದಿತ್ತು. ಅಲ್ಲೇ ಹತ್ತಿರ ಇದ್ದ ದೊಡ್ಡ ತಂಬಿಗೆಯೊಂದರ ನೀರನ್ನೆಲ್ಲ ಗಟಗಟನೆ ಕುಡಿದೆ. ತಣ್ಣೀರಲ್ಲಿ ಮಿಂದೆ. ಒಮ್ಮೆಗೆ ಹೊಸ ಜನ್ಮವನ್ನೇ ಪಡೆದಂತಾಯಿತು.

ಮುಂಬಯಿಯ ದುಷ್ಪ್ರೇರಣೆಗಳಿಂದ ದೂರವಿರುವುದಕ್ಕೋಸ್ಕರ ಕೆಲ ದಿನ ಪುಣೆಯಲ್ಲೇ ಇರಲು ನಿರ್ಧರಿಸಿದೆ. ಎರಡು ದಿನಗಳ ನಂತರ [illegible] ಗೂಡಂಗಡಿಯ ಮುಂದೆ ನಾನು ಕುಳಿತಿದ್ದಾಗ ನನ್ನ ತಂದೆ ಮತ್ತು ತಮ್ಮನನ್ನು ನೋಡಿ, ಒಮ್ಮೆಗೆ ಬೆಚ್ಚಿಬಿದ್ದೆ.

"ಬಾ ಮಗೂ ಬಾ!" ಎಂದು ಕಣ್ಣೀರು [illegible] ಅಪ್ಪ ಅಕ್ಕರೆಯಿಂದ ಕರೆದರು. "[illegible] ಕಳವಳಗಳಿಂದ [illegible]." ಎಂದು ಉದ್ವೇಗಗೊಂಡು ನುಡಿದರು. ಮೋ[illegible] ನನ್ನ ಸುಖ ಪ್ರಯಾಣ ಕೋರಲಿಕ್ಕಾಗಿ ಅವರು ವಿಮಾನ ನಿಲ್ದಾಣಕ್ಕೆ ಹೋಗಿದ್ದರಂತೆ. ನಾನು ಮಾಸ್ಕೋ ಪ್ರಯಾಣ ಹೊರಟಿಲ್ಲವೆಂದು ಅಲ್ಲಿ ತಿಳಿದ ಮೇಲೆ ರಜನೀಶ ಆಶ್ರಮದಲ್ಲಿರ ಬಹುದೆಂದು ಅಲ್ಲಿಯೂ ಹೋಗಿ ವಿಚಾರಿಸಿದರಂತೆ. ಅಲ್ಲಿ ನಿರಾಶೆಗೊಂಡು ತಮ್ಮನಾದ ಮುಖೇಶನನ್ನು ಕರಕೊಂಡು ನನ್ನನ್ನು ಹುಡುಕಾಡುತ್ತ ಪುಣೆಯಲ್ಲೆಲ್ಲ ಸುತ್ತಾಡಿದರಂತೆ.

## ಆತ್ಮಹತ್ಯೆಯ ಪ್ರಯತ್ನ

ನಾನು ಮನೆಗೆ ಬರಬೇಕೆಂದು ಅಪ್ಪ ದೈನ್ಯದಿಂದ ಕೇಳಿಕೊಂಡರು. ನಾನೆಷ್ಟಕ್ಕೂ ಒಪ್ಪದ್ದನ್ನು ತಿಳಿದು ಕೊನೆಗೆ ೮೦ ರೂಪಾಯಿಗಳನ್ನು ನನ್ನ ಕೈಗಿತ್ತು. "ಆದದ್ದಾಯಿತು; ಹಿಂದಿನದನ್ನೆಲ್ಲ ಮರೆತು ಬಿಡು; ನಿನ್ನ ಆರೋಗ್ಯ ಕಾಪಾಡಿಕೋ; ಆದಷ್ಟು ಬೇಗ ಮನೆಗೆ ಬಾ" ಎಂದು ಹೇಳಿ ಹೊರಟು ಹೋದರು.

ಒಂದು ವಾರದ ನಂತರ ನಾನು ಮನೆ ಸೇರಿದೆ. ಮನೆಯವರಿಗೆಲ್ಲ ಇದರಿಂದ ಸಂತೋಷವಾದರೂ, ಯಾರೂ ನನ್ನನ್ನರಿತುಕೊಂಡು ಮಾತಾಡಲಿಲ್ಲ. ನಾನೇಕೆ ಈ ಹಾಳು ಚಟಕ್ಕೆ ಬಲಿಯಾದೆನೆಂದು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಲಿಲ್ಲ. ಇದಕ್ಕೆಲ್ಲ ಕಾಲೇಜಿನ ಕೆಟ್ಟ ಸಹವಾಸವೇ ಕಾರಣವೆಂದು ಹೇಳಿಕೊಳ್ಳುತ್ತಿದ್ದರು. ತಮ್ಮ ಮುಖೇಶ ಸಹ ಅಕೌಂಟೆಂಟ್ ಆಗಿ ಉದ್ಯೋಗ ಆರಂಭಿಸಿದ್ದ. ಆತನೂ ನನ್ನೊಡನೆ ಹೆಚ್ಚಿಗೆ ಮಾತಾಡುತ್ತಿರಲಿಲ್ಲ.

ಸುಮ್ಮನೆ, ಕಾಲ ಕಳೆಯುವುದಕ್ಕಾಗಿ ನಾನು ಮತ್ತೊಂದು ಕಾಲೇಜಿಗೆ ಸೇರಿದೆ. ಅಲ್ಲಿ ಕೆಲ ಹೊಸ ಗೆಳೆಯರು ದೊರಕಿದರು. ಆದರೂ ಎಷ್ಟೋ ವೇಳೆ ನಾನು ಒಬ್ಬಂಟಿಗ, ಅಸುಖಿ ಎಂದು ತುಂಬಾ ಖಿನ್ನನಾಗಿರುತ್ತಿದೆ. ಅಫೀಮು ಬಿಟ್ಟ ಮೇಲೆ ಮದ್ಯಪಾನ ಶುರು ಮಾಡಿದೆ. ಒಮ್ಮೊಮ್ಮೆ ಹಶೀಶ್ ಸೇದುತ್ತಲೂ ಇದ್ದೆ.

ಒಂದು ದಿನ ತುಂಬ ಖಿನ್ನನಾಗಿದ್ದ ಮುಖೇಶ

ನೊಡನೆ ದೊಡ್ಡ ಜಗಳಕ್ಕೆ ತೊಡಗಿದೆ. ಕೊನೆಗೆ ಕಂಬಕ್ಕೆ ಹೊಡೆದು ಕೈಯನ್ನೇ ಮುರಿದುಕೊಂಡೆ. ಆದರೆ ಅಪ್ಪ ಕೂಡಲೇ ಆಸ್ಪತ್ರೆಗೆ ಸಾಗಿಸಿ ನನ್ನನ್ನುಳಿಸಿದರು.

ಕೆಲವೇ ದಿನಗಳ ನಂತರ ಮುಖೇಶನೊಡನೆ ಇನ್ನೊಮ್ಮೆ ವಾದ ವಿವಾದ ಬೆಳೆಯಿತು. ಉಗ್ರ ರೂಪತಾಳಿದ ನಾನು ಅವನನ್ನು ಹೊಡೆದು ಕೊಲ್ಲ ಹೋದೆ. ಮನೆಯುವರೆಲ್ಲ ಗಾಬರಿಗೊಂಡು ಪೋಲೀಸರನ್ನು ಕರೆದರು. ಪೋಲೀಸ ಇನ್ಸ್ಪೆಕ್ಟರ್ ಬಂದು ನನಗೆ ಸಮಾಧಾನ ಹೇಳ ಹೊರಟರೆ-ಅವರಿಗೂ ಬಲವಾಗಿ ಬಾರಿಸಿದೆ. ಅಪಾಯದ ಸುಳಿವು ಕಂಡ ಪೋಲೀಸ್ ಇನ್ಸ್ಪೆಕ್ಟರ್ ಕಾನ್ಸ್ಟೇಬಲನ್ನು ಕರೆದು ಸ್ಟೇಶನ್ನಿಗೆ ನನ್ನನ್ನು ಎಳೆದೊಯ್ಯ ಹೇಳಿದರು. ಅಲ್ಲಿ ಚೆನ್ನಾಗಿ ಥಳಿಸಿ ನನ್ನನ್ನು ಲಾಕಪ್ಪಿನಲ್ಲಿಟ್ಟರು.

ಮರುದಿನ ಬೆಳಿಗ್ಗೆ ಪೋಲೀಸ್ ಆಫೀಸರರ ಕಾಲು ಹಿಡಿದು ಕ್ಷಮೆ ಕೇಳಿದೆ, ಬುದ್ಧಿ ಹೇಳಿ, ನನ್ನನ್ನವರು ಬಿಡುಗಡೆ ಮಾಡಿದರು. ಮನೆಗೆ ಬಂದು ನೋಡಿದರೆ ಮನೆ ಖಾಲಿ; ಯಾರೂ ಇರಲಿಲ್ಲ. ಒಡನೆಯೇ ಕಡುಕೋಪ ನನ್ನ ತಲೆಗೇರಿತು. ಹೆತ್ತವರನ್ನು ಬಾಯಿಗೆ ಬಂದಂತೆ ಬೈದೆ. ನನ್ನನ್ನೇ ಬೈದುಕೊಂಡು ನಾನೇಕೆ ಬದುಕಬೇಕೆಂದು ಜೋರಾಗಿ ಕೂಗಾಡಿದೆ. ಸಿಕ್ಕಿದ್ದನ್ನೆಲ್ಲ ಹೊಡೆದು ಪುಡಿ ಪುಡಿ ಮಾಡತೊಡಗಿದೆ. ಪಾತ್ರೆ, ಪದಾರ್ಥ, ಗಡಿಯಾರ, ಗಾಜಿನ ಪಾತ್ರೆ, ರಿಕಾರ್ಡು, ಫೋಟೋ, ಬಲ್ಬು- ಸಿಕ್ಕದ್ದನ್ನೆಲ್ಲ ಒಡೆದು ಹಾಕಿದೆ. ಕೊನೆಗೆ ಎಲ್ಲ ಉದ್ವೇಗ ಕರಗಿದ ಮೇಲೆ ತಲೆತಿರುಗಿ ಬಿದ್ದೆ.

ಈ ತರದ ಕೋಪೋದ್ರೇಕದ 'ವಾಂತಿ ಭೇದಿ' ಯಾದ ಮೇಲೆ ಸ್ವಲ್ಪ ಮಾನಸಿಕ ಶುದ್ಧಿಯಾದಂತಾಯಿತು. ಕೆಲದಿನಗಳ ಮೇಲೆ, ತಂದೆಯ ಕಂಟ್ರಾಕ್ಟರ್ ಗೆಳೆಯನೊಬ್ಬ ನನ್ನನ್ನು ಮಾತಾಡಿಸಿದ. ತನ್ನ ಕಟ್ಟಡ ನಿರ್ಮಾಣ ಕಾರ್ಯದ ಮೇಸ್ತ್ರಿ ಕೆಲಸ ಕೊಡಬಂದಾಗ ಕೂಡಲೇ ಅದನ್ನೊಪ್ಪಿಕೊಂಡೆ. ಆದರಿಂದ ನನಗೆ ಕೇವಲ ರೂ. ೫೦೦/- ತಿಂಗಳಿಗೆ ಬರುತ್ತಿದ್ದರೂ, ನನ್ನನ್ನದು ಬಿಡುವಿಲ್ಲದವನನ್ನಾಗಿ ಇಡುತ್ತಿತ್ತು. ಮೊದಲ ಬಾರಿ ನನ್ನ ಮೇಲೆ ಸ್ವಲ್ಪ ಜವಾಬ್ದಾರಿ ಹೇರಿಸಲ್ಪಟ್ಟಂತೆಯೂ ಆಯಿತು. ನನ್ನ ವೇತನ ತಕ್ಕ ಮಟ್ಟಿನ ಸ್ವಾತಂತ್ರ್ಯದ ಸಮಾಧಾನವನ್ನೂ ಒದಗಿಸಿತ್ತು. ಕ್ರಮೇಣ ನನಗೆ ಬದುಕಿ ಬಾಳಬೇಕೆಂಬಾಸೆ ಮೂಡಿ ಬರತೊಡಗಿತು.

ಇಂದು ನನ್ನ ಜೀವನ ಸುಧಾರಿಸಿದೆ. ಮನೆಯವರೊಡನೆ ರಾಜಿ ಆಗಿದೆ. ಮುಖೇಶ ಮತ್ತು ನಾನು ಮೊದಲಿನಂತೆಯೇ ಗೆಳೆಯ ಸಹೋದರರು. ಒಮ್ಮೊಮ್ಮೆ ನನ್ನ ಹಾಳು ಗತ ಜೀವನದ ಪಶ್ಚಾತ್ತಾಪವೂ ಕಾಡುತ್ತದೆ. ಆಗ 'ಎಷ್ಟಾದರೂ ನಾನು, ನನ್ನ ಗೆಳೆಯರಂತೆ ಮದ್ದಿನ ಮಾಟದಿಂದ ಸತ್ತು ಹಾಳಾಗಿಲ್ಲವಲ್ಲ; ನನ್ನ ಕಥೆ ದುಃಖಾಂತವಾಗಿಲ್ಲವಲ್ಲ'– ಎಂದು ನಾನೇ ಸಮಾಧಾನ ಮಾಡಿಕೊಳ್ಳುತ್ತೇನೆ.

ನನ್ನೀ ಅನುಭವ ಎಂಥ ಪಾಠ ಕಲಿಸುತ್ತದೆ? ವೈಯುಕ್ತಿಕ ಸಮಸ್ಯೆಗಳಿಗೆ ಮಾದಕ ಮದ್ದು ಪರಿಹಾರವಲ್ಲ. ಅದು ಪರಿಸ್ಥಿತಿಯನ್ನು ಮತ್ತಷ್ಟು ಹದಗೆಡಿಸುತ್ತದೆ. ಜೀವನದಲ್ಲಿ ಕಷ್ಟನಷ್ಟಗಳು ಬಂದೇ ಬರುತ್ತವೆ. ಆಗ, ಅರ್ಥ ಮಾಡಿಕೊಂಡು ಹೋರಾಡಿ 'ಬದುಕಲು ಕಲಿಯ ಬೇಕು'– ಅಲ್ಲವೇ?

✡



# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

**ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಅದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.**

೧. **ಸ್ವಾಧ್ಯಾಯ**
(ಅ) ಗ್ರಂಥದ ಮುಖ್ಯ ಭಾಗ (ಆ) ಓದಿದ ತತ್ತ್ವವನ್ನು ತನ್ನಲ್ಲೇ ಚಿಂತಿಸುವುದು (ಇ) ಪ್ರಯತ್ನ (ಈ) ಗುಪ್ತಧನ

೨. **ಉಲ್ಬ**
(ಅ) ಉಬ್ಬುವಿಕೆ (ಆ) ಉದುರುವ ನಕ್ಷತ್ರ (ಇ) ರೋಗ ಹೆಚ್ಚಾಗುವುದು (ಈ) ಗರ್ಭಕೋಶ

೩. **ಕಾರ್ಪಣ್ಯ**
(ಅ) ಕಷ್ಟಾವಸ್ಥೆ (ಆ) ಹಳೇ ಬಟ್ಟೆ (ಇ) ಜಮಖಾನೆ (ಈ) ಕರ್ಮಫಲ

೪. **ಅತ್ಯಯ**
(ಅ) ಬಹಳ ಅಧಿಕ (ಆ) ದಾಟಿ ಹೋಗುವುದು (ಇ) ಮುಪ್ಪು (ಈ) ಸಾವು

೫. **ಭೌಮ**
(ಅ) ವಿಶಾಲತನ (ಆ) ಎಂಜಲು (ಇ) ಮದುವೆಯ ಊಟ (ಈ) ಸಿಟ್ಟಿನವಳು

೬. **ದ್ವಿರೇಫ**
(ಅ) ಹೇಳಿದ್ದೇ ಹೇಳುವುದು (ಆ) ಇಮ್ಮುಖ (ಇ) ತುಂಬ (ಈ) ಶೌರ್ಯ

೭. **ಧಾವಂತ**
(ಅ) ಗಾಯ (ಆ) ಧಡಪಡಿಕೆ (ಇ) ವಾಸಸ್ಥಾನ (ಈ) ಬುದ್ಧಿಶಾಲಿ

೮. **ಕೈಫಿಯತ್ತು**
(ಅ) ಕಹಿ ಔಷಧ (ಆ) ಬಂದೂಕು (ಇ) ಧಾರಾಳ (ಈ) ವಿಜ್ಞಾಪನೆ

೯. **ಚಿಪ್ಪಳು**
(ಅ) ಚಪ್ಪಾಳೆ (ಆ) ಕಂತೆ (ಇ) ಒಂದು ಸಿಹಿ ಸಿಂಡಿ (ಈ) ಪೇಚಿನಲ್ಲಿ ಸಿಲುಕಿಸುವಿಕೆ

೧೦. **ತಕ್ಕೈಸು**
(ಅ) ಅಪ್ಪು (ಆ) ಹೊಗಳು (ಇ) ತಾಗಿ ಬೀಳು (ಈ) ಸಾಲ ತೆಗೆ

೧೧. **ಡೋಕಾರಿ**
(ಅ) ಲಂಪಟ (ಆ) ಒಂದು ಔಷಧ (ಇ) ದುಃಖ ನಟಿಸುವವ (ಈ) ಅತಿ ವಿನಯದವ

೧೨. **ದಂಡಧಾರಿ**
(ಅ) ದಂಡ ಕೊಡುವವನು (ಆ) ಶಿಕ್ಷಾಧಿಕಾರಿ (ಇ) ಪಕ್ಷಪಾತಿ (ಈ) ಒಬ್ಬ ರಾಜನ ಹೆಸರು





363 11

# 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. ಸ್ವಾಧ್ಯಾಯ
(ಅ) ಓದಿದ ತತ್ವವನ್ನು ತನ್ನಲ್ಲೇ ಮನನ ಮಾಡುವುದು, ಅಧ್ಯಯನ ನಿರತನಾಗಿರುವುದು, ವೇದ ಓದುವುದು. ಉದಾ:— ಶಾಲೆ ಬಿಟ್ಟ ಮೇಲೂ ಸ್ವಾಧ್ಯಾಯ ಮಾಡುತ್ತಿರಬೇಕು [ಸಂ.- ಸ್ವ = ತನ್ನಲ್ಲೇ + ಅಧ್ಯಾಯ = ಅಭ್ಯಾಸ]

೨. ಉಲ್ಬ
(ಈ) ಗರ್ಭಕೋಶ, ಗರ್ಭದಲ್ಲಿ ಶಿಶುವಿನ ಸುತ್ತ ಇರುವ ಚೀಲ. [ಸಂ.]

೩. ಕಾರ್ಪಣ್ಯ
(ಅ) ಕಷ್ಟಾವಸ್ಥೆ, ಬಡತನ, ದೈನ್ಯ, ಕರುಣೆ, ಉದಾ:— ಕಾರ್ಪಣ್ಯವಿಲ್ಲದ ಬದುಕು. [ಸಂ. ಕೃಪಣ = ಹೀನಸ್ಥಿತಿಯ-ಯಿಂದ]

೪. ಅತ್ಯಯ
(ಅ) ದಾಟುವುದು; ವಿಧಿ ಮೀರಿ ಹೋಗುವುದು; ಪಾರಾಗುವುದು. ಉದಾ:— ಅತ್ಯಯ ವಿಲ್ಲದ ದುಃಖ [ಸಂ. ಅತಿ = ಆಚೆ + ಅಯ = ಹೋಗುವಿಕೆ]

೫. ಭೌಮ
(ಅ) ವಿಶಾಲ, ವಿಸ್ತಾರವಾಗಿರುವ ಸ್ಥಿತಿ, ಭವ್ಯ, ಉದಾ:— ಭೌಮವಾದ ಭಾವನೆಗಳು [ಸಂ. ಭೂಮ = ಆಧಿಕ್ಯ-ದಿಂದ]

೬. ದ್ವಿರೇಫ
(ಇ) ತುಂಬಿ, ಭ್ರಮರ (ಕಾವ್ಯದಲ್ಲಿ). ದ್ವಿರೇಫದ ಗಾನ. [ಸಂ. 'ಭ್ರಮರ' ಶಬ್ದದಲ್ಲಿ ಎರಡು ರಕಾರಗಳಿರುವುದರಿಂದ; ದ್ವಿ = ಎರಡು + ರೇಫ = ರಕಾರ]

೭. ಧಾವಂತ
(ಅ) ಧಡಪಡಿಕೆ, ಯಾವುದಕ್ಕಾದರೂ ಬೇಕಾಗುವ ಅತಿಯಾದ ಓಡಾಟ. ಉದಾ:— ನೌಕರಿಗಾಗಿ ಬಹಳ ಧಾವಂತ ಅನುಭವಿಸಿದನು. [ಸಂ. ಧಾವತ್ = ಓಡುವಷ್ಟು]

೮. ಕೈಫಿಯತ್ತು
(ಈ) ವಿಜ್ಞಾಪನೆ, ನ್ಯಾಯಸ್ಥಾನದಲ್ಲಿ ದೂರು, ದೂರಿಗೆ ಉತ್ತರ, ವಿವರಣೆ, ಉದಾ:— ಹತ್ತು ಸಾವಿರಕ್ಕೆ ಕೈಫಿಯತ್ತು ದಾಖಲೆಯಾಯಿತು. [ಉರ್ದು— ಕೈಫಿಯತ್— ಅರಬ್ಬಿಯಿಂದ]

೯. ಚಿಪ್ಪಳು
(ಈ) ಇಕ್ಕಟ್ಟಿಗೆ ಸಿಲುಕಿಸುವಿಕೆ, ಪೀಡಿಸುವುದು. ಉದಾ:— ಬಹಳ ಚಿಪ್ಪಳೇರಿಸಿದರು. [ತುಳು: ಚಿಪ್ಪಲೆ]

೧೦. ತಕ್ಕೈಸು
(ಅ) ಅಪ್ಪಿಕೊಳ್ಳು, ಆಗಮಿಸು. ಉದಾ:— ಮಗುವನ್ನು ತಕ್ಕೈಸಿದಳು. [ದೇಶ್ಯ-ತಳ್ಳು = ಅಪ್ಪು]

೧೧. ಡೊಕಾರಿ
(ಇ) ನೋವಾಗದಿದ್ದರೂ ಕೂಗುವವನು, ನಟನೆಯ ದುಃಖ ತೋರಿಸುವವನು. ಉದಾ:— ಈ ಡೋಕಾರಿಯನ್ನು ನಂಬಬೇಡಿ, [ಹಿಂದಿ-ಧೋಖಾ = ಮೋಸ-ದಿಂದ?]

೧೨. ದಂಡಧಾರಿ
(ಅ) ಶಿಕ್ಷಾಧಿಕಾರಿ, ದಂಡನೆ ಕೊಡುವ ಅಧಿಕಾರ ಹೊಂದಿದವನು. ಉದಾ:— ದಂಡಧಾರಿಗಳಲ್ಲಿ ನ್ಯಾಯದೃಷ್ಟಿ ಬೇಕು. [ಸಂ. ದಂಡ = ಬಡಿಗೆ, ಶಿಕ್ಷೆ + ಧಾರಿ = ಹಿಡಿದಾತ]

●

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | | |
|---|---|---|---|
| ೬-೮ | ಸರಿಯಿದ್ದರೆ | ... | ಸಾಧಾರಣ |
| ೯-೧೦ | ,, | ... | ಉತ್ತಮ |
| ೧೧-೧೨ | ,, | ... | ಅತ್ಯುತ್ತಮ |

●

ಡಾ. ಕೆ. ಎನ್. ಪೈ

# ಹೃದಯಾಘಾತವನ್ನು ತಡೆಗಟ್ಟುವುದು ಹೇಗೆ ?

ಕಳೆದ ಒಂದು ದಶಕದಲ್ಲಿ ಈ ಬಗ್ಗೆ ಹೆಚ್ಚಿನ ಪ್ರಮಾಣದ ಜ್ಞಾನಾರ್ಜನೆಯಾಗಿದ್ದರೂ, ಆಧುನಿಕ ಮಾನವನನ್ನು ಗಣನೀಯ ಪ್ರಮಾಣದಲ್ಲಿ ಬಲಿ ತೆಗೆದುಕೊಳ್ಳುತ್ತಿರುವ ಈ ಕಾಯಿಲೆ, ಅವನ ಪ್ರಗತಿಗೇ ಕಳಂಕವೆಂಬಂತೆ ವೈದ್ಯಕೀಯ ರಂಗದಲ್ಲಿ ಅತ್ಯಂತ ಪ್ರಮುಖ ಸಮಸ್ಯೆಯಾಗಿ ಅವನನ್ನು ಕಾಡುತ್ತಿದೆ. ಕುಟುಂಬವೊಂದರ ಆಧಾರಸ್ತಂಭವನ್ನು ಕೆಡವಿ, ಅದಕ್ಕೆ ತುಂಬಲಾರದ ಹಾನಿಯನ್ನುಂಟು ಮಾಡುತ್ತಿದೆ; ಸಮಾಜಕ್ಕೆ ತನ್ನ ಕೊಡುಗೆಯನ್ನು ಕೊಡಲು ಅರ್ಹತೆಯನ್ನು ಪಡೆಯುವ ಹೊತ್ತಿನಲ್ಲೇ ವ್ಯಕ್ತಿಯೋರ್ವನನ್ನು ಕಸಿದುಕೊಳ್ಳುತ್ತದೆ.

ಅಮೇರಿಕದ ಸಂಯುಕ್ತ ರಾಷ್ಟ್ರದಲ್ಲಿ ವರ್ಷಂಪ್ರತಿ ಸುಮಾರು ಐದು ಲಕ್ಷದಷ್ಟು ಜನರು ಇದರಿಂದ ಸಾವನ್ನಪ್ಪುತ್ತಿದ್ದಾರೆ. ರಶಿಯಾದಲ್ಲಿಯೂ ಇದು ಆತಂಕಕಾರಿ ಪ್ರಮಾಣದಲ್ಲಿದೆ. ನಮ್ಮ ದೇಶದಲ್ಲಿ ಕೂಡ ಕಳೆದ ೨೦–೩೦ ವರ್ಷಗಳಲ್ಲಿ ಈ ಸಂಖ್ಯೆಯು ಗಮನ ಸೆಳೆಯುವ ರೀತಿಯಲ್ಲಿ ಏರುತ್ತಿದೆ.

ಹಿಂದೆ ಮಕ್ಕಳ ರೋಗಗಳು, ಸೋಂಕು ರೋಗಗಳು ಇತ್ಯಾದಿಗಳಿಂದ ಸಾಯುತ್ತಿದ್ದವರು, ಈಗ ಅವುಗಳಿಂದ ಪಾರಾಗಿ ಮುಂದಕ್ಕೆ ಹೃದಯಾಘಾತಕ್ಕೆ ತುತ್ತಾಗಲು ಬದುಕುಳಿಯುತ್ತಿರುವರೇನೋ ಅನಿಸುತ್ತಿದೆ.

## ಪ್ರಾಮಾಣಿಕತೆ

ಹೃದಯವು ದೇಹದ ಅತ್ಯಂತ ಪ್ರಾಮಾಣಿಕವಾದ ಮರ್ಮಾಂಗ. ಅದರ ಮೊದಲ ಬಡಿತದಿಂದ ಆರಂಭವಾದ ಚಟುವಟಿಕೆಯು ಕೊನೆಯ ಬಡಿತದಲ್ಲಿ ಪರ್ಯವಸಾನಗೊಂಡಾಗ ಎಲ್ಲವೂ ಮುಗಿದುಹೋದಂತೆ. ತನ್ಮಧ್ಯೆ ಅದು ತನ್ನ ಕರ್ತವ್ಯವನ್ನು ಹಗಲು ರಾತ್ರಿಯೆನ್ನದೇ ವಿಶೇಷವಾದ ಯಾವ ವಿಶ್ರಾಂತಿಯನ್ನು ಪಡೆಯದೇ ನಿರಂತರವಾಗಿ ಮಾಡುತ್ತಿರುತ್ತದೆ.

## ಅದ್ಭುತ ಚೈತನ್ಯ

ಒರೇ ೩೦೦ ಗ್ರಾಂ ತೂಕದ ಒಂದು ಮುಷ್ಟಿಯಷ್ಟು ಗಾತ್ರದ ಈ ಅದ್ವಿತೀಯವಾದ ಡಬಲ್ ಪಂಪು ಅಗಾಧವಾದ ಶಕ್ತಿ ಸಾಮರ್ಥ್ಯವನ್ನು ಹೊಂದಿರುತ್ತದೆ. ಎಡಭಾಗವು ದೇಹದ ಅತ್ಯಂತ ದೂರದ ಭಾಗಗಳಿಗೆ ರಕ್ತವನ್ನು ತಳ್ಳಬೇಕಾದುದರಿಂದ ಅದು ಬಲ ಭಾಗಕ್ಕಿಂತ ಹೆಚ್ಚಿನ ಶಕ್ತಿಯುತವಾದ ಸ್ನಾಯುಗಳಿಂದ ಕೂಡಿ

ಕೊಂಡಿದೆ. ದಿನವೊಂದಕ್ಕೆ ಸುಮಾರು ೧ ಲಕ್ಷ ಸಲ ಬಡಿಯುತ್ತಾ ೭೦೦೦ ಲೀಟರಿನಷ್ಟು ರಕ್ತವನ್ನು ಹೊರತಳ್ಳುತ್ತದೆ. ಬಿರುಸಿನ ಚಟುವಟಿಕೆಗಳಲ್ಲಿ ಇದು ಮೂರ್ಮಡಿಯಷ್ಟು ವೃದ್ಧಿಗೊಳ್ಳಲು ಅವಕಾಶವಿದೆ. ಪ್ರತಿ ನಿಮಿಷದಲ್ಲಿ ಸುಮಾರು ೭೦ ಸಲ ಮಿಡಿಯುತ್ತಾ, ಒಬ್ಬ ಮನುಷ್ಯನ ಸರ್ವಸಾಮಾನ್ಯ ೭೦ ವರ್ಷಗಳ ಜೀವಮಾನದಲ್ಲಿ ಎರಡು ನೂರಾ ಐವತ್ತು ಕೋಟಿ ಬಡಿತಗಳಿಂದ ಸುಮಾರು ನಲವತ್ತು ಕೋಟಿ ಗ್ಯಾಲನ್ ರಕ್ತವನ್ನು ಹೊರತಳ್ಳುತ್ತದೆ. ಹೃದಯ ಕ್ರಿಯೆಯು ಸ್ವತಂತ್ರವಾದುದು. ಅಂದರೆ ಅದು ತನ್ನಷ್ಟಕ್ಕೇ ಮಿಡಿಯಬಲ್ಲುದು. ಆದರೆ ಅದಕ್ಕೂ ಕೇಂದ್ರ ನರವ್ಯವಸ್ಥೆಗೂ ಸಂಬಂಧವಿದೆ. ಹೀಗಾಗಿ ಭಯ, ಕೋಪ ಮುಂತಾದ ಸಂದರ್ಭಗಳಲ್ಲಿ ಹೃತ್ಕ್ರಿಯೆ ಚುರುಕುಗೊಳ್ಳುತ್ತದೆ.

## ಬ್ಯಾಂಕೊಂದರ ಕ್ಯಾಶಿಯರ್ ಇದ್ದಂತೆ

ತನ್ನ ಮೂಲಕ ಲಕ್ಷಾಂತರ ಹಣ ಹಾದು ಹೋಗುವುದಾದರೂ, ಅದರ ಮೇಲೆ ಯಾವ ಹಕ್ಕು ಇಲ್ಲದೇ, ಬ್ಯಾಂಕಿನ ಕ್ಯಾಶಿಯರ್ ಒಬ್ಬನು ತಿಂಗಳ ಕೊನೆಗೆ ಸಿಗುವ ತನ್ನ ಸಂಬಳದಿಂದ ಮಾತ್ರ ತೃಪ್ತಿ ಪಡಬೇಕು. ಹಾಗೆಯೇ ದೇಹದ ಎಲ್ಲ ರಕ್ತವೂ ತನ್ನ ಮೂಲಕವೇ ಮುಂದಕ್ಕೆ ತಳ್ಳಲ್ಪಡಬೇಕಾದರೂ, ಅದರಿಂದ ಯಾವ ಪ್ರಯೋಜನವನ್ನು ಪಡೆಯದೇ, ತನಗಾಗಿಯೇ ಪ್ರತ್ಯೇಕವಾಗಿರುವ ರಕ್ತನಾಳಗಳ (Coronary Arteries) ಮೂಲಕ ಬರುವ ಸ್ವಲ್ಪ ರಕ್ತದಿಂದ ತನ್ನ ಬಿಡುವಿಲ್ಲದ ಚಟುವಟಿಕೆಗೆ ಬೇಕಾದ ಶಕ್ತಿಯನ್ನು ಅದು ಪಡೆಯಬೇಕಾಗಿದೆ. ಈ ವ್ಯವಸ್ಥೆಯಲ್ಲಿ ಏನಾದರೂ ತೊಂದರೆಯಾದರೆ ಮಾತ್ರ ಅದು ಸಹಿಸದು. ಆಮ್ಲಜನಕದ ಕೊರತೆಯನ್ನು ನೋವಿನ ಮೂಲಕ ವ್ಯಕ್ತಿಗೊಳಿಸುತ್ತದೆ.

## ಎದೆ ಸೆಳೆವು (Angina Pectoris)

ಮಹತ್ತರವಾದ ಚಟುವಟಿಕೆಗಳಲ್ಲಿ ಹೃದಯದ ಸ್ನಾಯುಗಳ ಆಮ್ಲಜನಕದ ಬೇಡಿಕೆಯು ೮-೯ ಪಾಲಿನಷ್ಟು ವೃದ್ಧಿಯಾಗಬಹುದು. ಮತ್ತು ಪೂರ್ಣ ಆರೋಗ್ಯವಂತನಲ್ಲಿ ಈ ಬೇಡಿಕೆಗೆ ಸರಿದೂಗುವ ಪೂರೈಕೆಗೆ ಸಮರ್ಪಕವಾದ ವ್ಯವಸ್ಥೆಯೂ ಇದೆ. ಆದರೆ ಹೃದಯಕ್ಕೆ ಸಂಬಂಧಪಟ್ಟ ರಕ್ತನಾಳಗಳ ಕಾಯಿಲೆ, ಕೆಲವೊಮ್ಮೆ ಅವು ಹಿಗ್ಗುವ ಬದಲು ಕೂಡಲೇ ಕುಗ್ಗುವ ವಿಷಮ ಪರಿಸ್ಥಿತಿ, ರಕ್ತಹೀನತೆ, ಸಿಫಿಲಿಸ್ ಕಾಯಿಲೆಯ ಪರಿಣಾಮ ಇತ್ಯಾದಿ ಕಾರಣಗಳಿಂದ ಪೂರೈಕೆಯಲ್ಲಿ ಕೊರತೆಯುಂಟಾದರೆ ಎದೆಸೆಳವು ಅನುಭವಕ್ಕೆ ಬರುವುದು. ಸರ್ವಸಾಮಾನ್ಯವಾಗಿ ಎದೆಯೆಲುಬಿನ (Sternum) ಹಿಂಭಾಗದಲ್ಲಿ ಉತ್ಪತ್ತಿಯಾಗಿ ಅಲ್ಲಿಂದ ಎಡದೋಳು, ಎಡಗೈ ಇಲ್ಲವೇ ಕುತ್ತಿಗೆಯ ಎಡಭಾಗ ಅಥವಾ ಎಡದವಡೆಯ ದಿಕ್ಕಿನಲ್ಲಿ ಚಲಿಸುವಂತೆ ಅನುಭವವಾಗುತ್ತದೆ. ಈ ನೋವನ್ನು ಅನೇಕ ರೀತಿಯಲ್ಲಿ. ಅಂದರೆ ಬಿತ್ತುವ ಹಿಂಡುವ, ಕೊರೆಯುವ, ಉರಿಯುವ, ಉಸಿರುಗಟ್ಟಿಸುವ, ಎದೆಮೇಲೆ ಏನೋ ಭಾರವಿರಿಸಿದಂತೆ ಮುಂತಾದ ಪದಗಳಿಂದ ಅನುಭವಿಗಳು ಬಣ್ಣಿಸಿರುತ್ತಾರೆ. ಒಮ್ಮೆ ಕಾಣಿಸಿದ ಮೇಲೆ ಅದು ಪದೇ ಪದೇ ಕಾಣಿಸುವ ಲಕ್ಷಣವನ್ನು ಹೊಂದಿರುತ್ತದೆ. ಗಂಡಸರಲ್ಲಿ ಹೆಂಗಸರಿಗಿಂತ ಸಾಮಾನ್ಯವಾಗಿದ್ದು, ಮಧ್ಯ ವಯಸ್ಸಿನ ಮುಂಚೆ ಕಾಣಿಸಿಕೊಳ್ಳುವುದು ಅಪರೂಪವಾಗಿರುತ್ತದೆ.

ಮಾನಸಿಕ ಉದ್ವೇಗ ಮತ್ತು ಶರೀರಶ್ರಮದಿಂದ ಕಾಣಿಸಿಕೊಂಡು ವಿರಾಮದಿಂದ ಮತ್ತು 'ನೈಟ್ರೈಟ್ಸ್' ಎಂಬ ಔಷಧಿಯಿಂದ ಶಮನಗೊಳ್ಳುವುದು ಇದರ ಪ್ರಮುಖ ಲಕ್ಷಣವಾಗಿರುತ್ತದೆ. ಈ ನೋವಿನ ಸಮಯದಲ್ಲಿ ವ್ಯಕ್ತಿಯು ತನ್ನ ಎಲ್ಲ ಚಟುವಟಿಕೆಗಳನ್ನು ಅಲ್ಲಿಗೇ ಕೈಬಿಟ್ಟು ಸ್ತಬ್ಧನಾಗಿ ಬಿಡುವುದು ಸಾಮಾನ್ಯವಾಗಿ ಕಂಡು ಬರುತ್ತದೆ.

ಈ ನೋವು ಪದೇ ಪದೇ ಕಾಣಿಸುವ ಮತ್ತು ಔಷಧಿಗಳಿಂದ ನೋವು ಶಮನವಾಗದಿರುವ ವ್ಯಕ್ತಿಯೋರ್ವನಿಗೆ ಶಸ್ತ್ರ ಚಿಕಿತ್ಸೆಯಿಂದ (Coronary

by- pass surgery) ಉತ್ತಮಗೊಳಿಸಲು ಸಾಧ್ಯವಿದೆ. 'ಶವಾಸನ', ಧ್ಯಾನಮಾರ್ಗದಂತಹ ಯೋಗಾಭ್ಯಾಸವು ಮಾನಸಿಕ ಉದ್ವೇಗವನ್ನು ಕಡಿಮೆಮಾಡಿ ತನ್ಮೂಲಕ ಹೃದಯದ ಹಿತವನ್ನು ಸಾಧಿಸಿ, ಅದಕ್ಕೆ ಶ್ರಮವನ್ನು ಕಡಿಮೆಮಾಡುವುದರಿಂದ ಅದು ಸಹಕಾರಿ ಎಂದು ಹೃದಯ ತಜ್ಞರು ಅಭಿಪ್ರಾಯ ಪಡುತ್ತಾರೆ.

## ಹೃದಯಾಘಾತ

ಸಾಮಾನ್ಯರಿಂದ 'ಹಾರ್ಟ್ ಅಟ್ಯಾಕ್' ಎಂದು ಕರೆಯಲ್ಪಡುವ ಈ ಪರಿಸ್ಥಿತಿಯಲ್ಲಿ ನೋವು ಇನ್ನೂ ಹೆಚ್ಚಿನ ತೀಕ್ಷ್ಣತೆಯಿಂದ ಕೂಡಿದ್ದು, ಇದು ಮರಣದಲ್ಲಿ ಅಂತ್ಯಗೊಳ್ಳುವುದೋ ಎಂಬ ಭೀತಿಯನ್ನು ಹುಟ್ಟಿಸುವುದು. ಹಿಂದಿನಂತೆ ೨ ಅಥವಾ ೩ ಮಿನಿಟುಗಳಲ್ಲಿ ಶಮನಗೊಳ್ಳದೇ ೧೦–೧೫ ನಿಮಿಷಗಳ ಕಾಲ ಇದ್ದು, ಜೊತೆಗೆ ಆ ವ್ಯಕ್ತಿಯು ಬಹಳ ಸಂಕಟಪಡುತ್ತಿದ್ದರೆ, ಹೃದಯಕ್ಕೆ ಹಾನಿ ಸಂಭವಿಸಿರುವ ಬಗ್ಗೆ ತೀವ್ರ ಅನುಮಾನ ಪಡಬೇಕಾಗುತ್ತದೆ. ಕೈಕಾಲು ತಣ್ಣಗಾಗುವುದು. ವಾಂತಿಯಾಗುವುದು. ಅತೀವ ಬೆವರುವುದು, ಏದುಸಿರು ಕಾಣಿಸಿಕೊಳ್ಳುವುದು ಇವು ಇದಕ್ಕೆ ಸಂಬಂಧಪಟ್ಟ ಇತರೇ ಮುಖ್ಯ ಲಕ್ಷಣಗಳು. ಇ.ಸಿ.ಜಿ. ಪರೀಕ್ಷೆಯಿಂದ ವೈದ್ಯರು ಇದನ್ನು ದೃಢೀಕರಿಸುತ್ತಾರೆ. ಹಲವರು ತಿಳಿದಂತೆ ಇದರಲ್ಲಿ ಹೃದಯವು ಪುಗ್ಗದಂತೆ ಒಡೆದು ಹೋಗುವುದಿಲ್ಲ. ವಾಸ್ತವಿಕವಾಗಿ ಹೃದಯದ ಯಾವುದಾದರೊಂದು ರಕ್ತನಾಳದ ಒಂದು ಕಡೆ ರಕ್ತ ಹೆಪ್ಪುಗಟ್ಟಿ ಅದರಲ್ಲಿ ರಕ್ತಸಂಚಾರವು ಸ್ಥಗಿತಗೊಂಡಾಗ ಈ ರಕ್ತನಾಳವನ್ನು ಅವಲಂಬಿಸಿರುವ ಹೃದಯದ ಭಾಗವು ತನ್ನ ಜೀವಸತ್ವವನ್ನು ಕಳೆದುಕೊಳ್ಳುವುದು. ಕ್ಷಣಾರ್ಧದಲ್ಲಿ ಆಗುವ ಈ ಹಾನಿಯಿಂದ ಚೇತರಿಸಲು ಅವಕಾಶ ಸಿಗದಿದ್ದರೆ, ಅದು ನಿಷ್ಕ್ರಿಯಗೊಂಡು 'ಹಾರ್ಟ್ ಫೇಲ್' ಆಗಿ ಮನುಷ್ಯ ಸಾಯುತ್ತಾನೆ. ಸಾಯುವವರಲ್ಲಿ ಸುಮಾರು ಅರ್ಧದಷ್ಟು ಜನರು ಮೊದಲ ೩೦ ಮಿನಿಟುಗಳಲ್ಲಿ ಸಾವನ್ನಪ್ಪುವುದರಿಂದ ಅಲ್ಲಿಯ ತನಕ ಆ ಜೀವಕ್ಕೆ ಕಿಂಚಿತ್ತೂ ಆಯಾಸವಾಗದಂತೆ ನೋಡಿಕೊಳ್ಳುವುದೇ ಸಂಬಂಧಿಕರು ಕೊಡಬಹುದಾದ ಉತ್ತಮ ಪ್ರಥಮ ಚಿಕಿತ್ಸೆ. ಇತ್ತೀಚಿಗೆ ನಗರಗಳಲ್ಲಿ ಸಿ.ಸಿ.ಯು. (Coronary Care Units) ಚಿಕಿತ್ಸಾ ಸೌಲಭ್ಯದಿಂದ ಸಾಯಬಹುದಾದ ಅನೇಕರನ್ನು ಬದುಕಿಸಲು ಸಾಧ್ಯವಾಗಿದೆ. ಅಂಥವರು ಸುಮಾರು ೧೦-೧೨ ವಾರಗಳಲ್ಲಿ ಹಂತಹಂತವಾಗಿ ತಮ್ಮ ಚಟುವಟಿಕೆಗಳನ್ನು ಹೆಚ್ಚಿಸಿ ಕೊನೆಗೆ ತಮ್ಮ ಮುಂಚಿನ ದಿನಚರಿಗಳಲ್ಲಿ ನಿರತರಾಗಲು ಶಕ್ಯವಿದೆ.

## ಆಯುರ್ವೇದದಲ್ಲಿ

ದೇಹದ ಬೇರೆ ಬೇರೆ ಅಂಗಗಳಿಂದ ಪ್ರತಿಯೊಂದನ್ನೂ ಸ್ವೀಕರಿಸುವ ಅಂಗವೇ ಹೃದಯವೆನ್ನಲಾಗಿದೆ. ಹೃದಯಕ್ಕೆ ಸೇರುವ ಕಷ್ಟಲವೂ ಅದರಷ್ಟೇ ಆಗಿರದೆ ಅದು ಇತರ ಅಂಗಗಳಿಂದ ಅದರಲ್ಲಿಗೆ ಬಂದುದಾಗಿರುತ್ತದೆ. ಬೇರೆ ಬೇರೆ ಅಂಗಾಂಗಗಳು ಸಮರ್ಪಕವಾಗಿ ಕೆಲಸ ಮಾಡದಿದ್ದರೆ, ಅದರ ದುಷ್ಪರಿಣಾಮ ಹೃದಯದ ಮೇಲೆ ಉಂಟಾಗುವುದು. ಮುಖ್ಯವಾಗಿ ಶ್ವಾಸಕೋಶ, ಮೂತ್ರಪಿಂಡ ಪಿತ್ತಜನಕಾಂಗ ಇವುಗಳ ಅಸಮರ್ಪಕ ಕಾರ್ಯವಿಧಾನದಿಂದ ಉಂಟಾಗುವ ಒತ್ತಡವು ಹೃದಯದ ಮೇಲೆ ಬೀಳುವುದು. ಆದಷ್ಟುಕಾಲ ಅದು ಎಲ್ಲವನ್ನೂ ಸಹಿಸಿ ಕಾರ್ಯದಕ್ಷತೆಯನ್ನು ತೋರಿಸುವುದಾದರೂ, ಕೊನೆಗೆ ದೀರ್ಘ ಕಾಲದ ಒತ್ತಡಕ್ಕೆ ಮಣಿದು ದುರ್ಬಲಗೊಳ್ಳುವುದು.

## ಶರೀರ ಶ್ರಮದ ಅಗತ್ಯ

* ಚಟುವಟಿಕೆಯ ಜೀವನ ಕ್ರಮವು ಆರೋಗ್ಯಕ್ಕೆ ಹಿತಕರ. ಅತಿಯಾದ ವಿರಾಮವು ಶ್ರೇಯಸ್ಕರವಲ್ಲ. ಅದು ಶರೀರವನ್ನು ದುರ್ಬಲಗೊಳಿಸುವುದು.

* ಬರೇ ಶರೀರ ಶ್ರಮದಿಂದ ಅಥವಾ ಮಿದುಳಿನ ಕೆಲಸದಿಂದ ಹೃದಯವು ದುರ್ಬಲವಾಗಲಾರದು.

* ಒಬ್ಬ ಕೂಲಿ ಆಳಿನ ಹೃದಯುವು ಅದೇ ಪ್ರಾಯದ ಒಬ್ಬ ಸೋಮಾರಿಯ ಹೃದಯಕ್ಕಿಂತ ಸಬಲವಾಗಿರುತ್ತದೆ.

* ಎಲ್ಲೆಡೆ ಹೋಗಬೇಕಾದರೂ ವಾಹನಗಳ ಮೇಲೆ ಅತಿಯಾಗಿ ಅವಲಂಬಿಸಿರುವುದು ಹಾನಿಕರ. ಹವ್ಯಾಸಿಗಳು ಅವು ತಮ್ಮ ಶತ್ರುಗಳೆಂದು ತಿಳಿದಷ್ಟೂ ಒಳ್ಳೆಯದು.

* ಮುಂಜಾನೆಯ ಸಮಯ ಖಾಲಿ ಹೊಟ್ಟೆಯಲ್ಲಿ ಸುಮಾರು ೨ ಮೈಲು ದೂರ ಶುದ್ಧ ವಾತಾವರಣದಲ್ಲಿ ನಡಿಗೆ ಬಹು ಪ್ರಯೋಜನಕರ. ವೇಗವಾಗಿ ಜೊತೆಗೆ ಕೈಬೀಸಿ ನಡೆಯುವುದರಿಂದ ಅಶುದ್ಧ ರಕ್ತವು ಹೃದಯಕ್ಕೆ ಹಿಂದಿರುಗಲು ಸಹಾಯ ಸಿಕ್ಕಿ ಹೃದಯದ ಮೇಲೆ ಸತ್ಪರಿಣಾಮವನ್ನು ಬೀರುತ್ತದೆ.

* Jogging (ನಿಂತಲ್ಲೇ ಓಡುವ ಕ್ರಮ) ಇತ್ತೀಚೆಗೆ ಜನಪ್ರಿಯವಾಗುತ್ತಿರುವ ವ್ಯಾಯಾಮ.

* ಶರೀರ ಶ್ರಮವು, ರಕ್ತದಲ್ಲಿಯ 'ಕೊಲೆಸ್ಟರಾಲ್' ಮಟ್ಟವನ್ನು ತಗ್ಗಿಸಿ ಹೃದಯಕ್ಕೆ ತಗಲಬಹುದಾದ ಹಾನಿಯನ್ನು ತಡೆಯುತ್ತದೆ.

* ಶರೀರ ಶ್ರಮದಿಂದ ಹೃದಯಕ್ಕೆ ಹೆಚ್ಚಿನ ಆಹಾರವೂ ಆಮ್ಲಜನಕವೂ ಸಿಗುವುದು. ಹೊಸ ರಕ್ತನಾಳಗಳು ಉತ್ಪತ್ತಿಯಾಗಲು ಪ್ರಚೋದನೆ ಕೂಡ ಸಿಗುವುದು.

* ಶರೀರ ಶ್ರಮವು ಹಿತಮಿತವಾಗಿದ್ದು ಪ್ರಾಯಕ್ಕೆ ಅನುಗುಣವಾಗಿರಬೇಕು. ಅದು ಆಹ್ಲಾದಕರವಾಗಿರಬೇಕಲ್ಲದೆ ಅತಿ ಆಯಾಸವನ್ನುಂಟು ಮಾಡುವಂತಿರಬಾರದು.

* ಹೃದಯ ದುರ್ಬಲವಿದ್ದವರು ವೈದ್ಯರ ಸಲಹೆ ಮೇರೆಗೆ ತಮಗೆ ಸೂಕ್ತವಾದ ವ್ಯಾಯಾಮವನ್ನು ಆರಿಸಿಕೊಳ್ಳಬೇಕು. ಅಂಥವರು ಬಹಳ ಹೊತ್ತು ನಿಂತುಕೊಂಡೇ ಕೆಲಸದಲ್ಲಿ ಮಗ್ನರಾಗಬಾರದು.

* ಪ್ರಾತಃಕಾಲದಲ್ಲಿ ಸೂರ್ಯ ನಮಸ್ಕಾರವು ಒಂದು ಶ್ರೇಷ್ಠವಾದ ವ್ಯಾಯಾಮ. ಅದೊಂದು ಆಸನಗಳ ಸುಂದರ ಜೋಡಣೆ.

## ಯೋಗಾಭ್ಯಾಸ

ಯಮ ನಿಯಮಗಳನ್ನು ಅಲಕ್ಷಿಸದೆ ಆಸನಾಭ್ಯಾಸವನ್ನು ಬಲ್ಲವರಿಂದ ಕ್ರಮವರಿತು ಸಾಧಿಸಿದರೆ ಆರೋಗ್ಯವನ್ನು ಗಣನೀಯವಾಗಿ ಸುಧಾರಿಸಿಕೊಳ್ಳಬಹುದು. ಜೊತೆಗೆ ಹೃದಯವೂ ಸಬಲಗೊಳ್ಳುವುದು. ಪ್ರಾತಃಕಾಲವು ಸಾಧನೆಗೆ ಶ್ರೇಷ್ಠ. ಖಾಲಿ ಹೊಟ್ಟೆಯಲ್ಲಿ ಸಾಯಂಕಾಲ ಸಮಯದಲ್ಲಿ ಕೂಡ ಮಾಡಬಹುದು. ಹಂತಹಂತವಾಗಿ ಹೆಚ್ಚಿಸಿ ಕೊನೆಗೆ ದಿನಂಪ್ರತಿ ಸುಮಾರು ೪೫-೬೦ ನಿಮಿಷಗಳ ಸಾಧನೆಯು ಸಾಕಾಗುತ್ತದೆ. ಶವಾಸನವು ಹೃದ್ರೋಗಿಗಳಿಗೆ ವಿಶೇಷ ಪ್ರಯೋಜನಕರ.

ಪ್ರಾಣಾಯಾಮವು ಕೂಡ ಬಹು ಪ್ರಯೋಜನಕರ. ನಿಧಾನವೂ ಆಳವೂ ದೀರ್ಘವೂ ಆದ ರೇಚಕ (ಪ್ರಾಣವಾಯುವನ್ನು ಹೊರಗೆ ಬಿಡುವ ಕ್ರಿಯೆ) ಮತ್ತು ಪೂರಕ (ಒಳಗೆ ತೆಗೆದುಕೊಳ್ಳುವ ಕ್ರಿಯೆ)ವನ್ನು ಅನುಲೋಮ ವಿಲೋಮ, ನಾಡಿಶೋಧನ ಕ್ರಮಗಳಿಂದ ಮೊದಲು ೩-೬ ತಿಂಗಳುಗಳಷ್ಟು ಕಾಲ ಸಾಧನೆಯನ್ನು ಮಾಡಬೇಕು. ಈ ಪಂಚಾಂಗದ ಆಧಾರದಲ್ಲಿ ಮುಂದೆ ಕುಂಭಕ (ಪ್ರಾಣ ವಾಯುವನ್ನು ಒಳಗೆ ತಡೆ ಹಿಡಿಯುವುದು) ಸೇರಿಸಿ ಇತರೇ ಪ್ರಾಣಾಯಾಮ ಕ್ರಮಗಳನ್ನು ಬಂಧತ್ರಯ (ಜಾಲಂಧರ, ಉಡ್ಡಿಯಾನ, ಮೂಲ) ಯುಕ್ತವಾಗಿ ಹಂತಹಂತವಾಗಿ ಸಾಧಿಸಬೇಕು. ಈ ಸಾಧನೆಗೆ ಯೋಗ್ಯ ಗುರುವಿನ ಮಾರ್ಗ-

ದರ್ಶನ ಅತ್ಯಗತ್ಯ. ಎಂದೂ ಶಕ್ತಿ ಮೀರಿ ಸಾಧನೆ ಮಾಡಬಾರದು.

## ಧೂಮಪಾನ

ಧೂಮಪಾನ ಮಾಡುವವರಲ್ಲಿ ಹೃದಯಾಘಾತವು ಇತರರಿಗಿಂತ ೩ ಪಾಲು ಜಾಸ್ತಿಯಾಗಿರುತ್ತದೆಂದೂ ಹೃದಯಾಘಾತದಿಂದ ಸಾವಿಗೀಡಾಗುವ ಧೂಮಪಾನಿಗಳ ಸಂಖ್ಯೆ ಬೇರೆಯವರಿಗಿಂತ ೬ ಪಾಲು ಅಧಿಕವಾಗಿರುತ್ತದೆ ಎಂದೂ ಸಮೀಕ್ಷೆಯೊಂದರಿಂದ ತಿಳಿದು ಬಂದಿರುತ್ತದೆ.

ಧೂಮಪಾನದ ಹೊಗೆಯಲ್ಲಿ ನಿಕೋಟಿನ್, ಕಾರ್ಬನ್ ಮೊನೋಕ್ಸೈಡ್ ಮುಂತಾಗಿ ಸುಮಾರು ೨೫೦ ರಾಸಾಯನಿಕ ದ್ರವ್ಯಗಳಿದ್ದು, ಅವುಗಳಲ್ಲಿ ಅನೇಕವು ಆರೋಗ್ಯಕ್ಕೆ ಹಾನಿಕರವೆಂದು ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಸಿಗರೇಟು ಅತೀ ಹೆಚ್ಚಿನ ಉಷ್ಣತೆಯಿಂದ ಉರಿಯುವುದರಿಂದ ಅದು 'ಸಿಗಾರ್' ಮತ್ತು 'ಪೈಪ್'ಗಳಿಗಿಂತ ಹೆಚ್ಚು ಹಾನಿಕಾರಕ.

ನಿಕೋಟಿನ್ ರಕ್ತ ಒತ್ತಡ ಮತ್ತು ಹೃದಯದ ಕೆಲಸವನ್ನೂ ಹೃದಯದ ಆಮ್ಲಜನಕದ ಬೇಡಿಕೆಯನ್ನೂ ಹೆಚ್ಚಿಸುವುದು. ಆದರೆ ಹೆಚ್ಚಿನ ಪೂರೈಕೆಗೆ ಸಹಕಾರ ಕೊಡುವುದಿಲ್ಲ. ರಕ್ತನಾಳಗಳ ಒಳಗಿನ ರಕ್ತವು ಹೆಪ್ಪುಗಟ್ಟುವುದಕ್ಕೂ ಕಾರಣವಾಗಿ ಹೃದಯಾಘಾತವನ್ನು ಉಂಟುಮಾಡಬಹುದು.

ಕಾರ್ಬನ್ ಮೊನೋಕ್ಸೈಡ್ ರಕ್ತದಲ್ಲಿಯ ಆಮ್ಲಜನಕದ ಸ್ಥಾನವನ್ನು ಆಕ್ರಮಿಸಿ ರಕ್ತನಾಳಗಳ ಕೋಮಲವಾದ ಒಳ ಪೂರೆಗೆ ಹಾನಿ ಮಾಡಿ. 'ಅಥೆರೋಸ್ಕ್ಲೆರೋಸಿಸ್' ಎಂಬ ರೋಗವು ಶೀಘ್ರ ಆರಂಭವಾಗಲು ಕಾರಣವಾಗಬಹುದು. ಈ ಮೇಲೆ ಹೇಳಿದ ಕಾಯಿಲೆಯು ರಕ್ತನಾಳಗಳ ಒಳ ಪರಿಧಿ ಕಡಿಮೆಗೊಳ್ಳುವುದರಿಂದ ರಕ್ತ ಸಂಚಾರಕ್ಕೆ ಅಡ್ಡಿ ಉಂಟಾಗಿ, ಹೃದಯದ ಸ್ನಾಯುಗಳಿಗೆ ಸಾಕಷ್ಟು ಆಮ್ಲಜನಕ ಸಿಗದೇ ಹೃದಯಾಘಾತ ಸಂಭವಿಸಬಹುದು. ಈ ಎಲ್ಲ ಕಾರಣಗಳಿಂದ ಧೂಮಪಾನಕ್ಕೆ ಶಾಶ್ವತವಾಗಿ ಧಕ್ಕೆ ತರುವ ಹಾಗೂ ಸಮಾಜದಲ್ಲಿ ಆಳವಾಗಿ ಬೇರು ಬಿಟ್ಟಿರುವ ಈ ದುರಭ್ಯಾಸದ ವಿರುದ್ಧ ಒಂದು ಸಮರವೇ ಆಗಬೇಕಾಗಿದೆ. ಸಾಧ್ಯವಾದ ಎಲ್ಲ ವಿಧಾನಗಳಿಂದ ಜನ ಜಾಗೃತಿ ಮೂಡಿಸಿ, ಸ್ವಯಂಪ್ರೇರಣೆಯಿಂದ ಜನರು ಇದರಿಂದ ದೂರವಿರುವುದು ಉತ್ತಮ.

## ಬೊಜ್ಜು ಸಲ್ಲದು

ನಡು ಪ್ರಾಯದಲ್ಲಿ ಒಂದೇ ಸವನೆ ಬೊಜ್ಜು ಬೆಳೆದು ದೇಹದ ತೂಕ ಜಾಸ್ತಿಯಾಗಬಾರದು. ಪ್ರಾಯ ಕಳೆದಂತೆ ಶಕ್ತಿಯಲ್ಲಿ ಕುಂದುತ್ತಿರುವ ಹೃದಯಕ್ಕೆ ಹೆಚ್ಚಿನ ಕೆಲಸದ ಒತ್ತಡ ಬೀಳುವುದರಿಂದ ಅದು ಮತ್ತಷ್ಟು ದುರ್ಬಲಗೊಳ್ಳುವುದು. ಮುದಿ ಎತ್ತಿಗೆ ಹೇರಿದ ಗಾಡಿಯನ್ನು ಏರಿಸಲ್ಲಿ ಎಳೆಯಲು ಕೊಟ್ಟಂತೆ ಆದರ ಪರಿಸ್ಥಿತಿಯಾದೀತು. ಕಾರಣ ವೈದ್ಯರ ಸಲಹೆಯನ್ನು ಪಡೆದು ಬೊಜ್ಜನ್ನು ಕರಗಿಸಿಕೊಳ್ಳಬೇಕು. ಔಷಧಿಗಳಿಗಿಂತ ಆಹಾರ ಸೇವನೆಯನ್ನು ಕಡಿಮೆ ಮಾಡಿ ಲಾಭ ಪಡೆಯುವುದು ಒಳ್ಳೆಯದು. "One third of what you eat makes you live,



the other two thirds make the doctor live" ಎಂಬ ಮಾತು ಸತ್ಯ.

## ಎದೆಗುಂದುವ ಬದಲು…

ಹೃದಯಾಘಾತದಿಂದ ಬದುಕುಳಿದ ಏಳು ಜನ ಮಧ್ಯ ವಯಸ್ಕರ ೧೯೭೩ರಲ್ಲಿ ನಡೆದ ಅಂತಾರಾಷ್ಟ್ರೀಯ ಮಟ್ಟದ ೨೬ ಮೈಲು ೩೮೫ ಗಜಗಳಷ್ಟು ದೂರದ ಮರಾಥನ್ ಓಟದ ಪಂದ್ಯದಲ್ಲಿ ಭಾಗವಹಿಸಿ ಯಶಸ್ವಿಯಾಗಿ ಕೊನೆಯ ಗುರಿಯನ್ನು ತಲಪಿದರು. ಆಘಾತಗೊಂಡ ಹೃದಯವು ಇಷ್ಟೊಂದು ಶಕ್ತಿಯನ್ನು ಮತ್ತೊಮ್ಮೆ ಸಂಪಾದಿಸಲು ಸಾಧ್ಯವಿದೆ ಎಂಬುದಕ್ಕಿದು ಉದಾಹರಣೆ. ಹೃದಯಾಘಾತ ಆದವರಲ್ಲಿ ಕೆಲವರು ೧೦–೧೫ ವರ್ಷಗಳ ಕಾಲ ಬದುಕಿ, ಕೆಲವು ಸಾಧನೆಗಳನ್ನು ಮಾಡಿಸಿ, ತಮ್ಮ ಕರ್ತವ್ಯಗಳನ್ನು ಮುಗಿಸಿ, ಯೋಗ್ಯ ಸಾವನ್ನಪ್ಪಿದ್ದಾರೆ. ಹೃದಯಾಘಾತದಿಂದ ಬದುಕುಳಿದವರು ಎದೆಗುಂದದೆ ಆಶಾಭಾವನೆಯಿಂದ ಬಾಳಲು ಪ್ರಯತ್ನ ಮಾಡಬೇಕು. ಮುಖ್ಯವಾಗಿ ಅವರಲ್ಲಿ

* ರಕ್ತದ ಒತ್ತಡ ಕಾಯಿಲೆ ಇದ್ದಲ್ಲಿ, ಅದರ ಪತೋಟಿ ಅಗತ್ಯ. ಆಹಾರದಲ್ಲಿ ಉಪ್ಪಿನ ಪ್ರಮಾಣ ಕಡಿಮೆ ಇರಬೇಕು.
* ಸಕ್ಕರೆ ಕಾಯಿಲೆ ಇದ್ದಲ್ಲಿ, ರಕ್ತದಲ್ಲಿ ಸಕ್ಕರೆ ಮಟ್ಟ ಏರದಂತೆ ಚಿಕಿತ್ಸೆ ಮತ್ತು ಪಥ್ಯ ಮಾಡಬೇಕು.
* "ಹೈಪರ್ ಲೈಪಿಡೀಮಿಯಾ" ಉಂಟಾಗದಂತೆ ಆಹಾರದಲ್ಲಿ ಕಡಿಮೆ ಜಿಡ್ಡು ಪ್ರಮಾಣವಿರುವಂತೆ ಕೊಡಬೇಕು. ಸೂರ್ಯಕಾಂತಿ ಬೀಜದ ಎಣ್ಣೆ ಸೇವನೆ ಕಡಿಮೆ ಹಾನಿಕರ. ವಿಶೇಷವಾಗಿ ಕೋಳಿ ಮೊಟ್ಟೆ ಒಳ್ಳೆಯದಲ್ಲ. ನೀರುಳ್ಳಿ, ಬೆಳ್ಳುಳ್ಳಿ ಸೇವನೆಯಿಂದ ಉಪಯೋಗವಿದೆ ಎನ್ನಲಾಗಿದೆ.
* ಬೊಜ್ಜು ಇದ್ದವರಲ್ಲಿ ಕಡಿಮೆ 'ಕೆಲೋರಿ' ಆಹಾರ ಅನಿವಾರ್ಯ.
* ಮದ್ಯಪಾನದಿಂದ ದೂರುವಿರುವುದು ಒಳ್ಳೆಯದು.
* ಸಂಸಾರ ಸುಖದಲ್ಲಿ ಮಿತಿಯನ್ನು ಸಾಧಿಸಬೇಕು.
* ಉದ್ವೇಗಕ್ಕೆ ಅವಕಾಶ ಕೊಡದೆ, ಶಾಂತ ಮನೋಭಾವವನ್ನು ಪ್ರಯತ್ನದಿಂದ ರೂಢಿಸಿಕೊಳ್ಳಬೇಕು.
* ದಿನನಿತ್ಯದ ಚಟುವಟಿಕೆಗಳು ಮಿತಮಿತವಾಗಿರಬೇಕು. ಜೊತೆಗೆ ಸಾಕಷ್ಟು ವಿರಾಮವನ್ನೂ ಪಡೆಯಬೇಕು.

## ನೂರು ವರ್ಷ ಬಾಳಬೇಕೆ?

ಹಳ್ಳಿಯೊಂದರ ಕಲುಷಿತವಲ್ಲದ ಶಾಂತ ವಾತಾವರಣ, ಪೌಷ್ಟಿಕ ಆಹಾರ ಸೇವನೆ, ದಿನವಿಡೀ ಶ್ರಮದ ದುಡಿತ ಆಯಾಸದಿಂದ ರಾತ್ರಿಯಲ್ಲಿ ಮೈಮರೆಸುವ ಸುಖ ನಿದ್ರೆಯಿಂದ ಪೂರ್ಣ ಚೇತರಿಕೆ, ಸಂತೋಷದಿಂದ ಕೂಡಿದ ಸಮಾಧಾನದ ಮತ್ತು ತೃಪ್ತಿಕರವಾದ ಜೀವನ—ಆದರೆ ಸಹಜ ಭಾವನೆಗಳಿಗೆ ಸಹಜವಾದ ಪ್ರತಿಕ್ರಿಯೆಯಿಂದ ಸ್ಪಂದಿಸುವ ಯೋಗ್ಯ ಬಾಳ್ವೆ—ಇವುಗಳಿಗೆಲ್ಲ ಹೃದಯವು ಓಗೊಟ್ಟು, ತನ್ನ ಪ್ರಾಮಾಣಿಕತೆಯನ್ನು ನೂರು ವರ್ಷಗಳಾದರೂ—ತೋರಿಸಿ ತಾನು ಶತಾಯುಷಿಯಾಗಿ, ತನ್ನ ವ್ಯಕ್ತಿಯನ್ನೂ ಆ ಗುರಿಗೆ ಮುನ್ನಡೆಸಬಲ್ಲದು. ❁



# ಆ್ಯಂಡ್ರ್ಯೂ ಕಾರ್ನೆಗಿ

## ಕೋಟ್ಯಧೀಶನಾದ ಕೂಲಿಯಾಳು

**ಮುನಿಯಾಲ್ ಗಣೇಶ ಶಣೈ**

ಇತ್ತೀಚೆಗೆ ಒಂದು ಬಗೆಯ ವಿಶೇಷ ಪುಸ್ತಕಗಳು ಅತ್ಯಧಿಕ ಸಂಖ್ಯೆಯಲ್ಲಿ ಮಾರಾಟವಾಗುತ್ತಿವೆ. 'ಸ್ವ-ಅಭಿವೃದ್ಧಿ (ಸೆಲ್ಫ್ ಇಂಪ್ರೂವ್‌ಮೆಂಟ್)' ಎಂಬ ವರ್ಗಕ್ಕೆ ಸೇರುವ ಈ ಕೃತಿಗಳು ಮನುಷ್ಯ ಜೀವನದಲ್ಲಿ ಏನನ್ನು ಬೇಕಾದರೂ ಸಾಧಿಸಬಹುದು ಎಂದು ಹೇಳುವವಷ್ಟೇ ಆಗಿರದೆ ಹೇಗೆ ಸಾಧಿಸಬಹುದು ಎನ್ನುವುದನ್ನೂ ಹೇಳುತ್ತೇನೆ. ಬಾಳಿಗೆ ಬೆಳಕು ಬೀರುವ ಸಾಹಿತ್ಯ ಕೃತಿಗಳಿಂದ ನಾವು ಬದುಕಿನಲ್ಲಿ ಅತ್ಯಂತ ಆಶಾವಾದಿಗಳಾಗಬಹುದು. ಮಾರಿಸ್, ಪೆರಿ, ನಾರ್ಮನ್ ವಿನ್ಸೆಂಟ್ ಪೀಲೆ, ಡೇಲ್ ಕಾರ್ನೆಗಿ, ಬ್ರಯಾನ್, ಆಡಮ್ಸ್ ಮೊದಲಾದ ಲೇಖಕರು ಬರೆದ ಕೃತಿಗಳು ಸಾವಿರಾರು ಪ್ರತಿಗಳಲ್ಲಿ ಮುದ್ರಿತವಾಗಿವೆ. ಈ ತರಹದ ಕೃತಿಗಳಲ್ಲಿ ಅತ್ಯಂತ ಜನಪ್ರಿಯವಾದುದೆಂದರೆ ನೆಪೋಲಿಯನ್ ಹಿಲ್ ಬರೆದ 'Think and Grow Rich' ಈ ಪುಸ್ತಕದಲ್ಲಿ ಅಡಕವಾಗಿರುವ ಸೂತ್ರಗಳನ್ನು ಬಳಸಿಕೊಂಡು ಕ್ಲೆಮೆಂಟ್ ಸ್ಟೋನ್ ಎಂಬಾತ ಕೇವಲ ನೂರು ಡಾಲರ್‌ಗಳಿಂದ ವ್ಯಾಪಾರ ಆರಂಭಿಸಿ, ಕೊನೆಗೆ ವರ್ಷಕ್ಕೆ ಮೂರೂವರೆ ಕೋಟಿ ಡಾಲರ್ ತರುವ ಸಂಸ್ಥೆಯ ಮುಖ್ಯಸ್ಥನಾದ!

ಈ ಎಲ್ಲ ಕೃತಿಗಳ ರಚನೆಯ ಹಿನ್ನೆಲೆಯಲ್ಲಿ ಆ್ಯಂಡ್ರ್ಯೂ ಕಾರ್ನೆಗಿಯ ಪ್ರಭಾವ ಕಾಣುತ್ತದೆ. ಉದಾಹರಣೆಗೆ ನೆಪೋಲಿಯನ್ ಹಿಲ್ ತನ್ನ ಜೀವಮಾನ ಪೂರ್ತಿ ಆ್ಯಂಡ್ರ್ಯೂ ಕಾರ್ನೆಗಿಯ ಯಶಸ್ಸಿನ ಬಗ್ಗೆ ಚಿಂತಿಸಿ, ಕಾರ್ನೆಗಿಯ ಸಿದ್ಧಾಂತಗಳನ್ನು ಜನಪ್ರಿಯಗೊಳಿಸಲು ಯತ್ನಿಸಿದ. ಬಡ ನೇಕಾರನ ಮಗನಾಗಿ ಹುಟ್ಟಿ ಅಮೇರಿಕದ ಕೈಗಾರಿಕಾ ಕ್ಷೇತ್ರವನ್ನು ವಿಶಾಲಗೊಳಿಸಿದನಷ್ಟೇ ಅಲ್ಲದೆ ಹಣದ ಬಗೆಗಿನ ನಮ್ಮ ದೃಷ್ಟಿಕೋನವನ್ನು ವಿಶಾಲಗೊಳಿಸಿದ್ದಾನೆ ಆ್ಯಂಡ್ರ್ಯೂ ಕಾರ್ನೆಗಿ.

## ಸುಡುವ ಬಯಕೆ

ಆ್ಯಂಡ್ರ್ಯೂ ಕಾರ್ನೆಗಿ ಹುಟ್ಟಿದ್ದು ಸ್ಕಾಟ್ಲೆಂಡಿನ ಡನ್‌ಫರ್ಮ್‌ಲೈನ್ ನಗರದಲ್ಲಿ. ೧೮೩೫ರ ನವೆಂಬರ್ ೨೫ ರಂದು. ತಂದೆ ವಿಲಿಯಂ ಕಾರ್ನೆಗಿ ಪ್ರಸಿದ್ಧ ನೇಕಾರ. ಕೈಗಾರಿಕಾ ಕ್ರಾಂತಿಯಿಂದಾಗಿ ಗೃಹ ನೇಯ್ಗೆ ಅವನತಿಯ ದಾರಿ ಹಿಡಿದು ದಿಕ್ಕು ತಪ್ಪಿದ, ಕಾರ್ನೆಗಿ ಕುಟುಂಬ ಇತರರ ಸಲಹೆ, ಒತ್ತಾಯ, ನೆರವಿನಿಂದ ಅಮೇರಿಕ ದೇಶಕ್ಕೆ ವಲಸೆ ಹೋಗುವಾಗ ಆ್ಯಂಡ್ರ್ಯೂಗೆ ಹದಿಮೂರು ವರ್ಷ.

ಸ್ವರ್ಣಭೂಮಿ ಅಮೇರಿಕದಲ್ಲಿ ಕಾರ್ನೆಗಿ ಕುಟುಂಬ ಎದುರಿಸಿದ ಕಷ್ಟಗಳು ಅನೇಕ. ವಿಲಿಯಂ ಇಲ್ಲೂ ನೇಯ್ಗೆ ಆರಂಭಿಸಿದ. ಮೇಜಿನ ವಸ್ತ್ರ ಮೊದಲಾದುವನ್ನು ಮಾಡಿ ಮನೆಮನೆಗೆ ಒಯ್ದು ಮಾರಲು ಪ್ರಯತ್ನಿಸಿ ವಿಫಲನಾದ. ಆ್ಯಂಡ್ರ್ಯೂನ ತಾಯಿ ಮಾರ್ಗರೇಟ್ ಮನೆಯಲ್ಲೇ ಪಾದರಕ್ಷೆ ತಯಾರಿಸಿ ವಾರಕ್ಕೆ ನಾಲ್ಕು ಡಾಲರ್ ಸಂಪಾದಿಸುತ್ತಿದ್ದಳು.

ಆ್ಯಂಡ್ರ್ಯೂ ಒಂದು ಕಾರ್ಖಾನೆಯಲ್ಲಿ ಕೆಲಸಕ್ಕೆ ಸೇರಿದ. ವಾರಕ್ಕೆ ಒಂದು ಡಾಲರ್ ಇಪ್ಪತ್ತು ಸೆಂಟ್ ಸಂಬಳ (ಹತ್ತು ರೂ.) ಸ್ವಲ್ಪ ಕಾಲದಲ್ಲೇ ಪಿಟ್ಸ್‌ಬರ್ಗಿನಲ್ಲಿ ತಂತಿ ಸುದ್ದಿ ವಾಹಕನಾಗಿ ಕೆಲಸ ಆರಂಭಿಸಿದ. ಕಾರ್ಯಕ್ಷಮತೆಯಿಂದ, ನಿಷ್ಠಾವಂತ ದುಡಿಮೆಯಿಂದಾಗಿ ತೀವ್ರಗತಿಯಲ್ಲಿ ಬಡ್ತಿಗಳು ದೊರೆತವು. ಮೇಲಧಿಕಾರಿಯೊಬ್ಬರ ಸಲಹೆಯಂತೆ ಆಡಂಸ್ ಎಕ್ಸ್‌ಪ್ರೆಸ್ ಕಂಪೆನಿಯಲ್ಲಿ ಆ್ಯಂಡ್ರ್ಯೂ ೫೦೦ ಡಾಲರ್ ಹೂಡಿ ಪಾಲು ಪತ್ರ ಖರೀದಿಸಿದ.

ಕೂಲಿ ಕೆಲಸ ಮಾಡುವಾಗ ಆ್ಯಂಡ್ರ್ಯೂಗೆ ಒಮ್ಮೆ ವೇತನ ಹೆಚ್ಚಾಯಿತು. ಹೆಚ್ಚಿಗೆ ಬಂದ ನಾಣ್ಯವನ್ನು ಕೈಲಿ ಹಿಡಿದು ಮಲಗಿದ ಆ್ಯಂಡ್ರ್ಯೂ ತಮ್ಮ ಥಾಮಸ್‌ಗೆ ಹೇಳಿದ, "ಟಾಂ. ನಾವಿಬ್ಬರೂ ಮುಂದೆ ಒಂದು ದಿನ ನಮ್ಮದೇ ಕಾರ್ಖಾನೆಯೊಂದನ್ನು ಆರಂಭಿಸೋಣ!"

ದೊಡ್ಡ ಉದ್ಯಮಿಯಾಗುವ ಆಸೆ ಆ್ಯಂಡ್ರ್ಯೂನಲ್ಲಿ ಕೇವಲ ಒಂದು ಆಸೆಯಾಗಿರದೆ ಸುಡುವ ಬಯಕೆಯಾಗಿತ್ತು. ಹಗಲಿರುಳೂ ಅದೇ ಯೋಜನೆ, ಗುರಿ ಮುಟ್ಟಲು ಸತತವೂ ಚಿಂತನೆ.

## ಯಶಸ್ಸಿನ ಶಿಖರಕ್ಕೆ

ಆಡಂಸ್ ಎಕ್ಸ್‌ಪ್ರೆಸ್‌ನಲ್ಲಿ ಹೂಡಿದ್ದ ಬಂಡವಾಳದಿಂದ ಆ್ಯಂಡ್ರ್ಯೂಗೆ ಸಾಕಷ್ಟು ಲಾಭ ಬಂದಿತು. ಜೊತೆಗೆ ಆತ ಸ್ವತಃ ಸಾಕಷ್ಟು ಹಣವನ್ನು ಉಳಿಸಿ ಇಟ್ಟಿದ್ದ. ತನ್ನ ನೆರೆಮನೆಯ ಶ್ರೀಮಂತ ಉದ್ಯಮಿ ವಿಲಿಯಂ ಕೋಲ್‌ಮನ್ ಜೊತೆಗೂಡಿ ಆ್ಯಂಡ್ರ್ಯೂ ೪೦,೦೦೦ ಡಾಲರ್ ಕೊಟ್ಟು ಪೆನ್ಸಿಲ್ವೇನಿಯಾದ ತೈಲಭರಿತ ಜಮೀನನ್ನು ಖರೀದಿಸಿದ. ಕೇವಲ ಮೂರು–ನಾಲ್ಕು ವರ್ಷಗಳಲ್ಲಿ ಈ ನೆಲದಿಂದ ಪೆಟ್ರೋಲಿಯಂ ಚಿಮ್ಮಿದಾಗ ನೆಲದ ಬೆಲೆ ಐವತ್ತು ಲಕ್ಷ ಡಾಲರ್‌ಗಳಿಗೆ ಏರಿತ್ತು! ಆ್ಯಂಡ್ರ್ಯೂ ಮತ್ತು ಕೋಲಮನ್ ತಮ್ಮ ಮಿತ್ರರನ್ನು ಸಂಘಟಿಸಿ ಒಂದು ತೈಲ ಸಂಸ್ಥೆಯನ್ನು ಆರಂಭಿಸಿದರು. ಈ ಸಂಸ್ಥೆಯೂ ತೀವ್ರವಾಗಿ ಬೆಳೆಯಿತು; ರಾಶಿ ರಾಶಿ ಆದಾಯ ತಂದಿತು. ಆ್ಯಂಡ್ರ್ಯೂ ಅನೇಕ ಕೈಗಾರಿಕೆಗಳ ಪಾಲು ಪತ್ರ ಕೊಂಡ. ಇತರ ನಾಲ್ಕು ಜನರೊಡನೆ ಸೇರಿ, ತಲಾ ೧೨೫೦ ಡಾಲರ್ ಹೂಡಿ 'ಕೀ ಸ್ಟೋನ್ ಸೇತುವೆ ನಿರ್ಮಾಣ ಸಂಸ್ಥೆ' ಆರಂಭಿಸಿದ. ಅಮೇರಿಕದಲ್ಲಿ ೧೮೬೩ರಲ್ಲಿ ಆದಾಯ ತೆರಿಗೆ ಪದ್ಧತಿ ಆರಂಭವಾಯಿತು. ಆ ವರ್ಷ ಆ್ಯಂಡ್ರ್ಯೂನ ಆದಾಯ ೪೭,೦೦,೦೦೦ ಡಾಲರ್ ಮೀರಿತ್ತು. ಆಗ ಆತನ ವಯಸ್ಸು ೨೭ ವರ್ಷ! ಮರುವರ್ಷ ಆ್ಯಂಡ್ರ್ಯೂ ಸೈಕ್ಲೋಪ್ಸ್ ಕಬ್ಬಿಣ–ಕಾರ್ಖಾನೆ ಆರಂಭಿಸಿದಾಗ ಆ್ಯಂಡ್ರ್ಯೂ ತನಗರಿವಿಲ್ಲದೆಯೇ ಅಮೇರಿಕದ ಅತಿ ದೊಡ್ಡ ಉಕ್ಕಿನ ಉದ್ಯಮಕ್ಕೆ ಗಟ್ಟಿ ಅಡಿಪಾಯ ಹಾಕಿದಂತಾಯಿತು. ಆ್ಯಂಡ್ರ್ಯೂ ಪಾಲುದಾರನಾಗಿದ್ದ ಮತ್ತೊಂದು ಸಂಸ್ಥೆ 'ಕ್ಲೋಮನ್ ಅಂಡ್

ಕಂಪೆನಿ'ಯ ಪಾಲುದಾರರ ಅಭಿಪ್ರಾಯದಂತೆ ಎರಡೂ ಸಂಸ್ಥೆಗಳು ವಿಲೀನವಾಗಿ 'ಯೂನಿಯನ್ ಕಬ್ಬಿಣ ಉದ್ಯಮ' ಆರಂಭವಾಯಿತು. ೧೮೮೧ರಲ್ಲಿ ಆ್ಯಂಡ್ರ್ಯೂ ತನ್ನ ತಮ್ಮ ಥಾಮಸ್‌ನ ಜೊತೆಗೂಡಿ ಐವತ್ತು ಲಕ್ಷ ಡಾಲರ್ ಬಂಡವಾಳ ಹೂಡಿ 'ಕಾರ್ನೆಗಿ ಬ್ರದರ್ಸ್ ಅಂಡ್ ಕಂಪನಿ' ಆರಂಭಿಸಿದಾಗ, ಹಿಂದೆಂದೋ ಕಟ್ಟಿದ್ದ ಕನಸು ನನಸಾಯಿತು. ಹಲವಾರು ಕಬ್ಬಿಣ ಕಾರ್ಖಾನೆಗಳು, ಕುಲುಮೆಗಳು ಈ ಸಂಸ್ಥೆಯಲ್ಲಿ ವಿಲೀನವಾದವು.

## ಪ್ರೇಮದ ಸುಳಿಯಲ್ಲಿ

ಸದಾಕಾಲ ಉದ್ಯಮದ ಬಗೆಗೇ ಆ್ಯಂಡ್ರ್ಯೂ ಯೋಚಿಸುತ್ತಿರಲಿಲ್ಲ. ಪುಸ್ತಕಗಳನ್ನು ಓದುವುದು, ಸಂಗೀತ ಕೇಳುವುದು, ಮ್ಯೂಸಿಯಂಗಳಿಗೆ ಭೇಟಿ ಕೊಡುವುದು, ಪ್ರವಾಸ ಮಾಡುವುದು ಮೊದಲಾದ ಎಲ್ಲಾ ಚಟುವಟಿಕೆಗಳಲ್ಲೂ ಆತ ನಿರತನಾಗಿರುತ್ತಿದ್ದ. ಅನೇಕ ಸುಂದರ ಯುವತಿಯರಿಂದ ಆಕರ್ಷಿತನಾಗಿದ್ದ. ಆ್ಯಂಡ್ರ್ಯೂ ಕೊನೆಗೆ ಲೂಯಿ ವೈಟ್‌ಫೀಲ್ಡ್‌ಳ ಪ್ರೇಮದಲ್ಲಿ ಸಿಲುಕಿದ. ಆಕೆ ನ್ಯೂಯಾರ್ಕಿನ ಭಾರೀ ಉದ್ಯಮಿಯೊಬ್ಬಳ ಮಗಳು. ಲೂಯಿಗೂ ಆ್ಯಂಡ್ರ್ಯೂನ ಮೇಲೆ ಇಷ್ಟವಿದ್ದರೂ, ಆತನ ಜನಪ್ರಿಯತೆಯನ್ನು ಕಂಡ ಆಕೆ ಮದುವೆಗೆ ಒಪ್ಪಲಿಲ್ಲ. ಆ್ಯಂಡ್ರ್ಯೂ ಒಬ್ಬ ಸಾರ್ವಜನಿಕ ವ್ಯಕ್ತಿಯೇ ವಿನಾ ಒಬ್ಬ ಒಳ್ಳೆಯ ಗಂಡನಾಗಲು ಸಾಧ್ಯವಿಲ್ಲವೆಂದು ಆಕೆಯ ಯೋಚನೆ. ಜೊತೆಗೆ ಆತನ ಯಶಸ್ಸಿಗೆ ತಾನೊಂದು ಮುಳ್ಳಾಗುವ ಸಾಧ್ಯತೆಯಿದೆಯೆಂದು ಅವಳ ಕಲ್ಪನೆ.

೧೮೮೬ರಲ್ಲಿ ಕಾರ್ನೆಗಿ ಕುಟುಂಬ ವಿಷಮ ಶೀತ ಜ್ವರಕ್ಕೆ ತುತ್ತಾಯಿತು. ಸತತ ಶುಶ್ರೂಷೆಯಿಂದಲೂ ಪ್ರಯೋಜನವಾಗಲಿಲ್ಲ. ಆ್ಯಂಡ್ರ್ಯೂನ ಜೀವವಾಗಿದ್ದ ತಾಯಿ ಮರಣವನ್ನಪ್ಪಿದಳು ತನ್ನೊಂದಿಗೇ ಇಷ್ಟು ಕಾಲ ಹೆಜ್ಜೆ ಇಟ್ಟು, ಉದ್ಯಮದ ಯಶಸ್ಸಿನಲ್ಲಿ ಪಾಲುದಾರನಾಗಿದ್ದ ತಮ್ಮ ಥಾಮಸ್ ಸಹ ರೋಗಕ್ಕೆ ಬಲಿಯಾಗಿ ಅಸು ನೀಗಿದ. ಜಗತ್ತೆಲ್ಲ ಅಂಧಕಾರದಲ್ಲಿ ಮುಳುಗಿದಂತೆ, ಅತ್ಯಂತ ನಿರಾಶೆಯಲ್ಲಿ ಆಂಡ್ರ್ಯೂ ಕೂತಿದ್ದಾಗ ಲೂಯಿ ವೈಟ್‌ಫೀಲ್ಡ್ ಬೆಳಕಾಗಿ ಬಂದಳು. ಪ್ರೀತಿಯ ಧಾರೆಯನ್ನೆರೆದಳು. ಮರು

### ಮಹಾಮಾನವ

ಆ್ಯಂಡ್ರ್ಯೂ ಕಾರ್ನೆಗಿ ಕುದುರೆ ಹತ್ತಿ ಅಂಗಡಿಗಳಿಗೆ ಹೋದಾಗ, ಹೊರಗೆ ಕುದುರೆ ಹಿಡಿದು ನಿಲ್ಲಲು ಒಬ್ಬ ಹುಡುಗ ಬರುತ್ತಿದ್ದ. ಅವನ ಹೆಸರು ಚಾರ್ಲ್ಸ್ ಷ್ವಾಬ್. ಈತ ನಂತರ ಚಿಲ್ಲರೆ ಅಂಗಡಿಯೊಂದರ ಕೆಲಸಕ್ಕೆ ಸೇರಿದ. ಆ್ಯಂಡ್ರ್ಯೂನ ವ್ಯಕ್ತಿತ್ವದಿಂದ ತನ್ನ ಗುರಿಯನ್ನು ನಿರ್ಧರಿಸಿದ ಚಾರ್ಲ್ಸ್ ಕೊನೆಗೆ ಆ್ಯಂಡ್ರ್ಯೂನ ಕಚೇರಿಯಲ್ಲಿ ಕೆಲಸಕ್ಕೆ ಸೇರಿಸಿದ. ಈ ಹುಡುಗನಲ್ಲಿ ಅಡಗಿರುವ ಬುದ್ಧಿಕೌಶಲವನ್ನು ಗಮನಿಸಿದ ಆ್ಯಂಡ್ರ್ಯೂ ಎಲ್ಲ ಬಗೆಯ ನೆರವನ್ನೂ ನೀಡಿದ. ಕೆಲ ವರ್ಷಗಳಲ್ಲೇ ಷ್ವಾಬ್ ಅಮೇರಿಕದ ಕೋಟ್ಯಧೀಶರಲ್ಲಿ ಒಬ್ಬನಾದ.

ದೀಪ ಹಲವಾರು ದೀಪಗಳಿಗೆ ಜೀವ ತುಂಬುವಂತೆ ಆ್ಯಂಡ್ರ್ಯೂ ಎಷ್ಟೋ ಯುವಕರನ್ನು ಕೈ ಹಿಡಿದು ಮೇಲೆತ್ತಿದ್ದ. ನಿಗರ್ವಿಯಾಗಿದ್ದ ಆ್ಯಂಡ್ರ್ಯೂ ಎಂದೂ ಶ್ರೀಮಂತಿಕೆಯ ಅಹಂಕಾರವನ್ನು ಮೈಗೂಡಿಸಿಕೊಳ್ಳಲಿಲ್ಲ. ಚಾರ್ಲ್ಸ್ ಷ್ವಾಬ್ ಭವ್ಯವಾದ ಮನೆಯನ್ನು ಕಟ್ಟಿಸಿದಾಗ ಆ್ಯಂಡ್ರ್ಯೂ ತನ್ನನ್ನು ನೋಡಲು ಬಂದ ಮಿತ್ರರಿಗೆ ಹೇಳುತ್ತಿದ್ದ: "ಚಾರ್ಲಿಯ ಸುಂದರ ಮನೆ ನೋಡಿದಿರಾ? ಅದರೊಡನೆ ಹೋಲಿಸಿದಾಗ ನನ್ನ ಮನೆ ಗುಡಿಸಲಿನಂತಿದೆ!"

ವರ್ಷ ಇಬ್ಬರೂ ಸತಿಪತಿಗಳಾದರು.

## ಕೊಡುಗೈ ದೊರೆ

"ಸಂಪತ್ತು ಲಕ್ಷಾಧೀಶ್ವರನದಲ್ಲ. ಅವನು ಅದರ ಒಡೆಯನೆಂದು ಅರ್ಥವಲ್ಲ. ಜನರಿಗೆಂದೇ ಇರುವ ಹಣ, ಅವರು ನಮ್ಮ ಮೇಲಿಟ್ಟಿರುವ ನಂಬಿಕೆಯಿಂದಾಗಿ ನಮ್ಮ ಕೈಲಿದೆ ಎಂದು ಭಾವಿಸಬೇಕು." ಎಂದು ಆ್ಯಂಡ್ರ್ಯೂ ಬಲವಾಗಿ ನಂಬಿದ್ದ. ಹಣವನ್ನು ಗಳಿಸುವುದು ಮತ್ತು ಗಳಿಸಿದ ಹಣವನ್ನು ಸಾರ್ವಜನಿಕರ ಹಿತಕ್ಕಾಗಿ ಬಳಸುವ ಬಗ್ಗೆ ಹೊಸ ಸಿದ್ಧಾಂತವನ್ನು ಆ್ಯಂಡ್ರ್ಯೂ ಮಂಡಿಸಿದ. ಗಮನಾರ್ಹ ಸಂಗತಿಯೆಂದರೆ ತಾನು ಹೇಳಿದ್ದನ್ನು ಕೃತಿಗಿಳಿಸಿದ.

ಆ್ಯಂಡ್ರ್ಯೂ ವಿವಿಧ ಸಂಸ್ಥೆಗಳಿಗೆ, ವಿಶ್ವವಿದ್ಯಾನಿಲಯಗಳಿಗೆ ನೀಡಿದ ದಾನದ ಮೊತ್ತವು ೧೭೫ ಕೋಟಿ ರೂಪಾಯಿಗಳು! ಈತ ಆರಂಭಿಸಿದ ಅನೇಕ ನಿಧಿಗಳು ಇಂದಿಗೂ ಕಾರ್ಯ ನಿರ್ವಹಿಸುತ್ತಿವೆ. ನಿವೃತ್ತರಾದ ಅಮೇರಿಕದ ಅಧ್ಯಕ್ಷರಿಗೂ ಗೌರವಧನ ನೀಡುವ ಯೋಜನೆಯನ್ನು ಆ್ಯಂಡ್ರ್ಯೂ ಆರಂಭಿಸಿದ.

ಸ್ವತಃ ಕಾಲೇಜಿನ ಮೆಟ್ಟಿಲನ್ನು ಹತ್ತಿರದಿದ್ದ ಆ್ಯಂಡ್ರ್ಯೂಗೆ ಪುಸ್ತಕಗಳೆಂದರೆ ಬಹಳ ಒಲವು. ಸಾರ್ವಜನಿಕ ಬಳಕೆಗಾಗಿ ಪ್ರಪಂಚದಾದ್ಯಂತ ೩೦೦೦ ಗ್ರಂಥಾಲಯಗಳನ್ನು ಆ್ಯಂಡ್ರ್ಯೂ ಆರಂಭಿಸಿದ.

೧೯೦೧ರಲ್ಲಿ ಉದ್ಯಮ ಲೋಕದಿಂದ ನಿವೃತ್ತನಾದ ಆ್ಯಂಡ್ರ್ಯೂ ಉಳಿದ ಬದುಕನ್ನೆಲ್ಲ ಸಾರ್ವಜನಿಕ ಹಿತಕಾರ್ಯಗಳಿಗಾಗಿ ವಿನಿಯೋಗಿಸಿದ. ದೇಶದ ಅಧ್ಯಕ್ಷರನ್ನು ಭೇಟಿಯಾಗಿ ದೇಶದ, ಪ್ರಪಂಚದ ಅಭಿವೃದ್ಧಿಗಾಗಿ ಚರ್ಚೆ ನಡೆಸುತ್ತಿದ್ದ ಆ್ಯಂಡ್ರ್ಯೂ ವಿಶ್ವಶಾಂತಿಗಾಗಿ ಬಹಳಷ್ಟು ದುಡಿದ ವ್ಯಕ್ತಿ. ಯುದ್ಧ, ಹಿಂಸೆಗಳ ಬಗೆಗೆ ಬಹಳ ವಿರೋಧಿಯಾಗಿದ್ದ ಆ್ಯಂಡ್ರ್ಯೂ ವಿಶ್ವಶಾಂತಿಗಾಗಿ ಗಂಭೀರ ಪ್ರಯತ್ನ ನಡೆಸಿದಾಗ ಕುಹಕವಾಡಿದವರು ಎಷ್ಟೋ ಮಂದಿ. ೧೯೧೯ರ ಆಗಸ್ಟ್ ೧೧ ರಂದು ಆ್ಯಂಡ್ರ್ಯೂ ಕಾರ್ನೆಗಿ ನಿಧನನಾದಾಗ ಒಬ್ಬ ಬೃಹತ್ ಕೈಗಾರಿಕೋದ್ಯಮಿಯಷ್ಟೇ ಸತ್ತಂತಾಗಲಿಲ್ಲ; ಒಬ್ಬ ಮಹಾದಾನಿ, ಮಾನವತಾವಾದಿ ಕಣ್ಮರೆಯಾದಂತಾಯಿತು. ✡

---

ಸದನದ ಕಲಾಪಗಳು ಟೀವಿಯಲ್ಲಿ?

— ಸುಧಿ

ರಮೂನಾಥ

"ಹಾಗಾದರೆ ನಾವೂ ಸದನದ ಕಲಾಪದಲ್ಲಿ ಭಾಗವಹಿಸಬೇಕಾಗುತ್ತದಲ್ಲ!"

# ಬರಲಿದ್ದಾರೆ ಅಗೋಚರ ಗಡಿ ಸಂರಕ್ಷಕರು!

**ಗಿರಿಜಾಶಂಕರ ಜಿಂಗಳೆ**

ಸೂಪರ್ ಸಾನಿಕ್ ವಿಮಾನಗಳಲ್ಲಿ ಸಂಚರಿಸಿ ಖಂಡಾಂತರಗಳನ್ನು ಕೆಲವೇ ಗಂಟೆಗಳ ಅವಧಿಯಲ್ಲಿ ದಾಟಬಲ್ಲ ಆಧುನಿಕ ಮಾನವ ವಿಮಾನ ನಿಲ್ದಾಣದಿಂದ ತನ್ನ ಮನೆ ಸೇರಲು ಸುಮಾರು ಅಷ್ಟೇ ಸಮಯ ತೆಗೆದುಕೊಳ್ಳುತ್ತಿರುವುದು ಇಂದಿನ ವಿಪರ್ಯಾಸಗಳಲ್ಲೊಂದು. ದೇಶದ ರಾಜಕೀಯ-ಆರ್ಥಿಕ-ಸಾಮಾಜಿಕ ದೃಷ್ಟಿಕೋನದಿಂದ ಅನಪೇಕ್ಷಿತ ವ್ಯಕ್ತಿಗಳು ದೇಶದ ಒಳಗೆ ಹೊರಗೆ ಹೋಗುತ್ತಿಲ್ಲವೆಂದು ಖಾತರಿಪಡಿಸಿಕೊಳ್ಳಲು ರಹದಾರಿ ಅಧಿಕಾರಿಗಳು ನಡೆಸುವ ಕೂಲಂಕಷ ರಹದಾರಿ ಪತ್ರ ಪರಿಶೀಲನೆ ಈಗಾಗುತ್ತಿರುವ ವಿಳಂಬಕ್ಕೆ ಪ್ರಮುಖ ಕಾರಣ. ಈ ವಿಳಂಬ ಗತಕಾಲದ ಘಟನೆಯಾಗುವ ದಿನಗಳು ಶೀಘ್ರದಲ್ಲೇ ಬರಲಿವೆ.

ವಿದ್ಯಾಭ್ಯಾಸ, ಉದ್ಯೋಗ, ವಲಸೆ, ವ್ಯಾಪಾರ ಸಂಬಂಧ, ರಾಜಕೀಯ ಸಂಪರ್ಕ ಮುಂತಾದ ಅನೇಕ ಕಾರಣಗಳಿಂದ ವಿಮಾನದಲ್ಲಿ ಪ್ರಯಾಣಿಸುವವರ ಸಂಖ್ಯೆ ವರ್ಷಂಪ್ರತಿ ಹೆಚ್ಚುತ್ತಿದೆ. ಕಳೆದ ನಲವತ್ತು ವರ್ಷಗಳಲ್ಲಿ ಪ್ರಪಂಚದಾದ್ಯಂತ ಅನೇಕ ವಿಮಾನ ನಿಲ್ದಾಣಗಳನ್ನು ಕಟ್ಟಲಾಗಿದೆ, ಮತ್ತೆ ಕೆಲವನ್ನು ವಿಸ್ತರಿಸಲಾಗಿದೆ. ಮುಂಬರುವ ದಿನಗಳಲ್ಲಿ ಇನ್ನೂ ಅನೇಕ ವಿಮಾನ ನಿಲ್ದಾಣಗಳ ನಿರ್ಮಾಣ ಹಾಗೂ ವಿಸ್ತಾರಗಳು ವೆಚ್ಚ, ಹಾಗೂ ಪರಿಸರ ಅಡೆತಡೆಗಳಿಂದ ಸಾಧ್ಯವಾಗದು. ಹೀಗಾಗಿ ವಿಮಾನ ನಿಲ್ದಾಣಗಳಲ್ಲಿ ಈಗ ಉಂಟಾಗುತ್ತಿರುವ ಜನ ದಂಗುಳಿಯನ್ನು ನಿವಾರಿಸುವ ಶೀಘ್ರ ಕ್ರಮವನ್ನು ಸೂಚಿಸಲು ಅಂತಾರಾಷ್ಟ್ರೀಯ ನಾಗರಿಕ ವಿಮಾನಯಾನ ಸಂಸ್ಥೆ ೧೯೬೮ರಷ್ಟು ಹಿಂದೆಯೇ ತಜ್ಞರ ನೆರವನ್ನು ಕೋರಿತ್ತು. ಭಾರತ, ರಶಿಯ, ಆಸ್ಟ್ರೇಲಿಯಾ, ಇಂಗ್ಲೆಂಡ್, ಅಮೇರಿಕ ಮುಂತಾದ ೧೨ ರಾಷ್ಟ್ರಗಳ ಪರಿಣಿತರು ಈ ಗೊಂದಲಮಯ ಪರಿಸ್ಥಿತಿಯ ನಿವಾರಣೆಗೆ ರಹದಾರಿ ಪತ್ರಗಳ ಪರಿಶೀಲನೆಯೇ ಸೂಕ್ತವಾದ ಕ್ರಮವೆಂದು ಸೂಚಿಸಿದರು. ರಹದಾರಿ ಪತ್ರಗಳ ಪರಿಶೀಲನೆ ಈಗ ಮಾನವ ಸಾಮರ್ಥ್ಯದ ಪರಮಾವಧಿಯನ್ನು ತಲುಪಿರುವುದರಿಂದ, ಇನ್ನೂ ಹೆಚ್ಚಿನ ವೇಗವನ್ನು ಗಣಕ ಯಂತ್ರಗಳಿಂದ ಮಾತ್ರ ಸಾಧಿಸಬಹುದು ಎಂದು ಸಲಹೆ ಮಾಡಿದರು.

ನೂತನ ರಹದಾರಿ ಪತ್ರಗಳನ್ನು ಗಣಕ ಯಂತ್ರಗಳು ಹಲವಾರು ದೇಶಗಳಲ್ಲಿ ವೈವಿಧ್ಯ ವಾತಾವರಣ-ಭಾಷಾ ಪರಿಸರಗಳಲ್ಲಿ ಪರಿಶೀಲಿಸಬೇಕಾದ್ದರಿಂದ ಅವುಗಳಲ್ಲಿ ಏಕರೂಪತೆತರಲು ವಿಮಾನದ ಪ್ರಯಾಣಿಕರಲ್ಲಿ ಅನವಶ್ಯಕ ಗಾಬರಿ ಗೊಂದಲ ಅನುಮಾನಗಳನ್ನು ನಿವಾರಿಸಲು, ರಹದಾರಿ ಪತ್ರದಲ್ಲಿ ನಿರೂಪಿಸಲಾದ ಮಾಹಿತಿ ಬಗ್ಗೆಯೂ ಏಕರೂಪತೆಯನ್ನು ಸಾಧಿಸಲು ನಿಶ್ಚಯಿಸಲಾಯಿತು. ಭಾವಿ ರಹದಾರಿ ಪತ್ರ ಈಗಿನ ಪುಸ್ತಕದ ಬದಲು ಕೇವಲ ಒಂದು ಪರಿಚಯ ಪತ್ರದ ಹಾಗೆ ಸುಮಾರು ೧೦೦ mm x ೭೫ mm ಅಗಲದ ಒಂದು ರಟ್ಟಿನ ಚೀಟಿಯಾಗಿರುತ್ತದೆ. ಅದನ್ನು ರೋಮನ್ ಲಿಪಿ (ABCD...) ಯಲ್ಲೂ ಅರಬ್ಬೀ ಸಂಖ್ಯೆ (೧, ೨, ೩...)ಗಳಲ್ಲೂ ಮುದ್ರಿಸಿರುತ್ತಾರೆ. ೫೦° Cಯಷ್ಟು ಉಷ್ಣವನ್ನೂ —೫೦°Cಯ ಶೀತವನ್ನೂ ಶೇಕಡಾ ೧೦೦ ರಷ್ಟು ತೇವಾಂಶದಲ್ಲೂ ಮಾಹಿತಿಯನ್ನು ಸಂಗ್ರಹಿಸಿಡುವ ಸಾಮರ್ಥ್ಯವುಳ್ಳ ಒಂದು ಪಾರದರ್ಶಕ ಪಾಲೀಥೀನ್ ಲಕೋಟೆಯಲ್ಲಿ ಯಾವುದೇ ಕಾರಣಕ್ಕಾಗಿ ಈ ನಿರ್ವಾತ ಲಕೋಟೆಯನ್ನು ಒಡೆದಾಗ, ಅದರೊಳಗಿನ ರಾಸಾಯನಿಕ ಅನಿಲವೊಂದು

PASS PORT | TYPE | COUNTRY | CODE | PASS PORT No.
P | IND | X | 12345678

SURNAME
PINGALE
GIVEN NAME
GIRISH
DATE OF BIRTH — 15 MAY 1952 | PERSONAL No. — IND. 456789
SEX — M | PLACE OF BIRTH — BANGALORE
DATE OF ISSUE — 13 FEB 1985 | DATE OF EXPIRY — 13 FEB 1980
AUTHORITY — MINISTRY OF EXTERNAL AFFAIRS NEW DELHI | HOLDERS SIGNATURE — Girish Pingale

P < IND < PINGALE < GIRISH <<<<<<<<<<<<<<<<<

1 2 3 4 5 6 7 8 < IND < 1 5 0 5 5 2 0 M 1 3 0 2 9 0 IND <<<

① ② ③ ④ ⑤ ⑥ ⑦ ⑧ ⑨ ⑩

೧. P. ಅಂದರೆ ಯಂತ್ರ ಪಠ್ಯ ರಹದಾರಿ ಪತ್ರ. ೨. ರಹದಾರಿ ಪತ್ರದ ಸಂಖ್ಯೆ. ೩. ರಹದಾರಿ ಪತ್ರದ ಸಂಖ್ಯೆ. ೩. ರಹದಾರಿ ಪತ್ರವನ್ನು ಗುರುತಿಸುವ ಗುಪ್ತ ಸಂಖ್ಯೆ. ೪. ರಹದಾರಿ ಪತ್ರವನ್ನು ಕೊಟ್ಟಿರುವ ರಾಷ್ಟ್ರದ ಹೆಸರು. ೫. ಜನ್ಮ ದಿನಾಂಕ. ೬. ಜನ್ಮದಿನಾಂಕದ ಗುಪ್ತ ಸಂಖ್ಯೆ. ೭. ಲಿಂಗ. ೮. ರಹದಾರಿ ಪತ್ರದ ಅವಧಿ ಮುಗಿಯುವ ದಿನ. ೯. ರಾಷ್ಟ್ರೀಯ ಗುರುತಿನ ಚೀಟಿಯ ಸಂಖ್ಯೆಯನ್ನು ನಮೂದಿಸುವ ಸ್ಥಳ.

ಉತ್ಕರ್ಷಗೊಂಡು, ರಹದಾರಿ ಪತ್ರ ಕಪ್ಪಾಗು-ವಂತೆ ಮಾಡಿದ ನೂತನ ರಹದಾರಿ ಪತ್ರಗಳನ್ನು ಮೊಹರುಮಾಡಿ ಕೊಡಲಾಗುವುದು. ಇದರಿಂದ ರಹದಾರಿ ಪತ್ರಗಳ ನಕಲು ಮಾಡುವುದು ದುಸ್ಸಾಧ್ಯವಲ್ಲದಿದ್ದರೂ, ಬಹಳ ಕಷ್ಟಕರವನ್ನಾಗಿ ಮಾಡಲಾಗಿದೆ.

ನೂತನ ರಹದಾರಿ ಪತ್ರದ ಮಾದರಿಯನ್ನು ಮೇಲೆ ಚಿತ್ರದಲ್ಲಿ ತೋರಿಸಿದೆ. ಅದರಲ್ಲಿ ಕೇಳಲಾಗಿರುವ ಮಾಹಿತಿ, ಹೆಸರು, ಜನ್ಮ ದಿನ, ಜನ್ಮಸ್ಥಳ, ಮುಂತಾದವು ಯಾರಿಗಾದರೂ, ಎಲ್ಲಾದರೂ

ಕೋಣವಷ್ಟು ಸರಳವಾಗಿದೆ. ರಹದಾರಿ ಪತ್ರದ ಕೊನೆಯ ಎರಡು ಸಾಲುಗಳು ಎಲ್ಲಾ ಮಾಹಿತಿಯನ್ನು ಕ್ರೋಢೀಕರಿಸುತ್ತವೆ. ಉದಾಹರಣೆಗೆ ಮೊದಲಿನ ಸಾಲು ರಹದಾರಿ ಪತ್ರವನ್ನು ಓದುವ ವಿಧಾನ (ಪಿ. ಆಂದರೆ ಯಂತ್ರ ಪಠ್ಯ), ದೇಶ-ವ್ಯಕ್ತಿಯ ಪೂರ್ಣ ಹೆಸರನ್ನು ಒಳಗೊಂಡಿದ್ದರೆ, ಕೆಳಗಿನ ಸಾಲು ರಹದಾರಿ ಪತ್ರದ ಕ್ರಮಾಂಕ, ಜನ್ಮ ದಿನ, ಸ್ತ್ರೀ-ಪುರುಷ, ರಹದಾರಿ ಪತ್ರದ ಚಲಾವಣಾವಧಿ, ಹಾಗೂ ಐಚ್ಛಿಕವಾಗಿ ರಾಷ್ಟ್ರೀಯ ಗುರುತು ಸಂಖ್ಯೆ ಹೊಂದಿರುತ್ತದೆ. ಈ ಎಲ್ಲಾ ಮಾಹಿತಿಯ ಹಿಂದೆಯೂ ಒಂದು ನಿರ್ದಿಷ್ಟ ಗುಪ್ತ ಸಂಖ್ಯೆ ಇರುತ್ತದೆ. ಈ ಗುಪ್ತ ಸಂಖ್ಯೆಯನ್ನು ಒಂದು ಸರಳ, ಆದರೆ ರಹಸ್ಯ ವಿಧಾನದಿಂದ ಆರಿಸಲಾಗುತ್ತದೆ. ಈ ಗುಪ್ತ ಸಂಖ್ಯೆಗಳು ಗಣಕ ಯಂತ್ರಕ್ಕೆ ತಾನು ಓದುತ್ತಿರುವ ರಹದಾರಿ ಪತ್ರ ಸಾಚಾವೇ ಖೋಟಾವೇ ಎಂಬುದನ್ನು ತಿಳಿಸುತ್ತದೆ. ಹೀಗೆ ಮಾಡುವ ಮೂಲಕ ಈ ಬಗೆಯ ರಹದಾರಿ ಪತ್ರಗಳನ್ನು ನಕಲು ಮಾಡುವುದು ಮತ್ತಷ್ಟು ಕಷ್ಟಕರವಾಗಿದೆ. ಗಣಕಯಂತ್ರ ರಹದಾರಿ ಪತ್ರವನ್ನು ಓದುವ ಕ್ರಮ ಹೀಗಿದೆ. (ಚಿತ್ರ ನೋಡಿ): ಯಂತ್ರದೊಳಗೆ ರಹದಾರಿ ಪತ್ರವನ್ನು ಹಾಕಿದೊಡನೆ, ಅದು ಎರಡು ರಬ್ಬರ್ ಪಟ್ಟಿಗಳ ನಡುವೆ ಬಿಗಿಯಾಗಿ, ಮಿಸುಕಾಡದಂತೆ ಹಿಡಿದಿಡಲ್ಪಡುತ್ತದೆ. ಯಂತ್ರದೊಳಗಿನ ದೀಪವೊಂದು ರಹದಾರಿ ಪತ್ರವನ್ನು ಸಮಾನವಾಗಿ ಬೆಳಗುತ್ತದೆ. ಸದಾ ಪರಿಭ್ರಮಿಸುತ್ತಿರುವ ಕನ್ನಡಿಯೊಂದು ರಹದಾರಿ ಪತ್ರದ ಪ್ರತಿಫಲನವನ್ನು ಒಂದು ಬೆಳಕು-ಸಂವೇದಿತ ಪರಿಶೋಧಕ (Light-sensitive detector) ಮೇಲೆ ಮೂಡಿಸುತ್ತದೆ. ಈ ಪರಿಶೋಧಕ ತನ್ನ ನೆನಪಿನ ಕೋಶದಲ್ಲಿ ಶೇಖರಿಸಿಟ್ಟ ಲಿಪಿಗಳೊಂದಿಗೆ ನೂತನ ಮಾಹಿತಿಯನ್ನು, ಒಂದು ಸೆಕೆಂಡಿಗೆ ೧೦೦ ಲಿಪಿಯ ವೇಗದಲ್ಲಿ ಹೋಲಿಸುತ್ತದೆ. ಇದರೊಡನೆ ಲಗತ್ತಿಸಲಾದ ಗಣಕಯಂತ್ರವೊಂದು ರಹದಾರಿ ಪತ್ರದ ಮಾಹಿತಿಯನ್ನು ತನ್ನ ನೆನಪಿನ ಕೋಶದಲ್ಲಿ ಶೇಖರಿಸಿ ಇಡುತ್ತದೆ. ಎಲ್ಲಾ ಮಾಹಿತಿಯ ನಂತರ ನಮೂದಿಸಲಾದ ಗುಪ್ತ ಸಂಖ್ಯೆಯನ್ನು ಮತ್ತೊಮ್ಮೆ ಲೆಕ್ಕ ಹಾಕಿ, ರಹದಾರಿ ಪತ್ರದ ಸಾಚಾತನವನ್ನು ಖಾತರಿಗೊಳಿಸಿಕೊಳ್ಳುತ್ತದೆ. ಅಲ್ಲದೆ, ತನ್ನ ನೆನಪಿನ ಕೋಶದಲ್ಲಿರುವ ಸಂಶಯಾಸ್ಪದ-ಅನಪೇಕ್ಷಿತ ವ್ಯಕ್ತಿಗಳೊಂದಿಗೆ ನೂತನ ರಹದಾರಿ ಪತ್ರದಲ್ಲಿರುವ ಹೆಸರು, ಜನ್ಮ ದಿನ, ರಹದಾರಿ ಪತ್ರದ ಸಂಖ್ಯೆ, ರಾಷ್ಟ್ರೀಯ ಗುಪ್ತ ಸಂಖ್ಯೆ, ಮುಂತಾದವನ್ನು ಪರಿಶೀಲಿಸಿ, ಕ್ಷಣಮಾತ್ರದಲ್ಲಿ ತನ್ನ ನಿರ್ಣಯ ನೀಡುತ್ತದೆ.

ನೂತನ ರಹದಾರಿ ಪತ್ರಗಳಲ್ಲಿನ ಮಾಹಿತಿಯನ್ನು ಗಣಕ ಯಂತ್ರದಲ್ಲಿ ಶೇಖರಿಸಿ ಇಡಬಹುದಾದರಿಂದ, ಅದರಿಂದ ಅನೇಕ ಉಪಯೋಗ ಪಡೆಯಬಹುದು. ವಿಮಾನ ನಿಲ್ದಾಣಗಳಲ್ಲಿ ಬೇಕಾದ ಒಳಬರುವ-ಹೊರಹೋಗುವ ಅನುಮತಿ ಕ್ಷಣಾರ್ಧದಲ್ಲಿ ಸಿಗುವುದರಿಂದ ವಿಮಾನ ಸಂಚಾರಿಗಳ ಸಂಖ್ಯೆ ಹೆಚ್ಚಾಗುತ್ತದೆ. ಪ್ರವಾಸೋದ್ಯಮದ ಬಗ್ಗೆ ಸ್ಪಷ್ಟ ಚಿತ್ರವನ್ನು ಬಲು ಬೇಗ ಹೊಂದಬಹುದು. ಯಾವುದೇ ನಿರ್ದಿಷ್ಟ ಅವಧಿಯಲ್ಲಿ ನಮ್ಮ ದೇಶಕ್ಕೆ ಬಂದ-ಹೋದ ಸ್ವದೇಶೀಯರೆಷ್ಟು, ವಿದೇಶೀಯರೆಷ್ಟು, ಅವರ

**ಪಾಸ್‌ಪೋರ್ಟನ್ನು ಯಂತ್ರ ಓದುವ ವಿಧಾನ**




೧. ಯಂತ್ರಪಠ್ಯ ೨. ಪರಿಭ್ರಮಿಸುವ ದರ್ಪಣ ೩. ಮಸೂರ/ಭೂತಗನ್ನಡಿ ೪. ಸ್ಥಿರ ದರ್ಪಣಗಳು. ೫. ಸಂವೇದಕ, ೬. ರಹದಾರಿ ಪತ್ರ ಓದುವ ಯಂತ್ರ, ೭. ಅತಿವೇಗ ಗಣಕಯಂತ್ರ.

ರಾಷ್ಟ್ರೀಯತೆ. ಯಾವ ವಿಮಾನ ನಿಲ್ದಾಣದಿಂದ ಒಳಬಂದರು. ಯಾವುದರಿಂದ ಹೊರ ಬಿದ್ದರು. ಅವರು ಬಂದ ಉದ್ದೇಶವೇನು, ತಂಗಿದ ಅವಧಿ ಎಷ್ಟು ಮುಂತಾದ ಮಾಹಿತಿಯನ್ನು ಕುಳಿತ ಕಡೆಯಿಂದಲೇ ಪಡೆಯಬಹುದು. ಇದರಿಂದ ವಿಮಾನ ನಿಲ್ದಾಣಗಳ ವಿಸ್ತಾರ-ನಿರ್ಮಾಣ, ಹೋಟೆಲುಗಳ ನಿರ್ಮಾಣ, ರಸ್ತೆ ಅಭಿವೃದ್ಧಿ ಮುಂತಾದ ದೀರ್ಘ ಕಾಲದ ಯೋಜನೆಗಳನ್ನು ನಿಖರ ಮಾಹಿತಿಯ ಆಧಾರದ ಮೇಲೆ ಕೈಗೊಳ್ಳಬಹುದು.

ವಿಮಾನಗಳ ಸಂಚಾರ ವೇಗ ಹೆಚ್ಚಾದೊಡನೆಯೇ ಒಂದು ಊರು-ದೇಶದಲ್ಲಿ ಯಾವುದಾದರೂ ದುಷ್ಕೃತ್ಯಗೈದು ಮತ್ತೊಂದು ಊರು-ದೇಶಕ್ಕೆ ಓಡಿ ಹೋಗಿ ತಲೆ ತಪ್ಪಿಸಿಕೊಳ್ಳುವ ಪ್ರಯತ್ನ ಹೆಚ್ಚಾಗುತ್ತಿದೆ. ಹಾಗೆಯೇ ಒಮ್ಮೆ ಓಡಿ ಹೋಗಿ, ಕೆಲವು ಸಮಯದ ನಂತರ ಸ್ವದೇಶ ಸ್ವಸ್ಥಾನಕ್ಕೆ ಸಹ ಹಿಂದಿರುಗುವ ಸಾಧ್ಯತೆ ಇವೆ. ಅಲ್ಲದೆ ಗೂಢಚಾರರು, ಕಳ್ಳ ಸಾಗಾಟಗಾರರು, ತೆರಿಗೆಗಳ್ಳರು, ಭಯೋತ್ಪಾದಕರು, ಕ್ರಾಂತಿಕಾರಿಗಳು ಮುಂತಾದ ಹಲವಾರು ಬಗೆಯ ರಾಜಕೀಯ— ಆರ್ಥಿಕ— ಸಾಮಾಜಿಕ ದೃಷ್ಟಿಯಿಂದ ಅನಪೇಕ್ಷಿತರಾದ ವ್ಯಕ್ತಿಗಳ ಚಲನವಲನಗಳ ಬಗ್ಗೆ ಸರಕಾರಕ್ಕೆ ಮಾಹಿತಿ ಬೇಕಾಗಿರುತ್ತದೆ. ಸದ್ಯಕ್ಕೆ ಈ ಬಗೆಯ ಮಾಹಿತಿಯನ್ನು ಸುಮಾರು ೧೮,೦೦೦ ಹೆಸರುಗಳುಳ್ಳ ಒಂದು ಪುಸ್ತಕ ರೂಪದಲ್ಲಿ ಸಣ್ಣ ಅಕ್ಷರದಲ್ಲಿ ಮುದ್ರಿಸಿ ಪ್ರಮುಖ ರಹದಾರಿ ಅಧಿಕಾರಿಗಳಿಗೆ ಕೊಡಲಾಗಿರುತ್ತದೆ ಪ್ರತಿಯೊಂದು ರಹದಾರಿ ಪತ್ರವನ್ನು ಪರಿಶೀಲಿಸುವಾಗಲೂ ಆ ಪತ್ರವನ್ನು ಆ ಅಧಿಕಾರಿ ತನ್ನಲ್ಲಿರುವ ಪಟ್ಟಿಯೊಂದಿಗೆ ಹೋಲಿಸಿ ನೋಡಬೇಕು. ಪಟ್ಟಿಯಲ್ಲಿರುವ ಹೆಸರುಗಳಾದರೂ ಕಾಲಕಾಲಕ್ಕೆ ಕೆಲವು ಹೋಗಿ ಮತ್ತೆ ಕೆಲವು ಸೇರಿಕೊಳ್ಳುವದರಿಂದ, ಯಾವ ರಹದಾರಿ ಅಧಿಕಾರಿಯ ನೆನಪಿನಲ್ಲಿ ಉಳಿಯುವಂತಹದಲ್ಲ. ಪ್ರವಾಸಿಗನೆದುರಿಗೇ ತನ್ನ ಕಡತ ಬಿಚ್ಚಿ ಪರಿಶೀಲಿಸತೊಡಗಿದರೆ, ಕಾಲಪ್ಯಯ ಮತ್ತು ಅವನೆದುರಿಗೇ ತನ್ನ ಸಂಶಯವನ್ನು ಪ್ರದರ್ಶಿಸುವಂತಾಗುತ್ತದೆ. ಹೀಗಾಗಿ ವಿಮಾನ ಸಂಚಾರಿಗಳ ಸಂಖ್ಯೆ ಹೆಚ್ಚಾಗುತ್ತಿದ್ದಂತೆ, ಅನಪೇಕ್ಷಿತ ವ್ಯಕ್ತಿಗಳ ಬಗ್ಗೆ ಹೆಚ್ಚು ನಿಗಾ ಇಡಲು ಈಗ ರಹದಾರಿ ಅಧಿಕಾರಿಗಳಿಗೆ ಕಷ್ಟವಾಗುತ್ತದೆ. ನೂತನ ರಹದಾರಿ ಪತ್ರಗಳು ಬಂದ ಮೇಲೆ ಈ ಕೆಲಸ ಬಹಳ ಸುಲಭವಾಗಲಿದೆ. ಯಾವುದೇ ವ್ಯಕ್ತಿ ತನ್ನ ರಹದಾರಿ ಪತ್ರವನ್ನು ಪರಿಶೀಲನೆಗೆ ಒಪ್ಪಿಸಿ, ಯಂತ್ರದಲ್ಲಿ ಹಾಕಿದೊಡನೆ ಅವನ ಅಪೇಕ್ಷಿತೆ- ಅನಪೇಕ್ಷತೆಯ ಬಗ್ಗೆ ನಿರ್ಧಾರ ಕ್ಷಣಮಾತ್ರದಲ್ಲಿ ಬರುವುದಷ್ಟೇ ಅಲ್ಲ, ಮುಂದಿನ ಕ್ರಮವನ್ನು (ಮೇಲಧಿಕಾರಿಗಳಿಗೆ ತಿಳಿಸುವುದು, ಬೇರೆ ರಾಷ್ಟ್ರ, ರಾಜ್ಯದ ಪೋಲೀಸರಿಗೆ ತಿಳಿಸುವುದು, ಅವನ ಆಗಮನ— ನಿರ್ಗಮನವನ್ನು ಗುರುತಿಸುವುದು ಇತ್ಯಾದಿ) ಸಹ ದೂರದರ್ಶನದ ತೆರೆಯ ಮೇಲೆ ಮಾಡುವಂತೆ ವ್ಯವಸ್ಥೆ ಮಾಡಲಾಗಿದೆ. ಇದರಿಂದ ಸರಕಾರಕ್ಕೆ ತನ್ನ ಮೇಲೆ-ಸಂಶಯವಿರುವುದು ಯಾವ ವ್ಯಕ್ತಿಗೂ ಗೊತ್ತಾಗುವುದಿಲ್ಲ. ಅದೇ ಹೊತ್ತಿಗೆ ಸರಕಾರಕ್ಕೆ ಯಾವುದೇ ಅನಪೇಕ್ಷಿತ ವ್ಯಕ್ತಿಯ ಚಲನವಲಗಳ ಬಗ್ಗೆ ನಿರ್ದಿಷ್ಟಮಾಹಿತಿ ಸಿಗುತ್ತಿರುತ್ತದೆ.

ಅನೇಕ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಈಗಾಗಲೇ ಜಾರಿಗೆ ಬಂದಿರುವ ಈ ಬಗೆಯ ನೂತನ ರಹದಾರಿ ಪತ್ರಗಳು, ಭಾರತದಲ್ಲೂ ಇನ್ನೊಂದು ಹತ್ತು ವರ್ಷಗಳಲ್ಲಿ ಜಾರಿಗೆ ಬರುವ ಸಂಭವವಿದೆ. ಈಗಾಗಲೇ ಚಾಲ್ತಿಯಲ್ಲಿರುವ ರಹದಾರಿ ಪತ್ರದ ಮಾಹಿತಿಯನ್ನು ಗಣಕಯಂತ್ರದಲ್ಲಿ ಕೈಯಾರೆ ಒದಗಿಸಿ, ವ್ಯಕ್ತಿಯ ಅಪೇಕ್ಷತೆ- ಅನಪೇಕ್ಷತೆಯ ಬಗ್ಗೆ ಗಣಕ ಯಂತ್ರದ ಮೂಲಕ ವರದಿಯನ್ನು ನಮ್ಮಲ್ಲೂ ರಹದಾರಿ ಅಧಿಕಾರಿಗಳು ಮುಂಬಯಿಯ ಸಹಾರಾ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ತರಿಸಿಕೊಳ್ಳುತ್ತಿದ್ದಾರೆ. ಸಂಪೂರ್ಣ ಸ್ವಯಂಚಾಲಿತ ಪರಿಶೀಲನೆಗೆ ಇನ್ನು ಕೆಲವೇ ವರ್ಷಗಳು ಬೇಕಷ್ಟೆ!



## ದ್ವಿತೀಯ ಮಹಾಯುದ್ಧದ ಒಂದು ಪ್ರಸಂಗ

# ಅಂದಮಾನಿನಲ್ಲಿ ಜಪಾನಿಯರು

**ಮು. ಶಶಿಧರ**

ಎರಡನೆಯ ಮಹಾಯುದ್ಧ ಆರಂಭವಾಗಿ, ಜಪಾನಿಯರು ಭಾರತದತ್ತ ಮುನ್ನುಗ್ಗಿ ಬರುತ್ತಿರುವರೆಂಬ ಸುದ್ದಿಯು, ಬಂಗಾಳಕೊಲ್ಲಿಯ ದ್ವೀಪಗಳಲ್ಲಿ ದಿಗಿಲು ಹುಟ್ಟಿಸಿದ್ದು ಸಹಜ. ಅಂದಮಾನ್ ಮತ್ತು ನಿಕೊಬಾರ್ ದ್ವೀಪಗಳಲ್ಲಿದ್ದ ಕೆಲವು ಬ್ರಿಟಿಶ್ ಅಧಿಕಾರಿಗಳು ಮತ್ತು ಇತರ ನೌಕರರು ಮದರಾಸಿಗೆ ಬಂದು ಬಿಟ್ಟಿದ್ದರು. ೧೯೪೨ ನೇ ಇಸವಿಯ ಮಾರ್ಚ್ ೨೩ ರಂದು ಜಪಾನಿಯರು ಪೋರ್ಟ್‌ಬ್ಲೇರನ್ನು ಪ್ರವೇಶಿಸಿದಾಗ, ಯಾವ ಪ್ರತಿರೋಧವೂ ಇರಲಿಲ್ಲ. ದ್ವೀಪಸಮೂಹದ ಕೇಂದ್ರವಾಗಿದ್ದ ಆ ಕಿರು ನಗರದವರು ಜಪಾನಿಯರನ್ನು ಸ್ವಾಗತಿಸಿದರೆಂದರೆ ತಪ್ಪಿಲ್ಲ; ಮುಂದಿನ ದಿನಗಳ ಕಿರುಸೂಚನೆ ಅವರಿಗಿದ್ದಿದ್ದರೆ, ಅವರ ಆಗಿನ ಸಂತಸದ ಒಂದೆ ದಿಗಿಲಾದರೂ ಇರುತ್ತಿತ್ತೇನೊ. ತಂತಿ ಇಲಾಖೆಯ ನೌಕರರು ತಮ್ಮ ತಂತಿ ಕಚೇರಿಯನ್ನೇ ನಾಶಗೊಳಿಸಿ, ಬಂದೀಖಾನೆಯನ್ನು ಸೇರಿದರು. ಕುಖ್ಯಾತವಾಗಿದ್ದ ಸೆಲ್ಯುಲರ್ ಜೈಲಿನಲ್ಲಿದ್ದ ಕೈದಿಗಳನ್ನೆಲ್ಲರನ್ನೂ ಬಂಧಮುಕ್ತರನ್ನಾಗಿಸಲಾಯಿತು. ನಿವಾಸಿಗಳನ್ನು ಯಾವುದೇ ಹಿಂಸೆಗೆ ಗುರಿಪಡಿಸದಿದ್ದುದನ್ನು ಕಂಡು, ತಮಗೆ ಮುಂದಿನ ದಿನಗಳು ಸುಖಕರ ಎಂದು ದ್ವೀಪ ನಿವಾಸಿಗಳು ಅಂದುಕೊಂಡಿದ್ದರೆ, ಅವರ ಭ್ರಮೆ ಕೂಡಲೆ ಕರಗುವುದಿತ್ತು.

ಜಪಾನಿ ಸೈನಿಕರು ಸರ್ವಾಧಿಕಾರಿಗಳಂತೆ ವರ್ತಿಸತೊಡಗಿದರು. ತಮಗಿಷ್ಟ ಬಂದ ಮನೆಗೆ ಹೋಗಿ, ಅಲ್ಲಿದ್ದವರನ್ನು ಹೊರಗೋಡಿಸಿ ತಾವು ವಾಸಿಸುತ್ತಿದ್ದರು. ತಮಗೆ ಇಷ್ಟ ಬಂದ ತಿನಿಸುಗಳನ್ನು ಅಂಗಡಿಯಿಂದ ಎತ್ತಿ ತಿನ್ನುತ್ತಿದ್ದರು. ಮನೆಗಳಿಂದ ಆಹಾರವನ್ನು ದೋಚಿ ತಿನ್ನುತ್ತಿದ್ದರು. ಪ್ರತಿರೋಧಿಸುವ ಶಕ್ತಿ ಯಾರಿಗೂ ಬರಲಿಲ್ಲ; ಜುಲ್‌ಫಿಕರ್ ಎನ್ನುವಾತ, ಧೈರ್ಯ ಮಾಡಿ ಪ್ರತಿರೋಧಿಸಿದ. ತನ್ನ ಮನೆಯ ತಿನಿಸನ್ನು ಎತ್ತುತ್ತಿದ್ದ ಜಪಾನಿಯತ್ತ ಆತ ಗುಂಡು ಹಾರಿಸಿದ; ಗುಂಡು ತಗುಲಿದ್ದರೂ, ಶಿಕ್ಷೆ ಕಠಿಣವಾಗಿತ್ತು. ಜಪಾನಿಯನು ಇತರ ಸೈನಿಕರೊಡನೆ ಬಂದು ಜುಲ್‌ಫಿಕರನನ್ನು ಬಂಧಿಸಿ, ರಸ್ತೆಯ ಬದಿಯಲ್ಲಿ ನಿಲ್ಲಿಸಿ ಕೊಂದ. ನಂತರ ಎಲ್ಲರೂ ಸೇರಿ ಊರನ್ನು ಲೂಟಿಮಾಡಿದರು.

ಇತ್ತ ಜೈಲಿನಿಂದ ತಪ್ಪಿಸಿಕೊಂಡ ಹಲವು ಕೈದಿಗಳಲ್ಲಿ ಕೇಡಿಗಳೂ ಸೇರಿದ್ದರು. ಅವರೆಲ್ಲ ಮತ್ತೆ ಮುತ್ತಲಿನ ಮನೆಗಳನ್ನು ದೋಚತೊಡಗಿದರು. ಜೈಲಿನಲ್ಲಿದ್ದವರಲ್ಲಿ ಕೆಲವರು ರಾಜಕೀಯ ಕೈದಿಗಳು. ಉಳಿದವರೆಲ್ಲ ಕೊಲೆ, ಸುಲಿಗೆ ಮುಂತಾ



363 13

ದವ್ರಗಳಿಗಾಗಿ ಶಿಕ್ಷೆ ಅನುಭವಿಸುತ್ತಿದ್ದಂಥ ವರು. ನಿವಾಸಿಗಳೊಂದಿಗೆ ಅವರು ಜಗಳಕ್ಕೆ ತೊಡಗಿದಾಗ ಸಾವು-ನೋವುಗಳುಂಟಾದವು. ಅಶಾಂತಿಯ ವಾತಾವರಣ ಎಲ್ಲೆಡೆ ಇದ್ದರೂ ಜಪಾನಿಯರು ಮಜಾ ಮಾಡುತ್ತ, ಎದುರಾಡಿದವರನ್ನು ಹಿಂಸಿಸುತ್ತ ಕಾಲ ಕಳೆಯುತ್ತಿದ್ದರು.

ಖಾಲಿಯಾದ ಬಂದೀಖಾನೆಗಳು ತುಂಬಲು ಹೆಚ್ಚು ಸಮಯ ಬೇಕಾಗಲಿಲ್ಲ. ಜಪಾನಿನ ಹಡಗುಗಳ ಮೇಲೆ ಬ್ರಿಟಿಶ್ ವಿಮಾನಗಳು ದಾಳಿ ಮಾಡತೊಡಗಿದಾಗ, ಅನುಮಾನ ಹುಟ್ಟಿತು. ದ್ವೀಪದಲ್ಲಿ ಹಲವರನ್ನು ಗೂಢಚಾರರೆಂದು ಲೆಕ್ಕ ಹಾಕಿ, ಅವರೆಲ್ಲರನ್ನೂ ಸೆಲ್ಯುಲರ್ ಜೈಲಿನಲ್ಲಿ ಬಂಧಿಸಿಡತೊಡಗಿದರು. ಗೂಢಚಾರರಿಂದ ವಿಚಾರಗಳನ್ನು ಹೊರ ಹೊರಡಿಸಲು ತೀವ್ರ ರೀತಿಯ ಹಿಂಸೆಯನ್ನು ಬಳಸಲು ಜಪಾನಿಯರು ಹಿಂಜರಿಯುತ್ತಿರಲಿಲ್ಲ. ಪೆಟ್ರೋಲ್ ಹಾಕಿ ಶರೀರದ ಭಾಗಗಳನ್ನು ಸುಡುವುದು. ಗಾಯಗಳಿಗೆ ಮೆಣಸಿನ ಪುಡಿಯನ್ನೆರಚುವುದು ಮೊದಲಾದ

## ಮನುಷ್ಯನ ಮಾಂಸ ತಿಂದು ಬದುಕಿದವ

ಹೆವಲೊಕ್ ದ್ವೀಪದಿಂದ ರಕ್ಷಿಸಲ್ಪಟ್ಟ ಇಬ್ಬರಲ್ಲಿ ಒಬ್ಬನ ಹೆಸರು ಸೌದಾಗರ್. ಆತ ಓರ್ವ ಮುಸ್ಲಿಂ. ೧೯೩೯ರಲ್ಲಿ ಸೆಲ್ಯುಲರ್ ಜೈಲಿಗೆ ಬಂದ ಆತನನ್ನು ಇತರ ಕೈದಿಗಳೊಂದಿಗೆ ಜಪಾನಿಯರು ಬಿಡುಗಡೆ ಮಾಡಿದ್ದರು. ಕೊಲೆಮಾಡಿ ಜೈಲು ಸೇರಿದ್ದರೂ, ಈಗ ಆತ ಒಬ್ಬ ಸಂಪ್ರದಾಯಶೀಲ ಮುಸ್ಲಿಂ. ಜೀವ ಉಳಿಸಿಕೊಳ್ಳಲು ನರ ಮಾಂಸ ತಿನ್ನಬೇಕಾದ ಈತನ ಅನುಭವ ಭಯಾನಕ. ಮದರಾಸಿನ 'ದಿ ಹೆರಿಟೇಜ್' ಪತ್ರಿಕೆಯ ಸಂಪಾದಕರಿಗೆ ತನ್ನ ಅನುಭವಗಳನ್ನು ವಿವರಿಸಿದ್ದಾನೆ.

ಹೆವಲೊಕ್ ದ್ವೀಪದಲ್ಲಿ ಇಳಿದಾಗ, ಆಹಾರ–ನೀರು ಇರಲಿಲ್ಲ. ಈತನಂತೆಯೇ ಹೊಸ ಭೂಮಿಗೆ ಕೃಷಿಮಾಡಲು ಬಂದಿದ್ದ ಇತರರು ಸುಮ್ಮನೆ ಕುಳಿತಿದ್ದರು. ಪೋರ್ಟ್ ಬ್ಲೇರ್ ಸುತ್ತಿನಲ್ಲಿ ಆಹಾರ ಇಲ್ಲದ್ದರಿಂದ, ಇವರನ್ನು ಬಲಾತ್ಕಾರವಾಗಿ ಜಪಾನಿಯರು ಈ ದ್ವೀಪದಲ್ಲಿ ಬಿಟ್ಟಿದ್ದರು. ದಾರಿಯಲ್ಲಿ ಬರುವಾಗಲೇ ಹಲವರನ್ನು ಕೊಂದು ಸಮುದ್ರಕ್ಕೆ ಎಸೆಯಲಾಗಿತ್ತು. ಬದುಕುಳಿದವರಿಗೆ ಆಹಾರವಿಲ್ಲದೆ, ಸಾಯುವ ಮಾರ್ಗ ಉಳಿದಿತ್ತು. ಹೆಚ್ಚಿನ ಮಂದಿ ಸತ್ತಾಗ, ಕೆಲವರು ಗುಂಪುಗುಂಪಾಗಿ ಜೀವಂತ ಮನುಷ್ಯರ ಬೇಟೆಗೆ ತೊಡಗಿದರಂತೆ. ಮೂವರು ಸೌದಾಗರನನ್ನು ಏಕಾಂತ ಸ್ಥಳಕ್ಕೆ ಕರೆದೊಯ್ದು, ತಿವಿಯಲು ಯತ್ನಿಸಿದರು. "ಆದರೆ ಆ ದುರ್ಬಲರನ್ನು ಅತ್ತ ತಳ್ಳಿ ತಪ್ಪಿಸಿಕೊಂಡೆ. ಅವರಲ್ಲಿ ಶಕ್ತಿ ಉಳಿದಿರಲಿಲ್ಲವಾದ್ದರಿಂದ ನನ್ನನ್ನು ಅಟ್ಟಿಸಿಕೊಂಡು ಬರಲಿಲ್ಲ." ತಿವಿತದ ಗಾಯವನ್ನು ಈಗಲೂ ಆತ ತೋರಿಸುತ್ತಾನೆ.

ಆದರೆ, ಅವರೆಲ್ಲ ಸತ್ತರು– ಸೌದಾಗರ್ ಮತ್ತು ಗೋವರ್ಧನ ಪಂಡಿತ್ ಎಂಬಿಬ್ಬರು ಮಾತ್ರ ಉಳಿದರು. ಪ್ರತಿದಿನ ಐದಾರು ಮಂದಿ ಸಾಯುತ್ತಿದ್ದರು. ಇವರಿಗೆ ಆಹಾರವೇ ಇರಲಿಲ್ಲ. ಏನು ಮಾಡುವದು? "ಓಹ್... ಎಂತಿದ್ದರೂ ಸಾಯುತ್ತಿರುವೆ. ಆದ್ದರಿಂದ ಇದರಲ್ಲಿ ತಪ್ಪೇನಿದೆ?... ತಪ್ಪೇನಿದೆ... ಒಂದು ಶವವನ್ನು ಬೆಂಕಿಯ ಬಳಿ ಎಳೆದು, ಅದನ್ನು ಸುಟ್ಟುತಿಂದೆ..." ಎಂದು ಸೌದಾಗರ್ ತನ್ನ ಭಯಾನಕ ಅನುಭವವನ್ನು ವಿವರಿಸುವನು. ಆದರೆ ನೀರಿಲ್ಲದೆ, ಜೀವ ಚಡಪಡಿಸತೊಡಗಿತು. ಆ ಸಮಯದಲ್ಲಿ ಪೋರ್ಟ್‌ಬ್ಲೇರಿಗೆ ಸಾಗುತ್ತಿದ್ದ ಅಮೇರಿಕನ್ ಹಡಗು ಇವರನ್ನು ರಕ್ಷಿಸಿ ಕರೆದೊಯ್ದಿತು. ಅದಾಗಲೇ ಜಪಾನ್ ಶರಣಾಗಿತ್ತು.

ವಿಧಾನಗಳಿಂದ 'ಗೂಢಚಾರ'ರ ಗುಟ್ಟುಗಳನ್ನು ತಿಳಿಯಲು ಯತ್ನಿಸಲಾಗುತ್ತಿತ್ತು. ಆದರೆ, ಪಾಪ, ಆ 'ಗೂಢಚಾರರು' ಏನೂ ತಿಳಿಯದ ಮುಗ್ಧರೆಂದು ಜಪಾನಿಯ ಸೈನಿಕರಿಗೆ ಮನವರಿಕೆ ಯಾಗಲಿಲ್ಲ. ಹೊಡೆತ, ಹಿಂಸೆ ತಾಳದೆ ಬಹ ಳಷ್ಟು ಮಂದಿ ಪ್ರಾಣ ಕಳೆದುಕೊಂಡರು. ಹೆಚ್ಚು ಮಂದಿಯನ್ನು ಬಂಧಿಸಿದಂತೆ, ಹೆಚ್ಚಿನ ಸಾವು ಸಂಭವಿಸಿತು. ದ್ವೀಪದಲ್ಲಿ ; ಭಯದ ವಾತಾ ವರಣ ತುಂಬಿತ್ತು.

ನೇತಾಜಿ ಸುಭಾಸ್‌ಚಂದ್ರ ಬೋಸರು ಈ ಸಮಯದಲ್ಲಿ ಅಂದಮಾನ್ ದ್ವೀಪಗಳಿಗೆ ಬಂದರು; ಆದಾಗಲೇ ಜಪಾನಿಯರ ವಶದಲ್ಲಿದ್ದುದರಿಂದ, ಸ್ವತಂತ್ರ ಭಾರತದಲ್ಲಿ ನಡೆಯಲು ನೇತಾಜಿಯವ ರಿಗೆ ತುಂಬ ಹೆಮ್ಮೆಯೆನಿಸಿತ್ತು. ಆದರೆ ಅಲ್ಲಿನ ನಿವಾಸಿಗಳು ಅವರಲ್ಲಿ ಡಾಕ್ಟರು, ಉಪಾಧ್ಯಾಯರು ಗಳು ಸಹ ಸೇರಿದ್ದರು– ಅನುಭವಿಸುತ್ತಿದ್ದ ಹಿಂಸೆ

## ಹರಿದ್ವರ್ಣ ದ್ವೀಪಸಮೂಹ

ಅಂದಮಾನ್ ಮತ್ತು ನಿಕೊಬಾರ್ ದ್ವೀಪಸಮೂಹದಲ್ಲಿ ೩೦೮ ಕ್ಕಿಂತ ಹೆಚ್ಚು ದ್ವೀಪ-ಗಳಿವೆ; ಅವುಗಳಲ್ಲಿ ಸುಮಾರು ೪೦ರಲ್ಲಿ ಮಾತ್ರ ಜನವಸತಿ ಇದೆ. ಮುಖ್ಯಪಟ್ಟಣ ಪೋರ್ಟ್-ಬ್ಲೇರ್. ಅಲ್ಲಿ ಆಡಳಿತ ಕೇಂದ್ರ, ಆಕಾಶವಾಣಿ ಇತ್ಯಾದಿಗಳಿವೆ. ರಾಸ್‌ದ್ವೀಪದಲ್ಲಿ ಭಾರತೀಯ ಸೇನಾನೆಲೆಯಿದೆ. ಪೋರ್ಟ್‌ಬ್ಲೇರಿನ ಸುತ್ತ ಮುತ್ತ ಹೆಚ್ಚಾಗಿ ಹಿಂದಿ ಜನರು, ತಮಿಳರು, ಬಂಗಾಳಿಗಳು, ಇತರರು ಬಂದಿರುವರು. ಸರಕಾರಿ ನೌಕರರನ್ನು ಬಿಟ್ಟರೆ ಉಳಿದವರೆಲ್ಲ ಕೈದಿ ಸಂತತಿಯವರು. ಅಂದರೆ, ಬಿಡುಗಡೆಗೊಂಡ ಕೈದಿಗಳು ಉತ್ತು, ಬೆಳೆದು ಜಮೀನನ್ನು ಮಾಡಿಕೊಂಡಿರುವರು; ಅಥವಾ ಅಂಗಡಿ ಮುಂತಾದ ಉದ್ಯಮದಲ್ಲಿರುವರು. ಅಂಡಮಾನ್‌ನಲ್ಲಿ ಏಷ್ಯದಲ್ಲೆ ದೊಡ್ಡದಾದ ಮೆದುಮರ ಕಾರ್ಖಾನೆಯಿದೆ. ಇದರಿಂದಾಗಿ ಅಲ್ಲಿನ ಸುಂದರ ಕಾಡುಗಳು ಅವ್ಯಾಹತವಾಗಿ ನಾಶವಾಗುತ್ತಿವೆ.

ಅಂಡಮಾನ್‌ನಲ್ಲಿ ಇಂದಿಗೂ ಶಿಲಾಯುಗದ ಜೀವನ ಕ್ರಮವನ್ನು ಅನುಸರಿಸುತ್ತಿರುವ ಮೂಲವಾಸಿಗಳಿರುವುದು ವಿಸ್ಮಯದ ವಿಚಾರ. ಇಡೀ ದ್ವೀಪಸಮೂಹದ ಜನಸಂಖ್ಯೆ ಸುಮಾರು ಎರಡೂಕಾಲು ಲಕ್ಷ. ಆದರೆ ಇವರಲ್ಲಿ ಆದಿವಾಸಿಗಳ ಸಂಖ್ಯೆ ಬಹಳ ಕಡಿಮೆ; ಭಾರತದಿಂದ ಬಂದವರೇ ಜಾಸ್ತಿ.

ನಶಿಸುತ್ತಿರುವ ಮೂಲವಾಸಿಗಳಲ್ಲಿ ಅಂದಮಾನಿಗಳು ಬರೇ ೨೭ ಮಂದಿ ಇರುವರು. ಓಂಗೇಗಳ ಸಂತತಿ ಸುಮಾರು ೧೨೨. ನಿಕೋಬಾರ್ ದ್ವೀಪಗಳಲ್ಲಿ ವಾಸಿಸುವ ನಿಕೋಬಾರಿಗಳು ಇತರರೊಂದಿಗೆ ಮಿಶ್ರಗೊಂಡಿದ್ದರೂ, ಅವರ ಸಂಖ್ಯೆ ೨,೦೦೦ ದಷ್ಟಿದೆ. ಮುಂದುವರಿದವರಲ್ಲಿ ಇವರೇ ಮುಖ್ಯರು. ಈ ಮೂರೂ ಪಂಗಡದವರು ನಾಗರಿಕತೆಯೊಂದಿಗೆ ಹೊಂದಿಕೊಂಡವರು. ಜಾರವಾ ಮತ್ತು ಸೆಂಟಿನೇಲಿಯರು ಇಂದಿಗೂ ನಾಗರಿಕತೆಯಿಂದ ದೂರವಿರುವವರು. ಜಾರವಾ ಗಳು ಅಲ್ಲಲ್ಲಿ ಸ್ನೇಹ ಬೆಳೆಸಲು ಯತ್ನಿಸುತ್ತಿರುವರು: ಬಾಣದ ಮಳೆಗರೆಯುತ್ತಿದ್ದವರು ಈಗ ನಾಗರಿಕರ ಕಾಣಿಕೆಯನ್ನು ಸ್ವೀಕರಿಸುತ್ತಿರುವರು. ಅವರ ಸಂಖ್ಯೆ ಸುಮಾರು ೨೫೦. ಇವರ ಹಾಡು ಇತ್ತೀಚೆಗೆ ಆಕಾಶವಾಣಿಗೆ ದೊರಕಿತಂತೆ. ಇನ್ನೂ ನಿಗೂಢರಾಗಿದ್ದು, ನಾಗರಿಕರತ್ತ ಬಾಣ ಎಸೆಯುವ ಸೆಂಟಿನೇಲಿಯರ ಸಂಖ್ಯೆ ೮೦ ಎಂದು ಊಹಿಸಲಾಗಿದೆ. ಶಾಂಪೇನ್ ಎಂಬ ಇನ್ನೊಂದು ಮೂಲವಾಸಿ ಪಂಗಡದಲ್ಲಿ ೨೦೦ ಮಂದಿ ಇರುವರು.

ಮತ್ತು ಭಯ ನೇತಾಜಿಗೆ ತಿಳಿದಿರಲಿಲ್ಲ. ೧೯೪೩ ನೆಯ ಇಸವಿಯ ಡಿಸೆಂಬರ್ ೨೯ರಂದು ವಿಮಾನದಿಂದಿಳಿದು ನೇತಾಜಿ, ಪಟ್ಟಣಕ್ಕೆ ಬರುವಾಗ, ದಾರಿಯ ಇಕ್ಕೆಲಗಳಲ್ಲೂ ನಿವಾಸಿಗಳು ನಿಂತಿದ್ದರೂ, ಅವರೊಂದಿಗೆ ಮಾತನಾಡುವ ಅವಕಾಶ ನಿವಾಸಿಗಳಿಗೆ ದೊರೆಯಲಿಲ್ಲ. ಬಹು ಮಂದಿಗೆ ತಾವು ಏತಕ್ಕೆ ಸಾಲಾಗಿ ನಿಂತಿದ್ದೆವೆಂದು ನೇತಾಜಿಯನ್ನು ಕಾಣುವ ತನಕ ತಿಳಿದಿರಲಿಲ್ಲ. ಜಪಾನಿ ಅಧಿಕಾರಿಗಳ ಆಜ್ಞೆಯನ್ನು ಮೂಕರಾಗಿ ಪಾಲಿಸುವುದು ಮಾತ್ರ ಅವರ ದಿನಚರಿಯಾಗಿತ್ತು.

ನೇತಾಜಿಯ ಎಡ ಬಲಗಳಲ್ಲಿ ಸೈನಿಕರಿದ್ದುದರಿಂದ ನಿವಾಸಿಗಳೊಂದಿಗೆ ಮಾತನಾಡುವ ಅವಕಾಶವೂ ಇರಲಿಲ್ಲ. ಸೆಲ್ಯುಲರ್ ಜೈಲನ್ನು ನೇತಾಜಿ ನೋಡಿದರು; ಬಹುಶಃ ಜೈಲಿನಲ್ಲಿ ಯಾರೂ ಇಲ್ಲ ಎಂಬ ತೃಪ್ತಿಯಿಂದ ನೇತಾಜಿ ಹಿಂತಿರುಗಿರಬೇಕು. ಏಕೆಂದರೆ ಗಾಯಗೊಂಡ ಕರುಣಾಜನಕ ಸ್ಥಿತಿಯಲ್ಲಿದ್ದ ಜನರನ್ನೆಲ್ಲ ಜೈಲಿನ ಒಂದು ಭಾಗದಲ್ಲಿ ಕೂಡಿ ಹಾಕಿ, ಖಾಲಿಯಾಗಿದ್ದ ಭಾಗಗಳನ್ನು ಮಾತ್ರ ನೇತಾಜಿ ತೋರಿಸಲಾಗಿತ್ತು. ನೇತಾಜಿ ಮೂರು ದಿನಗಳ ತನಕ ಅಲ್ಲಿದ್ದರೂ ಅವರನ್ನು 'ರಾಸ್' ದ್ವೀಪದಲ್ಲಿ ಏಕಾಂತದಲ್ಲಿಡಲಾಗಿತ್ತು. ದ್ವೀಪವಾಸಿಗಳ ಪ್ರಾಜ್ಞ ಗುಂಪೊಂದು ಅವರನ್ನು ಭೇಟಿ ಮಾಡಲು ಉದ್ದೇಶಿಸಿತು; ಅದಕ್ಕೆ ನೇತಾಜಿ ಒಪ್ಪಿದರು. ಆದರೆ, ಸೈನಿಕರ ಅಸಹಕಾರದಿಂದ ಅದು ಸಾಧ್ಯವಾಗಲಿಲ್ಲ. ನೇತಾಜಿ ಹಿಂತಿರುಗಿದರು. ಆ ನಂತರ ದ್ವೀಪದ ಬುದ್ಧಿಜೀವಿಗಳನ್ನು ಹಿಡಿದು ತಂದು, ಗೂಢಚರ್ಯೆಯ ಗುಮಾನಿಯಿಂದ ಹಿಂಸಿಸಲಾಯ್ತು. ಅವರಿಂದ ತಪ್ಪೊಪ್ಪಿಗೆ ಬಂದಿದ್ದಾಗ ಕೊಲ್ಲಲಾಯ್ತು. ಇದೇ ಸಮಯದಲ್ಲಿ ಬ್ರಿಟಿಶರ ದಾಳಿಯಿಂದ, ಸುತ್ತಮುತ್ತಲಿನ ಜಪಾನಿ ಪಡೆಯು ಹೆಚ್ಚು ಹೆಚ್ಚು ಹಡಗುಗಳನ್ನು ಕಳೆದುಕೊಳ್ಳತೊಡಗಿತು.

ಇದರಿಂದಾಗಿ, ದ್ವೀಪಕ್ಕೆ ಬರುತ್ತಿದ್ದ ಆಹಾರದ ಸರಬರಾಜು ನಿಂತು ಹೋಯಿತು. ೧೯೪೫ರ ಆದಿ ಭಾಗದಲ್ಲಿ ದ್ವೀಪದಲ್ಲಿ ಆಹಾರವೇ ಇರಲಿಲ್ಲ. ದ್ವೀಪದ ನಿವಾಸಿಗಳನ್ನು ಕೊಲ್ಲುವುದರ ಮೂಲಕರ ಉಣ್ಣುವ ಬಾಯಿಗಳ ಸಂಖ್ಯೆಯನ್ನು ಕಡಿಮೆ ಮಾಡಲಾಯ್ತು. ಸುಮಾರು ಐದು ನೂರು ಹಳ್ಳಿಗರನ್ನು ದ್ವೀಪವೊಂದಕ್ಕೆ ಕರೆದೊಯ್ದು, ಜಪಾನಿ ಸೈನಿಕರು ಗುಂಡಿಕ್ಕಿ ಕೊಂದರೆಂದು ಹೇಳಲಾಗಿದೆ. ಹೊಸ ದ್ವೀಪಗಳಲ್ಲಿ ಕೃಷಿ ಮಾಡುವಂತೆ ಮನವೊಲಿಸಿ ಹಲವು ನಿವಾಸಿಗಳನ್ನು ದೋಣಿಗಳಲ್ಲಿ ಕರೆದೊಯ್ದು ನಿರ್ಜನ ದ್ವೀಪಗಳಲ್ಲಿ ಬಿಟ್ಟರು. ಆದರೆ ಆ ದ್ವೀಪದಲ್ಲಿ ಆಹಾರ ಬೆಳೆಯುವ ಯಾವುದೇ ಅವಕಾಶ ಅಥವಾ ಸೌಕರ್ಯ ಇರಲಿಲ್ಲ. ಕುಡಿಯಲು ನೀರು ಸಹ ಇರಲಿಲ್ಲ; ಮಳೆ ನೀರನ್ನು ಕಾಯಬೇಕಿತ್ತು. ನೂರಾರು ಮಂದಿ ಅಲ್ಲಿ ಸುಮ್ಮನೆ ಕುಳಿತು ಸತ್ತರು. ಕೊನೆಯಲ್ಲಿ, ಉಳಿದ ಕೆಲವರು ಮನುಷ್ಯರ ಮಾಂಸವನ್ನು ತಿನ್ನತೊಡಗಿದರೆಂದು ಹೇಳಲಾಗಿದೆ. ಮನುಷ್ಯರ ಮಾಂಸವನ್ನು ತಿಂದು ಬದುಕಿದ ಇಬ್ಬರು ಇನ್ನೂ ಬದುಕಿರುವರಂತೆ. ಯುದ್ಧ ಮುಗಿದ ನಂತರ ಇತ್ತ ಬರುತ್ತಿದ್ದ ಅಮೇರಿಕನ್ ಹಡಗೊಂದು ಅವರಿಬ್ಬರನ್ನು ಆ ನಿರ್ಜನ ದ್ವೀಪದಿಂದ ಮುಖ್ಯ ದ್ವೀಪಕ್ಕೆ ಕರೆ ತಂದಿತು,

೧೯೪೫ರ ಆಗಸ್ಟ್ ೧೫ ರಂದು ಜಪಾನ್ ಶರಣಾದ ನಂತರ, ಪೋರ್ಟ್‌ಬ್ಲೇರನ್ನು ಅದರಷ್ಟಕ್ಕೆ ಬಿಟ್ಟು, ಜಪಾನಿ ಸೈನಿಕರು ಹೊರಟು ಹೋದರು. ಮತ್ತೆರಡು ವರುಷಗಳ ಕಾಲ ಬ್ರಿಟಿಶ್ ಆಳ್ವಿಕೆ ಅಲ್ಲಿ ಮುಂದುವರಿಯಿತು. ಜಪಾನಿಯರು ನಡೆಸಿದ ಹಿಂಸೆಯ ಅಧ್ಯಾಯವು ಮುಗಿದಿದ್ದರೂ, ಅದರ ಭಯಾನಕ ನೆನಪು ಮಾಸಲು ಕೆಲವು ಕಾಲ ಬೇಕಿತ್ತು. ❁



# ಬೆಟ್ಟದಾ ಮೇಲೊಂದು ಮನೆಯ ಮಾಡಿ....

ವ. ಉಮೇಶ ಕಾರಂತ

ಚಿಗುರೊಡೆದ ಬಳ್ಳಿ, ಹೂ ಬಿಟ್ಟ ಗಿಡ. ಬೆಳಗಿನ ಮಂಜಿನ ಹನಿಗಳ ಮೇಲೆ ಹೊಂಬಣ್ಣದ ಬೆಳಕು ಬೀರುವ ಬಾಲ ಸೂರ್ಯ, ನೀಲಾಕಾಶ, ಭೋರ್ಗರೆವ ಶರಧಿ, ದೂರ ದಿಗಂತ, ಇವುಗಳನ್ನು ನೋಡುತ್ತಾ ಕುಳಿತುಕೊಳ್ಳುವುದೆಂದರೆ ನನಗೆ ಬಾಲ್ಯದಿಂದಲೂ ಇಷ್ಟ.

ಸಂಧ್ಯಾ ಸಮಯದಲ್ಲಿ ಮನೆಯ ಪಾರಿಜಾತ ಗಿಡದಡಿಯ ಕಲ್ಲು ಬೆಂಚಿನ ಮೇಲೆ ಕುಳಿತು ಆರೆ ಬಿರಿದ ಹೂಗಳ ಸುಗಂಧ ಬೆರೆತ ಮಂದಾನಿಲವನ್ನು ಸೇವಿಸುತ್ತಾ ಪಶ್ಚಿಮ ದಿಗಂತದ ಕೆಳಗೆ, ಕೆಳಗೆ ಇನ್ನೂ ಕೆಳಗೆ, ಮತ್ತೂ ಕೆಳಗಿಳಿಯುತ್ತಿರುವ ಸೂರ್ಯನನ್ನು ನೋಡುತ್ತಾ ಕುಳಿತರೆ ಓದಲೆಂದು ಕೈಯಲ್ಲಿ ಹಿಡಿದ ಪುಸ್ತಕ ಅಲ್ಲೇ. ಅಮ್ಮ ಬಂದು ಎಚ್ಚರಿಸದಿದ್ದರೆ ಕತ್ತಲಾದುದರ ಅರಿವೇ ಇರುತ್ತಿರಲಿಲ್ಲ ನನಗೆ.

ದೊಡ್ಡವಳಾದಂತೆಲ್ಲ, ನನ್ನ ಪುಟ್ಟ ಹೃದಯದಲ್ಲಿ ತುಂಬಿಕೊಂಡ, ನಾನು ಕಂಡ, ಉಂಡ, ಕೇಳಿದ ಘಟನೆಗಳನ್ನು, ಅನಿಸಿಕೆಗಳನ್ನು, ಭಾವನೆಗಳನ್ನು ಅಭಿವ್ಯಕ್ತಿಸುವ ಹಂಬಲ.

ನಾನು ತೀರಾ ಅಂತರ್ಮುಖಿಯಲ್ಲ, ನನಗೆ ಜನರು ಬೇಕು. ಸ್ನೇಹಿತರು ಬೇಕು. ಮಾತು ಬೇಕು. ದಿನವಿಡೀ ಏಕಾಂತ, ಒಂಟಿತನ ಅಸಹನೀಯ. ಹಾಗೆಂದು ಓದುವಾಗ, ಬರೆಯುವಾಗ, ಏಕಾಂತ, ನಿಶ್ಶಬ್ದ ಅವಶ್ಯ. ಹೈಸ್ಕೂಲಿನಲ್ಲಿದ್ದಾಗಲೇ ಬೆಳೆದ ಬರೆಯುವ ಗೀಳು, ಕಾಲೇಜು ಮೆಟ್ಟಲೇರಿದಾಗ, ಕಾಲೇಜು ಮ್ಯಾಗಜಿನ್ ಇತರ ದಿನ–ಮಾಸ– ಪತ್ರಿಕೆಗಳಲ್ಲಿ ಬರಹಗಳು ಪ್ರಕಟವಾಗತೊಡಗಿದವು. ಆದರೂ ನಾನು ಬರೆದುದ್ದೆಲ್ಲ ಜೊಳ್ಳು ಎಂಬ ಅನಿಸಿಕೆ–ಇನ್ನೂ ಬೆಳೆಯಬೇಕೆಂಬ ಹಂಬಲ.

ಆದರೆ ಅದಕ್ಕೆ ತಕ್ಕ ಪರಿಸರ, ಸಂದರ್ಭ ನನಗಿರಲಿಲ್ಲ. ಬಾಲ್ಯದ ನಿಶ್ಚಿಂತೆ, ನೆಮ್ಮದಿ ದೊಡ್ಡವಳಾದಂತೆ ಉಳಿಯಲಿಲ್ಲ. ಡಿಗ್ರಿ ಮುಗಿಸಿದೆ. ಇದರೊಂದಿಗೆ ಬಿ. ಇಡಿಯೂ ಮುಗಿಯಿತು. ಕೂಡಲೇ ಕೆಲಸವೂ ಸಿಕ್ಕಿತು. ನಿರುದ್ಯೋಗದ ನಿರಾಶೆಯ ಚಿಂತೆ ನನ್ನನ್ನು ಕಾಡಿರಲಿಲ್ಲ–ಪುಣ್ಯ.

ಹುಟ್ಟಿದ ಬೆಳೆದ ಊರನ್ನು ಮನೆಯನ್ನು ಸ್ನೇಹಿತರನ್ನು ಬಿಟ್ಟು ದೂರ ಹೋಗಬೇಕಾದಾಗ ಮನ ನೊಂದಿತು. ತಡೆದ ಕಣ್ಣೀರು ಒಳಗೇ ಮಡುಪುಗಟ್ಟಿತ್ತು. ಅಮ್ಮನ ಗೆಳೆಯರ ಧೈರ್ಯದ, ಉತ್ಸಾಹದ ಮಾತುಗಳನ್ನು ನೆನೆಯುತ್ತಾ ಎದೆ ಗಟ್ಟಿ ಮಾಡಿಕೊಂಡೆ. ಪ್ರತಿಯೊಬ್ಬ ಮನುಷ್ಯನಿಗೂ ಇಂಥ ಒಂದು ಅನುಭವ ಬಂದೇ ಬಂದೀತು– ಹೆಣ್ಣಾಗಲಿ, ಗಂಡಿಗಾಗಲಿ. ಸಂದರ್ಭ ಬೇರೆ ಇರಬಹುದು ಅಷ್ಟೆ. "ಜನನೀ

ಜನ್ಮ ಭೂಮಿಶ್ಚ, ಸ್ವರ್ಗಾದಪಿ ಗರೀಯಸಿ" ಎಂಬ ಉಕ್ತಿ ಸುಳ್ಳಲ್ಲ. ಮಮತೆಯ ಬಂಧನ ದಿಂದ ಬಿಡಿಸಿಕೊಳ್ಳುವುದೂ ಅಷ್ಟು ಸುಲಭವಲ್ಲ.

ಹೊಸ ಜಾಗ, ಹೊಸ ವಾತಾವರಣದಿಂದ ನಾ ಹೊತ್ತ ಜವಾಬ್ದಾರಿಯಿಂದ ಮಕ್ಕಳ ನಡುವೆ ಪಾಠ ಹೇಳುತ್ತಾ ನಿಧಾನವಾಗಿ ಬೇಸರ ಮರೆಯ ತೊಡಗಿದೆ.

ಇನ್ನು ಎರಡನೆಯ ಅಂಕ: ವಾಸಕ್ಕೆ ರೂಮ್ ಹುಡುಕಿ, ಹುಡುಕಿ ಕಡೆಗೊಂದು ಮನೆಯಲ್ಲಿ ಪೇಯಿಂಗ್ ಗೆಸ್ಟ್ ಆಗಿ ಸೇರಿಕೊಂಡೆ. ಊಟ ಸಾಧಾರಣ. ಉಪಚಾರ ಅಡ್ಡಿ ಇಲ್ಲ. ಆದರೆ ನಾನಿರುವ ದೊಡ್ಡ ರೂಮಿನಲ್ಲಿ ಮತ್ತೆ ಮೂರು ಜನ ಯುವಕರಿದ್ದಾರೆ. ಎಲ್ಲ ಬೇರೆ ಬೇರೆ ಕಡೆ ಉದ್ಯೋಗಿಗಳು–ಬೆಳಿಗ್ಗೆ ಹೋಗಿ ಸಂಜೆ ಬರುವವರು.

ಸಂಜೆ ನಾನು ಕಾಲೇಜು ಬಿಟ್ಟು ರೂಮಿಗೆ ಬಂದು ಡ್ರೆಸ್ ಬದಲಿಸಿ, ಆರಾಮಾಗಿ ಕಾಲು ಚಾಚಿ ಕುಳಿತು ಏನಾದರೂ ಓದಬೇಕು ಅಥವಾ ಬರೆಯಬೇಕು ಎಂದುಕೊಳ್ಳುತ್ತಿರುವಾಗಲೇ ಬರುತ್ತದೆ ಇವರ ದಂಡು. ಒಬ್ಬನು ದೂರದಿಂದಲೇ ಹಾಡುತ್ತಾ ಬರುತ್ತಾನೆ. ಒಬ್ಬನು ಶಿಳ್ಳೆ ಹಾಕುತ್ತಾ ಬರುತ್ತಾನೆ. ಮತ್ತೊಬ್ಬನು ಬರುಬರುತ್ತಾ ಡಿಸ್ಕೋ ಕುಣಿತ ಶುರು ಮಾಡುತ್ತಾನೆ. ಬಂದವರೇ, ಎಲ್ಲೆಂದರಲ್ಲಿ ತಮ್ಮ ವಸ್ತ್ರ ಕಳಚಿ ಎಸೆಯುತ್ತಾರೆ. ತಿಂಡಿ ತಿನ್ನುತ್ತಾ ಹರಟೆ ಶುರುವಾಗುತ್ತದೆ. ಇವರು ತರುವುದು ಸಿನೇಮಾ ಮ್ಯಾಗಜಿನ್; ಬಿಟ್ಟರೆ ರತಿರಹಸ್ಯ ಕಾಮಕಲಾ ಸುರತಿಗಳಂತಹ ಪುಸ್ತಕಗಳನ್ನು. ಆಡುವ ಮಾತೂ ಅಷ್ಟೇ ಹಗುರ.

ರಾತ್ರಿ ಊಟದ ನಂತರ ಇಸ್ಪೀಟು ಪ್ಯಾಕು ಬಿಡಿಸಿ ಕುಳಿತರೆ ೧೨ ಗಂಟೆಯವರೆಗೆ ಹರಟೆ, ನಗೆ, ಅಶ್ಲೀಲ ತಮಾಷೆಗಳು.

ತಾನು ಬೆಳಿಗ್ಗೆ ಎದ್ದು ರೂಮು ಗುಡಿಸಿ, ನನ್ನ ಹಾಸಿಗೆ, ವಸ್ತ್ರಗಳನ್ನು ಅಚ್ಚುಕಟ್ಟಾಗಿ ಜೋಡಿಸಿಟ್ಟು, ಮೇಜಿನ ಮೇಲೆ ಪುಸ್ತಕಗಳನ್ನು ಓರಣವಾಗಿಟ್ಟು ಹೊರಟರೆ, ಸಂಜೆ ಬರುವಾಗ ರೂಮೆಲ್ಲ ಅಸ್ತವ್ಯಸ್ತ, ಪುಸ್ತಕಗಳೆಲ್ಲ ಚೆಲ್ಲಾಪಿಲ್ಲಿ.

ಪ್ರಾರಂಭದಲ್ಲಿ ನಾನೂ ಅವರೊಡನೆ ಗೆಳೆತನ ಬೆಳೆಸಲೆಳೆಸಿದೆ. ನನ್ನ ನಡತೆಯಿಂದ



ಅವರು ತಮ್ಮನ್ನು ತಿದ್ದಿಕೊಂಡಾರೆಂದು ಭಾವಿಸಿದೆ. ಕೆಲವು ದಿನಗಳ ಬಳಿಕ ನನ್ನ ಓದು, ಬರಹಕ್ಕೆ ಅವರಿಂದಾಗುವ ತೊಂದರೆಯನ್ನು ನಯವಾಗಿಯೇ ತಿಳಿಸಿದೆ. ಊಹುಂ! ಅದರ ಪರಿಣಾಮ ಬೇರೆಯೇ ಆಯಿತು. ನನ್ನನ್ನೇ ಅವರು ತಮಾಷೆಯ ವಸ್ತುವೆಂಬಂತೆ ಕಂಡರು. ಪುಸ್ತಕದ ಹುಳು ಎಂದು ಗೇಲಿ ಮಾಡಿದರು. ಕೊನೆಯ ಅಸ್ತ್ರವೆಂದು ಮನೆಯ ಯಜಮಾನರ ಹತ್ತಿರ ನನಗಾಗುವ ತೊಂದರೆಯನ್ನು ಹೇಳಿಕೊಂಡೆ. ಅವರು ಬಹಳ ವರ್ಷಗಳಿಂದ ಅಲ್ಲಿದ್ದವರು– ಮೇಲಾಗಿ ಅವರ ಸಂಬಂಧಿಕರು ಆದ್ದರಿಂದ ಆ ಯಜಮಾನರು ಏನೂ ಮಾತನಾಡಲಿಲ್ಲ.

ನಾನು ರೂಮಿಗೆ ಬಂದರೆ ಒಬ್ಬ ಹೇಳುತ್ತಾನೆ– "ಶ್, ಸದ್ದು ಮಾಡಬೇಡಿ. ಶ್ರೀ, ಶ್ರೀ ಇವರು ಬರುತ್ತಾರೆ. ಡಿಸ್ಟರ್ಬ್ ಆಗುತ್ತದೆ ಅವರಿಗೆ." ಮತ್ತೊಬ್ಬ ಹ್ಹಿ, ಹ್ಹಿ, ಹ್ಹಿ ಎನ್ನುತ್ತಾನೆ. ಮತ್ತೊಬ್ಬ ಕಣ್ಣು ಮಿಟುಕಿಸುತ್ತಾನೆ. ಒಬ್ಬ ಉಮಾಶಂಕರ, ಒಬ್ಬ ಶಿವಶಂಕರ, ಒಬ್ಬ ರವಿಶಂಕರ, ಇವರಿಂದಾಗಿ ನಾನು 'ಭೋಳೇ ಶಂಕರ'ನಾದೆ.

ಅವರಿವರಿಗೆ ಹೇಳಿ, ವಿನಂತಿಸಿ, ಬೇರೊಂದು ರೂಮು ಗೊತ್ತು ಮಾಡಿಕೊಂಡು, ಅಂತೂ ಈ ಮನೆ ಬಿಟ್ಟೆ. ಮತ್ತೊಂದು ಮನೆ, ಗಂಡ, ಹೆಂಡತಿ, ಮಗ, ಮೂವರೇ. –ಗಲಾಟೆ, ಗೌಜಿ ಇಲ್ಲ. ಎಲ್ಲಾದರೂ ನೆಮ್ಮದಿಯಿಂದ ಓದಿ, ಬರೆಯಬಹುದೆಂದೆಣಿಸಿದೆ.

ಎರಡು ದಿನ ತಣ್ಣಗೆ ಕಳೆಯಿತು. ಮೂರನೇ ದಿನ ಹುಡುಗ ಮೆಲ್ಲನೇ ಬಾಗಿಲ ಒಳಗೆ ನುಸುಳಿದ. ನಾನು ನಕ್ಕೆ. "ಮಾಮ, ಚಿತ್ರದ ಪುಸ್ತಕ ಇದೆಯಾ?" ಎಂದ. "ಇಲ್ಲ ಮರಿ," ಎಂದೆ. ಮೇಜು ಹತ್ತಿದ. ಟ್ಯೂಬ್ ಲೈಟು ಮುಟ್ಟಲು ಹೋದ. "ಇಳಿ ಕೆಳಗೆ," ಎಂದೆ ಗದರಿಸುವ ದನಿಯಲ್ಲಿ. ಮೇಜಿನ ಮೇಲೆ ಕುಳಿತ, ಪುಸ್ತಕ ತೆಗೆದ, ಪೆನ್ನು ತೆಗೆದ. "ಎ. ಬಿ. ಸಿ. ಡಿ. ಬರೆಯಲಾ?" ಎಂದ. "ಬೇಡ, ಕೆಳಗಿಳಿ," ಎಂದೆ. ಇಳಿಯಲಿಲ್ಲ. ಕೈ ಹಿಡಿದು ಕೆಳಗಿಳಿಸಿದೆ— "ಹೋ..." ಆರ್ಭಟಿಸಿ ಅಳಲು ಪ್ರಾರಂಭ. ಅವನ ಅಮ್ಮ ಬಂದು ಎರಡು ಏಟು ಕೊಟ್ಟು ಎಳೆದುಕೊಂಡು ಹೋದರು.

ಸರಿ, ಸಂಜೆ ೬ ರಿಂದ ೯ ರ ತನಕ ಟ್ಯೂಶನ್. ಪೆಟ್ಟು ತಿನ್ನದೇ ಅಳದೇ, ಅವನ ಟ್ಯೂಶನ್ ಮುಗಿಯುವುದೇ ಇಲ್ಲ. ಮಹಾ ಹಟಮಾರಿ, ಪುಂಡ ಹುಡುಗ. ಅಂತೂ ೬ ತಿಂಗಳು ದೂಡಿದೆ ಮತ್ತೆ ರೂಮು ಬದಲಾಯಿಸಿದೆ.

ಈಗ, ಕಾಲೇಜಿನಿಂದ ಅರ್ಧ ಗಂಟೆ ಬಸ್ಸಿನಲ್ಲಿ ಪ್ರಯಾಣ ಮಾಡಿ ಕೆಳಗಿಳಿದರೆ ರಸ್ತೆ ಪ್ರಾರಂಭ. ಎರಡು ಫರ್ಲಾಂಗ್ ಎತ್ತರ ಏರಿ ದಾರಿ ನಾಲ್ಕು ಮೆಟ್ಟಲು ಹತ್ತಿ ಮೇಲೆ ಬಂದು, ಪುನಃ ಆರು ಮೆಟ್ಟಿಲೇರಿ ಮೇಲೆ ಬಂದು ಅಂಗಳ ದಾಟಿದರೆ, ಮನೆ. ಬೆಟ್ಟದ ತುತ್ತ ತುದಿಯಲ್ಲಿ ನಿಂತ ಒಂಟಿಮನೆ. ಅಂಗಳದಲ್ಲಿ ಕ್ರೋಟನ್, ದಾಸವಾಳ ಮಂದಾರ ಗಿಡಗಳು, ಕೆಳಗಿನ ಸ್ತರದಲ್ಲಿ ಮಾವು, ಹಲಸು, ಪೇರಳೆ, ತೆಂಗು ಮೊದಲಾದ ಮರಗಳಿವೆ. ಎಂಟು ಮೆಟ್ಟಿಲ ಕೆಳಗೆ ಬಾವಿಯಿದೆ. ಆರು ಮೆಟ್ಟಿಲ ಕೆಳಗೆ ನಲ್ಲಿಯಿದೆ.

ಮೆಚ್ಚಿದೆ ಮನೆಯನ್ನೂ, ಮೆಚ್ಚಿದೆ ಪರಿಸರವನ್ನೂ. ನನ್ನ ರೂಮು ಒಂದೇ ಆದರೂ ಪಕ್ಕದ, ನಡುವಿನ ಎರಡು ರೂಮಿನಲ್ಲಿ ಇಬ್ಬರಿದ್ದಾರೆ ಯುವಕರು. ಒಬ್ಬ ರಾತ್ರಿ ೧೦ ಗಂಟೆಗೆ ಬರುತ್ತಾನೆ. ಮತ್ತೊಬ್ಬ ಹೆಚ್ಚಾಗಿ ಇಡೀ ದಿನ ಅಲ್ಲಿಯೇ ಇರುತ್ತಾನೆ—ಕೆಲಸ ಕಳೆದುಕೊಂಡ ನಿರುದ್ಯೋಗಿ. ಇಬ್ಬರೂ ಸ್ನೇಹಪರರು. ನನ್ನ ರೂಮಿನಲ್ಲಿ ಏನೂ ಇಲ್ಲದಿದ್ದರೂ, ಅವರ ರೂಮಿನಲ್ಲಿ ಫ್ಯಾನು, ಕುರ್ಚಿ, ಮೇಜನ್ನು ಉಪಯೋಗಿಸುವ ಸ್ವಾತಂತ್ರ್ಯ ನನಗಿತ್ತು. ದೇವರಿಗೆ ಧನ್ಯವಾದವನ್ನರ್ಪಿಸಿ ನನ್ನ ರೂಮಿನ ನಳಪಾಕದೊಂದಿಗೆ ನವ ಜೀವನ ಪ್ರಾರಂಭಿಸಿದೆ.

ಅಕ್ಟೋಬರ್ ರಜೆ ಮುಗಿಸಿ ರೂಮಿಗೆ ಹೊರಟೆ. ರಜೆ ಮುಗಿಯುತ್ತಾ ಬಂದಂತೆ ಎಂಟು

ದಿನ ಜ್ವರ ಬಂದು ತೀರಾ ಸುಸ್ತು, ನಿತ್ರಾಣ. ಅಪ್ಪನ ಎಚ್ಚರಿಕೆಗಳೊಂದಿಗೆ ನನ್ನ ನಳಪಾಕಕ್ಕೆ ಬೇಕಾಗುವ ಸಾಮಗ್ರಿ ಒಂದು ಕೈಯಲ್ಲಿ, ಇನ್ನೊಂದು ಕೈಯಲ್ಲಿ ಸೀಮೆ ಎಣ್ಣೆ ಕ್ಯಾನ್.

ಬಸ್ಸು ಇಳಿದು ಬೆಟ್ಟ ಏರಲು ಪ್ರಾರಂಭಿಸಿದೆ. ಎರಡು ಫರ್ಲಾಂಗ್ ಎರಡು ಮೈಲಿನಂತೆ ಭಾಸವಾಯಿತು. ಉಬ್ಬಸ ಬಿಡುತ್ತಾ, ಮೆಟ್ಟಿಲೇರಿ, ಮನೆಯ ಕಡೆಗೆ ನೋಡಿದೆ. ಬೀಗ ಹಾಕಿತ್ತು. ಹಾಗಾದರೆ ರೂಂಮೇಟುಗಳಿಬ್ಬರೂ ಇಲ್ಲ. ಊರಿಗೆ ಹೋಗಿರುವರೋ ಏನೋ! ಬೀಗ ತೆಗೆದು ಒಳಹೊಕ್ಕೆ. ನಿರ್ಜನ, ನೀರವ. ಸ್ವಿಚ್ ಹಾಕಿದೆ, ಲೈಟ್ ಕೂಡ ಇಲ್ಲ. ಯಾವಾಗ ಹಾಳಾಗಿತ್ತೋ! ಆ ಗಂಭೀರ ಮೌನ ಏಕೋ ಅಸಹನೀಯವೆನಿಸಿತು. ಕಾಲು ತೊಳೆಯಲು ಬಕೆಟ್ ಹಿಡಿದು ನಲ್ಲಿಯ ಬಳಿ ಹೋದೆ. ನೀರು ತಗೆದುಕೊಂಡು ಮೇಲೇರಿದೆ. ಸುಸ್ತೋ–ಸುಸ್ತು. ಕಾಫಿ, ಊಟ, ಯಾವುದೂ ಬೇಡವೆಂದೆನಿಸಿತು. ಸುಮ್ಮನೇ ಬಿದ್ದುಕೊಂಡೆ.

ಮನೆಯ ಹೊರಗಡೆ, ಬೆಟ್ಟದ ಕೆಳಗಿನ ಮನೆಯವರ ನಾಯಿಗಳೆರಡು ಮಲಗಿದ್ದವು. ಅವುಗಳ ಮೈ ತುರಿಸುವ ಪರ-ಪರ ಸದ್ದು, ತರಗೆಲೆಯ ಮೇಲೆ ಓಡಾಡುವ ಕೋಳಿಗಳ ಹೆಜ್ಜೆಯ ಸಪ್ಪಳ. ಸುಯ್ಯೆಂದು ಹಾರುವ ಕಾಗೆಗಳ ಹಾರಾಟ. ಇದನ್ನು ಬಿಟ್ಟರೆ ಬೇರಾವ ಶಬ್ದವೂ ಇಲ್ಲ. ಕತ್ತಲೆ ಏರುತ್ತಿತ್ತು. ಮನೆಯೊಳಗೆ ತುಂಬಿದ ಕತ್ತಲೆ, ಮನದೊಳಗೂ ತುಂಬುತ್ತಿರುವ ಅನುಭವ. ಏನೋ ಒಂದು ರೀತಿಯ ಜಡತ್ವ. ಎದ್ದು ಲ್ಯಾಂಪ್ ಹಚ್ಚಿದೆ. ಬಾಗಿಲಲ್ಲಿ ನಿಂತು ಹೊರಗೆ ನೋಡಿದೆ. ದೂರದಲ್ಲಿ ಬೆಟ್ಟದ ಕೆಳಗೆ ಅಲ್ಲೊಂದು, ಇಲ್ಲೊಂದು ಟ್ಯೂಬ್‌ಲೈಟುಗಳು ಶಾಂತವಾಗಿ ಬೆಳಗುತ್ತಿದ್ದವು. ಇಲ್ಲಿ ಮಾತ್ರ ಜಗತ್ತಿನ ಸಮಸ್ತ ಕತ್ತಲೆಯೂ ಒಂದೆಡೆ ಕೂಡಿ ಹಾಕಿದಂತೆ ಭಯಾನಕವಾಗಿತ್ತು.

ದಿನಗಳು ಉರುಳಿದುವು. ನನ್ನ ಮನೆಯಲ್ಲಿದ್ದ ಆ ಇಬ್ಬರೂ ಬರಲಿಲ್ಲ. ಅನೇಕ ದಿನಗಳ ಬಳಿಕ ಬಂದ ಪತ್ರದಿಂದ ಒಬ್ಬನಿಗೆ ಮದುವೆಯಾಯಿತು–ಇನ್ನೊಬ್ಬನಿಗೆ ಬೇರೆ ಕಡೆಗೆ ವರ್ಗವಾಯಿತೆಂದು ತಿಳಿಯಿತು. ದಿನದಿನಕ್ಕೆ ಈ ಮೌನ ಅಸಹನೀಯವಾಯಿತು. ಏಕಾಂತ ನನ್ನನ್ನು ಹೆದರಿಸುತ್ತಿತ್ತು. ಭೈರಪ್ಪನವರ 'ನಿರಾಕರಣ' ಕಾದಂಬರಿಯಲ್ಲಿನ 'ನರಹರಿ'ಯ ಜೀವನದ ಮಜಲುಗಳ ನೆನಪಾಯಿತು.

ಮನುಷ್ಯನ ಮನಸ್ಸು ಅದೆಷ್ಟು ವಿಚಿತ್ರ? ಜನರ ಗದ್ದಲದ ನಡುವಿದ್ದಾಗ, ಎಷ್ಟು ಸಲ ಹೇಳಿಕೊಳ್ಳುತ್ತಿದ್ದೆ — ದೇವರೇ ಒಂದು ನಿರ್ಜನವಾದ, ಪ್ರಶಾಂತವಾದ ಮನೆ ಸಿಕ್ಕಿದರೆ, ನೆಮ್ಮದಿಯಿಂದ ಕಾಲು ಚಾಚಿ ಕುಳಿತು ನನಗಿಷ್ಟ ಬಂದಂತೆ ಓದುತ್ತಿದ್ದೆ, ಬರೆಯುತ್ತಿದ್ದೆ, ಹಾಡುತ್ತಿದ್ದೆ ಎಂದು. ಈಗ ಸ್ವರವೇ ಹೊರಡದು. ಇದ್ದಾಗ ಅದು ಬೇಡ. "ಇದ್ದುದೆಲ್ಲವ ಬಿಟ್ಟು, ಇರದುದರೆಡೆಗೆ ತುಡಿವುದೇ ಜೀವನ." ಜೀವನದ ಗತಿಯೇ ಹೀಗೆ ಎಂದು ಕಾಣುತ್ತದೆ. ತೃಪ್ತಿ ಎಂಬುದಿಲ್ಲ ಮಾನವನಿಗೆ.

ಹೀಗೆ ಆಲೋಚಿಸಿದಂತೆಲ್ಲ ಮನಸ್ಸು ಗಟ್ಟಿಗೊಳ್ಳುತ್ತದೆ. ಹಾಡುತ್ತೇನೆ. ನಾನಿರುವುದು ದಿನದ ಕೆಲವು ಗಂಟೆಗಳು ಮಾತ್ರ. ಹೆದರುವುದಾದರೂ ಏಕೆ? ರಾತ್ರಿ ಗಟ್ಟಿಯಾಗಿ ರೇಡಿಯೋ ಇಟ್ಟುಕೊಳ್ಳುತ್ತೇನೆ. ಹಾಡುತ್ತೇನೆ. ಅನ್ನ ಮಾಡಿ ಊಟ ಮಾಡುತ್ತೇನೆ, ಓದುತ್ತೇನೆ, ಬರೆಯುತ್ತೇನೆ, ನನಗೆ ಭವಿಷ್ಯ ಇದೆ. ನಾಳೆ ಮಕ್ಕಳೊಡನೆ ಬೆರೆತು ಎಲ್ಲವನ್ನೂ ಮರೆಯುತ್ತೇನೆ. "ಬೆಟ್ಟದಾ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದೊಡೆಂತಯ್ಯ" ಅಲ್ಲ! ಬೆಟ್ಟದಾ ಮೇಲೊಂದು ಮನೆಯ ಮಾಡಿ ಏಕಾಂತಕೆ ಅಂಜಿದೊಡೆ ಎಂತಯ್ಯ– ಅಲ್ಲವೆ? ✡



ಹಳೆ ಹುಚ್ಚುಗಳ ಹಾಗೆ
ಹೊಸ ಹುಚ್ಚುಗಳೂ ಹುಟ್ಟಿಕೊಳ್ಳುತ್ತವೆ!

# ಹೆಣ್ಣು-ಗಂಡಿನ ಕೆಸರಿನ ಕುಸ್ತಿ

**ಸುರೇಶ ಮುನ**

ಕ್ಯಾಲಿಫೋರ್ನಿಯಾದ ಸ್ಯಾಂಡಿಯಾಗೋ ಎಂಬಲ್ಲಿ ನೈಟ್ ಕ್ಲಬ್ ಒಂದರ ಮುಂದೆ ಅಲಂಕೃತವಾದ ಎಲೆಕ್ಟ್ರಾನಿಕ್ ಬೋರ್ಡಿನ ಮೇಲೆ ದಪ್ಪ ಅಕ್ಷರಗಳಲ್ಲಿ ಹೀಗೆ ಬರೆದಿದೆ—"ಇಂದಿನ ವಿಶೇಷ ಆಕರ್ಷಣೆ ಹೆಣ್ಣು ಗಂಡುಗಳ ಕೆಸರಿನ ಕುಸ್ತಿ." ವಿವಿಧ ವಯಸ್ಸಿನ ಜನರು— ಹೆಚ್ಚಾಗಿ ಗಂಡಸರೇ— ಒಳ ಹೊಕ್ಕು ಅಲ್ಲಲ್ಲಿ ಕೂರುತ್ತಿದ್ದಾರೆ. ಬಂದವರೆಲ್ಲರಿಗೂ ಬೀರ್ ಮತ್ತು ಚಿಪ್ಸ್‌ನ್ನು ಕೊಡಲಾಗುತ್ತಿದೆ. ಎದುರಿಗೆ ಜಗಮಗಿಸುವ ಬೆಳಕಿನಿಂದ ಕೂಡಿದ ವೇದಿಕೆ. ಆದೇ ತಾನೇ ಕ್ಯಾಬರೆ ಡ್ಯಾನ್ಸೊಂದು ಮುಗಿದು ವ್ಯಕ್ತಿಯೊಬ್ಬ ವೇದಿಕೆಯ ಮೇಲೆ ಬಂದಿದ್ದಾನೆ. ಅವನೇ ಅಂದಿನ ಹೆಣ್ಣು ಗಂಡುಗಳ ಕುಸ್ತಿಯ ರೆಫ್ರಿ. ಕುಸ್ತಿಗಾಗಿ ವೇದಿಕೆಯ ಮೇಲೆ ಅಖಾಡಾವನ್ನು ಸಿದ್ಧಗೊಳಿಸವುದೂ ಆತನ ಜವಾಬ್ದಾರಿ. ಇದಕ್ಕಾಗಿ ಆತ ರಿಂಗ್ ಒಳಗಿನ ದಪ್ಪವಾದ ಸ್ಪಂಜಿನ ಹಾಸಿಗೆಯ ಮೇಲೆ ಸುಮಾರು ಮೂವತ್ತೈದು ಗ್ಯಾಲನ್ ನಷ್ಟು ಕೆಸರನ್ನು ಹರವುತ್ತಾನೆ. ಈ ಕೆಸರಿನ ತಯಾರಿಕೆಗಾಗಿ, ಹಾಲಿವುಡ್ ತಾರೆಯರ ಮತ್ತು ಅರಬ್ ಶ್ರೀಮಂತರ ಸ್ವರ್ಗ ಎಂದು ಪ್ರಸಿದ್ಧವಾದ ಕ್ಯಾಲಿಫೋರ್ನಿಯಾದ 'ಬೆವರ್ಲಿ ಹಿಲ್ಸ್'ನಿಂದಲೇ ಮಣ್ಣು ಸರಬರಾಜಾಗುತ್ತದೆ. ಕೆಸರಿನಲ್ಲಿ ಸಣ್ಣ ಪುಟ್ಟ ಕಲ್ಲಿನ ಚೂರಾಗಲಿ ಮತ್ತೊಂದಾಗಲೀ ಇಲ್ಲದಂತೆ ಎಚ್ಚರಿಕೆವಹಿಸುವುದು ರೆಫ್ರಿಯ ಕೆಲಸ.

ಸುಮಾರು ಹನ್ನೊಂದು ಗಂಟೆಯ ವೇಳೆಗೆ ಬಾರಿನ ಪ್ರಕಾಶಮಾನವಾದ ದೀಪಗಳು ನಂದಿ ಬೆಳಗುತ್ತ-ಆರುತ್ತ ಪುಳಕವೆಬ್ಬಿಸುವ ಬಣ್ಣದ ಬಲ್ಬ್‌ಗಳು ಹತ್ತಿಕೊಳ್ಳುತ್ತವೆ. ಯುವತಿಯು-ಯರಿಬ್ಬರು ವೇದಿಕೆಯ ಮೇಲೆ ಬಂದು ವಾದ್ಯದ ಗತಿಗೆ ತಕ್ಕಂತೆ ನರ್ತಿಸುತ್ತ ತಮ್ಮ ಹೊರ ಉಡುಪುಗಳನ್ನು ಕಿತ್ತೆಸೆಯುತ್ತಾರೆ. ಈಗ ಅವರು ಕುಸ್ತಿಗೆ ಸಿದ್ಧ. ಅವರಿಬ್ಬರನ್ನೂ ಅಖಾಡಾಕ್ಕೆ ಇಳಿಸಿ ರೆಫ್ರಿ ಸೀಟಿ ಊದುತ್ತಾನೆ. ಕೂಡಲೆ ಇಬ್ಬರೂ ಒಬ್ಬರನ್ನೊಬ್ಬರು ಕೆಡವಲು ಯತ್ನಿಸುತ್ತಾರೆ. ಕೂದಲೆಳೆಯು-ತ್ತಾರೆ. ಕೆಸರಿನಲ್ಲಿ ಬಿದ್ದು ಒಬ್ಬರ ಮೇಲೊಬ್ಬರು ಹೊರಳಾಡುತ್ತಾರೆ. ಕೆಸರನ್ನು ಎಸೆದಾಡು-ತ್ತಾರೆ. ಇರುವ ತುಂಡು ಬಟ್ಟೆಯನ್ನೂ ಕೀಳಲು ಯತ್ನಿಸಿದಾಗ ಪ್ರೇಕ್ಷಕರು ಹುಚ್ಚೆದ್ದು ಕೂಗುತ್ತ ಕಾತರರಾಗಿ ಎದ್ದು ನಿಲ್ಲುತ್ತಾರೆ. ಆದರೆ ಈಗ ರೆಫ್ರಿ ಮಧ್ಯೆ ಪ್ರವೇಶಿಸಿ ಹಾಗಾಗ-ದಂತೆ ತಡೆಯುತ್ತಾನೆ. ಪ್ರೇಕ್ಷಕರು ನಿರಾಶೆ-ಯಿಂದ ಕೂರುತ್ತಾರೆ. ಕೆಲವರು ರಸಭಂಗ ಮಾಡಿದ್ದಕ್ಕೆ ಅವನಿಗೆ ಕೇಳಿಸುವಂತೆ ರೆಫ್ರಿಯನ್ನು ಜರೆಯುತ್ತಾರೆ. ಆದರೆ ಕಟ್ಟುನಿಟ್ಟಾಗಿ ನಿಯಮ ಪಾಲಿಸುವ ರೆಫ್ರಿ ನಿರ್ಲಿಪ್ತನಾಗಿರುತ್ತಾನೆ. ಹೀಗೆ ಮೂರು ನಾಲ್ಕು ಜೋಡಿ ಹೆಣ್ಣುಗಳ ಕುಸ್ತಿ ನಡೆದ ನಂತರ ಬರುತ್ತದೆ, ದಿನದ ವಿಶೇಷ ಆಕರ್ಷಣೆ. ರೆಫ್ರಿಯು ಪ್ರೇಕ್ಷಕರನ್ನುದ್ದೇಶಿಸಿ ಮುಂದೆ ವಿಶೇಷ ಹೆಣ್ಣೊಡನೆ ಕುಸ್ತಿಯಾಡಲು ಪ್ರೇಕ್ಷಕರಿಂದ ಯಾವ ಗಂಡಾದರೂ ಬರಬಹು-

ಬೇಡ. ಇದಕ್ಕಾಗಿ ಸವಾಲು ಮಾಡಬೇಕೆಂದೂ, ಅತಿ ಹೆಚ್ಚು ಸವಾಲು ಮಾಡಿದವನು ವಿಶೇಷ ಹೆಣ್ಣಿನೊಂದಿಗೆ ಕುಸ್ತಿಯಾಡಲು ಅರ್ಹನೆಂದೂ ಸಾರುತ್ತಾನೆ. ಕೂಡಲೇ ಗಂಡುಗಳಿಂದ ಪ್ರಾರಂಭವಾಗುವ ಸವಾಲು ಹತ್ತಿಪ್ಪತ್ತರಿಂದ ಆರಂಭವಾಗಿ ನೂರು ಐನೂರು ರೂಪಾಯಿ ಹೀಗೆ ಏರುತ್ತ ಹೋಗುತ್ತದೆ. ಅತಿ ಹೆಚ್ಚು ಕೂಗಿದ ವ್ಯಕ್ತಿಯನ್ನು ಡ್ರೆಸಿಂಗ್ ರೂಮಿಗೆ ಕರೆದೊಯ್ದು ಕುಸ್ತಿಗೆ ಅವನನ್ನು ಸಿದ್ಧಗೊಳಿಸ-ಲಾಗುತ್ತದೆ.

ಇದೇ ವೇಳೆಗೆ ವಾದ್ಯ ಸಂಗೀತದ ನುಡಿತಕ್ಕೆ ತಕ್ಕಂತೆ ನರ್ತಿಸುತ್ತಾ ವೇದಿಕೆಯ ಮೇಲೆ ಬರುತ್ತಾಳೆ ಅಂದಿನ ವಿಶೇಷ ಹೆಣ್ಣು. ನರ್ತಿಸುತ್ತಾ ತನ್ನ ಮೇಲಿನ ಉಡುಪುಗಳನ್ನೆಲ್ಲ ಕಳಚಿ ಎಸೆಯುವ ವೇಳೆಗೆ ಗಂಡು ವೇದಿಕೆಯ ಮೇಲೆ ಬರುತ್ತಾನೆ. ತಮ್ಮಿಬ್ಬರ ನಡುವೆ ನಡೆಯುವ ಈ ಕುಸ್ತಿಯಲ್ಲಿ ಯಾವ ದುರುದ್ದೇಶವಿಲ್ಲವೆಂಬುದರ ಸೂಚಕವಾಗಿ ಗಂಡು ಹೆಣ್ಣು ಪರಸ್ಪರ ಚುಂಬಿಸುತ್ತಾರೆ. ಈ ವೇಳೆಯಲ್ಲಿ ಗಂಡು ಪ್ರೇಕ್ಷಕರಲ್ಲಿ ಹೆಣ್ಣುಗಳ ಕಡೆಗೆ ಮುತ್ತನ್ನು ಹಾರಿಸಬಹುದು. ಆದರೆ ಹೀಗೆ ಈ ಗಂಡಿನಿಂದ ಫ್ಲೈಯಿಂಗ್ ಕಿಸ್ ಬಯಸುವ ಪ್ರೇಕ್ಷಕ ಮುತ್ತೊಂದಕ್ಕೆ ಹತ್ತು ರೂಪಾಯಿ ತೆರಬೇಕಾಗುತ್ತದೆ. ವ್ಯಕ್ತಿ ಪ್ರಸಿದ್ಧ ಆಟಗಾರನೋ ನಟನೋ ಆಗಿದ್ದರೆ ಈ ಹಾರು ಮುತ್ತುಗಳಿಂದ ಬರುವ ಹಣದಿಂದಲೆ ಬಿಡ್ ಮಾಡಿ ತೆತ್ತ ಹಣವನ್ನು ಹಿಂದಕ್ಕೆ ಪಡೆದು ಬಿಡಬಹುದು.

ಇನ್ನು ರೆಫ್ರಿ ಇಬ್ಬರನ್ನೂ ಅಖಾಡಕ್ಕೆ ಕರೆದು ತಂದು ಮೂರು ಸುತ್ತಿನ ಕುಸ್ತಿಯಲ್ಲಿ ಪರಸ್ಪರ ಕಚ್ಚುವುದಾಗಲಿ ಬಟ್ಟೆಗಳನ್ನೆಳೆಯುವುದಾಗಲೀ [illegible] ತಿಳಿಸುತ್ತಾನೆ. ಅವನು ಸೀಟಿ ಊದಿದ ಕೂಡಲೆ ಹೆಣ್ಣು ಗಂಡುಗಳ ಕುಸ್ತಿ ಪ್ರಾರಂಭವಾಗುತ್ತದೆ. ಹೆಣ್ಣು ತನ್ನ ಕೈಕಾಲುಗಳನ್ನಾಡಿಸುತ್ತಾ ಗಂಡಿನ ಮೇಲೆ ಎರಗುತ್ತಾಳೆ. ಅವಳಿಂದ ತಪ್ಪಿಸಿಕೊಂಡು ಅವಳನ್ನು ಕೆಳಗುರುಳಿಸಲು ಯತ್ನಿಸುತ್ತಾನೆ ಗಂಡು. ಈ ಯತ್ನದಲ್ಲಿ ಇಬ್ಬರೂ ಕೆಸರಲ್ಲಿ ಬಿದ್ದು ಹೊರಳಾಡುತ್ತಾರೆ. ಈ ಉರುಳಾಟ, ಕಿತ್ತಾಟ ಕ್ರಮೇಣ ಬಿರುಸಾಗಿ ಬೆವರ್ಲಿ ಹಿಲ್ಸಿನ ಕೆಸರು ಸುತ್ತಲೂ ಎರಚಲ್ಪಡುತ್ತದೆ. ಎಷ್ಟೋ ಬಾರಿ ಬಿಡಿಸಲು ಮಧ್ಯ ಬಂದ ರೆಫ್ರಿಯ ಮೇಲೂ ಕೆಸರಿನ ಅಭಿಷೇಕವಾಗುತ್ತದೆ. ಹೀಗೆ ಎರಡು ಸುತ್ತುಗಳು ಮುಗಿದು ಕೊನೆಯ ಸುತ್ತಿನಲ್ಲಿ ಹೆಣ್ಣು ಗಂಡನ್ನು ಕೆಳಗೆ ಬೀಳಿಸಿ, ರೆಫ್ರಿಯು ಎಣಿಕೆ ಮುಗಿಸುವಷ್ಟರಲ್ಲಿ ಏಳಲಾರದೆ ಗಂಡು ಸೋಲುತ್ತಾನೆ. ಹೆಣ್ಣು ಗೆದ್ದೆನೆಂದು ಕೆಸರಿನಲ್ಲಿ ಕುಣಿಯುತ್ತಾಳೆ. ಪ್ರತಿ ಬಾರಿಯೂ ಹೆಣ್ಣೇ ಗೆಲ್ಲುತ್ತಾಳೆಂಬ ನಿಯಮವೇನೂ ಇಲ್ಲದಿದ್ದರೂ, ಹೆಣ್ಣೆಂಬ ಕಾರಣದಿಂದಲೋ ಅಥವಾ ಇದು ಕೇವಲ ಮೋಜಿನ ಕುಸ್ತಿಯೆಂದೋ ಒಟ್ಟಿನಲ್ಲಿ ಸಾಮಾನ್ಯವಾಗಿ ಗಂಡಸರು ಸೋಲುತ್ತಾರೆ. ಮುಂದೆ ಇಬ್ಬರನ್ನು ಅಖಾಡದಿಂದ ಹೊರಕ್ಕೆ ತಂದು ಒಂದು ಸ್ನಾನದ ದೊಡ್ಡ ಟಬ್ಬಿನಲ್ಲಿ ಕೂರಿಸಿ ಚೆನ್ನಾಗಿ ನೀರು ಸುರಿಯುತ್ತಾರೆ. ನಂತರ ಇಬ್ಬರಿಗೂ ತಿನ್ನಲು ಕುಡಿಯಲು ಧಾರಾಳವಾಗಿ ಕೊಡುತ್ತಾರೆ. ಇಬ್ಬರೂ ಮತ್ತೆ ಪರಸ್ಪರ ಚುಂಬಿಸಿ ಬೇರೆಯಾಗುತ್ತಾರೆ.

ಇತ್ತೀಚೆಗೆ ದಕ್ಷಿಣ ಕ್ಯಾಲಿಫೋರ್ನಿಯಾದ ಕ್ಲಬ್ಬುಗಳಲ್ಲಿ ಈ ರೀತಿಯ ಕೆಸರಿನ ಕುಸ್ತಿ ಅತ್ಯಂತ ಜನಪ್ರಿಯವಾಗುತ್ತಿದೆ. ಹೆಚ್ಚಿನ ಡಿಸ್ಕೋ ತರಗಳು, ನೈಟ್ ಕ್ಲಬ್‌ಗಳು ಈ ಕುಸ್ತಿಯನು ಏರ್ಪಡಿಸುತ್ತವೆ. ಈ ಕುಸ್ತಿಯ ಪ್ರಮೋಟರ್ ಮೂವತ್ತೆರಡು ವರುಷದ ರಿಚರ್ಡ್ ಮಾರ್ಕರ್ ಪ್ರಕಾರ ಈ ಆಟ ೧೯೬೦ ರಲ್ಲಿ ಜರ್ಮನಿಯಲ್ಲಿ ಕ್ಯಾಬರೇ ಆಟವಾಗಿ ಪ್ರಾರಂಭವಾಗಿ ಈಗ ಎಷ್ಟು ಜನಪ್ರಿಯವಾಗಿದೆಯೆಂದರೆ ಈ ಕುಸ್ತಿಗಾಗಿ ಕ್ಯಾಬರೆ ನರ್ತಕಿಯರಷ್ಟೇ ಅಲ್ಲದೇ ಗೃಹಿಣಿಯರೂ ಕಾಲೇಜು ಯುವತಿಯರೂ ಹೆಚ್ಚು ಸಂಖ್ಯೆಯಲ್ಲಿ ಬರುತ್ತಿದ್ದಾರಂತೆ. ❁

# ಅಸಂಘಟಿತ ಕಾರ್ಮಿಕರ ಬದುಕಿಗೆ ಆಸರೆ ನೀಡುವ ಆಶಾಕಿರಣ

**ರಾಜ್ಯದ ಅಸಂಘಟಿತ ಕಾರ್ಮಿಕರು ಅಪಘಾತಕ್ಕೊಳಗಾಗಿ ತೊಂದರೆಗೀಡಾದಾಗ, ಅವರಿಗೆ ಅಥವಾ ಅವರನ್ನು ಅವಲಂಬಿಸಿದ ಕುಟುಂಬದವರಿಗೆ ತಕ್ಷಣ ಆರ್ಥಿಕ ನೆರವು ಒದಗಿಸುವ 'ಆಶಾಕಿರಣ ಯೋಜನೆ' ಯನ್ನು ಕರ್ನಾಟಕ ಸರಕಾರ ಜಾರಿಗೆ ತಂದಿದೆ.**

ಅಪಘಾತಗಳು ಹೇಳಿ ಕೇಳಿ ಸಂಭವಿಸುವುದಿಲ್ಲ; ಅತೀವ ಕಷ್ಟಗಳನ್ನು, ಅನಿರೀಕ್ಷಿತ ಆರ್ಥಿಕ ಮುಗ್ಗಟ್ಟನ್ನು ತರುತ್ತದೆ. ಕೃಷಿ ಕಾರ್ಮಿಕರು ಮತ್ತು ಕಾರ್ಮಿಕ ಸಂಘಟನೆಗಳಲ್ಲಿರದ ಕ್ಷೇತ್ರದ ಕೆಲಸಗಾರರಿಗೆ ಈ ಮಾತು ಅನ್ವಯಿಸುತ್ತದೆ. ಬಹುಪಾಲು ಪರಿಹಾರ ಯೋಜನೆಗಳ ವ್ಯಾಪ್ತಿಯಿಂದ ಹೊರಗುಳಿದಿರುವ ಅಂತಹಜನರ ಸಂಕಷ್ಟ ನಿವಾರಿಸಲು ಕರ್ನಾಟಕ ಸರ್ಕಾರ ವಿಶಿಷ್ಟ ಯೋಜನೆಯೊಂದನ್ನು ರೂಪಿಸಿದೆ. ಈ ಯೋಜನೆಯನ್ವಯ ಅಪಘಾತದ ಬಗೆಯನ್ನು ಪರಿಗಣಿಸಿ ನೊಂದವರಿಗೆ ಆರ್ಥಿಕ ಪರಿಹಾರಕ್ಕೆ ಅವಕಾಶವಿದೆ.

**ಅರ್ಹತೆ**

೧೬ ರಿಂದ ೬೫ ವರ್ಷಗಳ ಒಳಗಿನ, ವಾರ್ಷಿಕ ಆದಾಯ ೬,೦೦೦ ರೂ. ಗಳಿಗೆ ಮೀರದ ಈ ಮುಂದೆ ತಿಳಿಸಿದ ಕಸುಬುಗಳ ಶ್ರಮ ಜೀವಿಗಳು ಮತ್ತು ಅವರ ಅವಲಂಬಿಗಳು ಈ ಯೋಜನೆಯನ್ವಯ ಆರ್ಥಿಕ ನೆರವು ಪಡೆಯುತ್ತಾರೆ. ಕಾರ್ಮಿಕರ ಪರಿಹಾರ ನಿಧಿ ಕಾಯಿದೆಯನ್ವಯ ಆರ್ಥಿಕ ಪರಿಹಾರ ಪಡೆದಿರುವವರು ಆಶಾಕಿರಣ ಯೋಜನೆಗೆ ಅರ್ಹರಾಗುವುದಿಲ್ಲ.

ಕೃಷಿಕಾರ್ಮಿಕರು, ಬೆಸ್ತರು, ಬೀಡಿ ಕಾರ್ಮಿಕರು, ಹೆಂಡ ಇಳಿಸುವವರು, ಬೋಜಗಳು, ಮೋಚಿಗಳು, ಬಡಿಗಿಗಳು, ಗಾಡಿತಯಾರಿಸುವವರು, ಗ್ರಾಮಾಂತರ ಕಮ್ಮಾರರು, ಅಕ್ಕಸಾಲಿಗರು, ಲೋಹ ಕೆತ್ತನೆಗಾರರು, ಪ್ರಾಣಿಗಳು ಎಳೆಯುವ ವಾಹನಗಳ ಚಾಲಕರು, ಸೈಕಲ್ ರಿಕ್ಷಾ ಎಳೆಯುವವರು ಕ್ಷೌರಿಕರು, ದರ್ಜಿಗಳು, ರಸ್ತೆಯಲ್ಲಿ ಕೂಗಿ ಮಾರುವವರು, ಕೈಗಾಡಿ ಎಳೆಯುವವರು, ಬುಟ್ಟಿ ಹೆಣೆಯುವವರು ಜೆಲ್ಲಿ ಒಡೆಯುವವರು, ಮಾಂಸ ಸಿದ್ಧಪಡಿಸುವವರು, ಗಾರೆ ಕೆಲಸಗಾರರು, ಹಂಚು ಕೆಲಸಗಾರರು, ಗುಡಿಸಲು ಕಟ್ಟುವವರು, ಛಾವಣಿ ಹೊದಿಸುವವರು, ಬಾವಿತೋಡುವವರು, ಕೈಮುಗ್ಗ ನೇಕಾರರು, ಲೋಕೋಪಯೋಗಿ ಮತ್ತು ನೀರಾವರಿ ಯೋಜನೆಗಳ ಎನ್.ಎಮ್.ಆರ್. ಕೆಲಸಗಾರರು ಹಾಗೂ ಗುಡ್ಡ ಗಾಡಿನ ಕಾರ್ಮಿಕರು.

**ವ್ಯಾಪ್ತಿ**

ಮೇಲೆ ಕಾಣಿಸಿರುವ ಶ್ರಮಜೀವಿಗಳು ದುಡಿಯುವಾಗ ಅಪಘಾತಕ್ಕೀಡಾಗಿ ಶಾರೀರಿಕ ಹಾನಿಗೊಳಗಾದಲ್ಲಿ ಅಂಥವರಿಗೆ ಆಶಾಕಿರಣ ಯೋಜನೆಯಿಂದ ನೆರವು ಸಿಗುತ್ತಿದೆ. ರೈಲು ಮತ್ತು ರಸ್ತೆ ಅಪಘಾತಗಳು. ವಿದ್ಯುಚ್ಛಕ್ತಿ ತಗಲಿ ಹಾನಿ, ಹಾವು ಕಚ್ಚುವಿಕೆ, ನೀರಿನಲ್ಲಿ ಮುಳುಗಿ ಸಾಯುವುದು, ಬೆಂಕಿ ಆಕಸ್ಮಿಕ, ಮರದ ಮೇಲಿಂದ ಬೀಳುವುದು, ಕ್ರೂರ ಮೃಗಗಳಿಂದಾಗುವ ಆಘಾತ ಮುಂತಾದ ಆಕಸ್ಮಿಕ ಅನಾಹುತದಲ್ಲಿ ನೊಂದವರಿಗೆ ಈ ಪರಿಹಾರ ಲಭ್ಯ.

**ಪರಿಹಾರ**

ಈ ಯೋಜನೆಯಂತೆ ಅಪಘಾತದಲ್ಲಿ ಕಾರ್ಮಿಕನ ಒಂದು ಅಂಗ ಹೀನವಾದರೆ, ೨,೫೦೦ ರೂಪಾಯಿ ಎರಡು ಅಂಗಗಳ ಶಾಶ್ವತ ನಷ್ಟ ಉಂಟಾದರೆ ೪,೦೦೦ ರೂಪಾಯಿ ಹಾಗೂ ಅಪಘಾತದಲ್ಲಿ ಕಾರ್ಮಿಕನ ಮರಣ ಸಂಭವಿಸಿದರೆ ವಾರಸುದಾರರಿಗೆ ೫,೦೦೦ ರೂಪಾಯಿಗಳ ಪರಿಹಾರ ನೀಡಲಾಗುತ್ತಿದೆ.

**ಪಡೆಯುವ ಬಗೆ**

ಅಪಘಾತಕ್ಕೀಡಾದ ಕಾರ್ಮಿಕರು ಇಲ್ಲವೆ ಅವರು ಮೃತ ಹೊಂದಿದರೆ ಅವರ ವಾರಸುದಾರರು ಅಂದರೆ ತಂದೆ, ತಾಯಿ, ಗಂಡ, ಹೆಂಡತಿ, ಆಶ್ರಿತ ಹಿರಿಯ ಮಗ, ಮಗಳು, ಹಿರಿಯ ಸಹೋದರ ಸಹೋದರಿ– ಅಪಘಾತ ಸಂಭವಿಸಿದ ೩೦ ದಿನಗಳ ಒಳಗಾಗಿ ನಮೂನೆ ನಂ. ೧ರಲ್ಲಿ ಸೂಚನೆಯನ್ನು ಕೊಡಬೇಕು ಮತ್ತು ೩ ತಿಂಗಳೊಳಗಾಗಿ ಅರ್ಜಿಯನ್ನು ನಮೂನೆ ೨ ರಲ್ಲಿ ಗ್ರಾಮಾಂತರ ಪ್ರದೇಶವಾದಲ್ಲಿ ಆಯಾ ತಾಲೂಕಿನ ತಹಸೀಲ್ದಾರರವರಿಗೆ, ನಗರ ಪ್ರದೇಶವಾದರೆ ಪುರಸಭೆಯ ಮುಖ್ಯಾಧಿಕಾರಿ ನಗರ ಸಭೆಯ ಕಂದಾಯ ಅಧಿಕಾರಿಗಳಿಂದ ಅರ್ಜಿಯನ್ನು ಸಲ್ಲಿಸಬೇಕು. ವೈದ್ಯಾಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರವನ್ನೂ ಈ ಅರ್ಜಿಯೊಂದಿಗೆ ಲಗತ್ತಿಸಿರಬೇಕು.

ಅರ್ಜಿ ನಮೂನೆ ಹಾಗೂ ಹೆಚ್ಚಿನ ವಿವರಗಳಿಗಾಗಿ ನಿಮ್ಮ ತಾಲ್ಲೂಕು ತಹಸೀಲ್ದಾರರು' ಪುರಸಭೆಯ ಮುಖ್ಯಾಧಿಕಾರಿಗಳು ಇಲ್ಲವೇ ಮಹಾನಗರ ಪಾಲಿಕೆಯ ಕಂದಾಯ ಅಧಿಕಾರಿಗಳನ್ನು ಅಥವಾ ಹತ್ತಿರದ ಕಾರ್ಮಿಕ ಇಲಾಖೆಯ ಅಧಿಕಾರಿಗಳನ್ನು ಸಂಪರ್ಕಿಸಿ.

**ಕರ್ನಾಟಕ ವಾರ್ತೆ**

ಹೆಚ್ಚಿನ ವಿವರಗಳಿಗೆ ಬರೆಯಿರಿ:– ಆಯುಕ್ತರು ಕಾರ್ಮಿಕ ಇಲಾಖೆ,ವಿ.ಐ.ಎಸ್.ಎಲ್ ಕಟ್ಟಡ, ಜೆ.ಸಿ. ರಸ್ತೆ, ಬೆಂಗಳೂರು–೩

ಡಿಐಪಿ ೪೦೦/೮೬


ಮೂಲ:
ರೈಡರ್ ಹ್ಯಾಗಾರ್ಡ್
ಕನ್ನಡಕ್ಕೆ:
ಗೀತಾ ಮುರಲಿ

# ಆಯೇಶಾಳ ಪುನರ್ಜನ್ಮ

**ಖಾನಿಯಾ ಅತಿನಿಯ ಅಜ್ಞಗಾವಲನ್ನು ತಪ್ಪಿಸಿಕೊಂಡು ಹೊರಟ ಲಿಯೊ ಮತ್ತು ಹೊಲ್ಲಿ ಪರ್ವತದ ಮೇಲಿನ ಜ್ವಾಲೆಯಲ್ಲಿರುವ ದೇವತೆ ಹಿಸಿಯಾಳ ದರ್ಶನಾಕಾಂಕ್ಷಿಗಳಾದರು. ಪ್ರಯಾಸದಿಂದ ಹೊರಟು ಅಗ್ನಿಪರ್ವತವನ್ನೇರಿದರು. ಆ ಮಹಾಮಂದಿರದಲ್ಲಿ ರಜತ ಪರದೆಯ ಹಿಂದೆ ರಜತ ಪ್ರತಿಮೆ ಕಂಡಿತು. 'ಹಿಸಿಯಾ'ಳ ದರ್ಶನಕ್ಕಾಗಿ ಕಾಯ್ದು ನಿಂತರು.**

**ರೈಡರ್ ಹಗ್ಗಾರ್ಡನ 'ಷಿ' ಕಾದಂಬರಿಯ ಉತ್ತರಾರ್ಧ 'ಆಯೇಶಾ: ದಿ ರಿಟರ್ನ್ ಆಫ್ ಷಿ'ಯ ಅನುವಾದದ ಎರಡನೆಯ ಹಾಗೂ ಕೊನೆಯ ಭಾಗ ಇದು.**

ಕೊನೆಗೊಮ್ಮೆ ರಜತ ಪರದೆ ಸರಿಯಿತು. ಎದುರಿಗೊಂದು ಕೋಣೆ. ಅದರ ನಡುವೆ ಇದ್ದ ಭವ್ಯ ಸಿಂಹಾಸನದ ಮೇಲೆ ಅಡಿಯಿಂದ ಮುಡಿಯ ವರೆಗೆ ಬಿಳಿ ಬಟ್ಟೆ ಹೊದಿಸಿದ ಒಂದು ಆಕೃತಿ. ಅದರ ಕೈಯಲ್ಲಿ ರತ್ನಾಲಂಕೃತ ರಾಜದಂಡ. ಆ ಮಬ್ಬುಗತ್ತಲೆಯಲ್ಲಿ ನಮಗೆ ಕಂಡದು ಇಷ್ಟೇ.

ಯಾವುದೋ ಭಾವನೆಯಿಂದ ಪ್ರೇರಿತರಾಗಿ, ನಾವೂ ಸಾಷ್ಟಾಂಗವೆರಗಿ, ಮಂಡೆಯೂರಿ-ಕೊಂಡು ನಿಂತೆವು. ಸ್ವಲ್ಪ ಹೊತ್ತಿನ ಮೇಲೆ ಕಿರು ಗಂಟೆಗಳ ನಿನಾದ ಕೇಳಿ ತಲೆಯೆತ್ತಿದೆವು. ರಾಜದಂಡ ಹಿಡಿದ ಕೈ ನಮ್ಮತ್ತ ಚಾಚಿತ್ತು. ಜೊತೆಗೆ ಗ್ರೀಕ್ ಭಾಷೆಯಲ್ಲಿ, ಮೃದುವಾದ ಸ್ಪಷ್ಟ ಸ್ವರ ಕೇಳಿಸಿತು:

'ಪ್ರಯಾಣಿಕರೆ, ನಿಮಗೆ ಸ್ವಾಗತ. ಇಷ್ಟು ದೂರದ ಈ ಪುರಾತನ ಮಂದಿರಕ್ಕೆ ಬಂದು ಅದರ ದಿವ್ಯವಾಣಿಗೆ ವಂದನೆ ಸಲ್ಲಿಸಲು ಹಿಂಜರಿಯದ ನಿಮಗೆ ಅಭಿನಂದನೆಗಳು. ಏಳಿ, ಭಯ ಪಡಬೇಡಿ.'

ಸಾವಕಾಶವಾಗಿ ಎದ್ದೆವು. ಮುಂದೇನು ಮಾತಾಡಬೇಕೆಂದು ತಿಳಿಯದೆ ಸುಮ್ಮನೆ ನಿಂತುಕೊಂಡೆವು. ಮತ್ತೆ ಅದೇ ಮೃದುಸ್ವರ:

'ಪ್ರಯಾಣಿಕರೆ, ಇಷ್ಟು ದೂರ ಏನು ಹುಡುಕಲು ಬಂದಿರುವಿರಿ? ನಿಮ್ಮ ಹೆಸರೇನು?'

ನಮ್ಮ ಹೆಸರು ಹೇಳಿ ನಾನೆಂದೆ: 'ಓ ಹಿಸಿಯಾ, ನಾವಿಲ್ಲಿಗೆ ಬಂದದ್ದು ಒಂದು ದೊಡ್ಡ ವಿಚಿತ್ರ ಕಥೆ.'

'ನಾನು ಆ ಕಥೆಯನ್ನು ಕೇಳಬೇಕು. ನೀವು

[illegible]. ಇಂದೇ ರಾತ್ರಿ ಪೂರ್ಣ ಕಥೆಯನ್ನು ಹೇಳುವುದು ಬೇಡ; ಸ್ವಲ್ಪ ಸಾಕು.' ಆಕೆಯ ಧ್ವನಿಯಲ್ಲಿ ಆತುರವಿತ್ತು.

ಲಿಯೋ ಕಥೆ ಆರಂಭಿಸಿದ. 'ಎಷ್ಟೋ ವರ್ಷಗಳ ಹಿಂದೆ ಚಿಕ್ಕವನಿದ್ದಾಗ ನಾನೂ ನನ್ನ ದತ್ತಕ ತಂದೆಯೂ ಹಿಂದಿನ ದಾಖಲೆಗಳಿಂದ ಪ್ರೇರಿತರಾಗಿ ಒಂದು ವಿಚಿತ್ರ ದೇಶಕ್ಕೆ ಹೋಗಿ ಅಲ್ಲಿ ಅಮರಳಾದ, ದಿವ್ಯ ಸ್ತ್ರೀಯೊಬ್ಬಳನ್ನು ಕಂಡೆವು.'

'ಹಾಗಾದರೆ ಅವಳು ಕುರೂಪಿಯೂ ವೃದ್ಧಳೂ ಆಗಿರಬೇಕು!'

'ಊಹುಂ-- ಚಿರಯೌವನೆಯಾದ ಆಕೆಯು ಅನುಪಮ ಸೌಂದರ್ಯಕ್ಕೆ ಮತ್ತೊಂದು ಹೆಸರಾಗಿದ್ದಳು.'

'ಅಂತೆಯೇ ಪುರುಷ ಸ್ವಾಭಾವಕ್ಕನುಗುಣವಾಗಿ ಆ ಸೌಂದರ್ಯಕ್ಕೋಸ್ಕರ ನೀನು ಅವಳನ್ನು ಪೂಜಿಸಿದೆಯಲ್ಲವೇ?'

'ಪೂಜಿಸಲಿಲ್ಲ; ಪ್ರೇಮಿಸಿದೆ.'

'ಈಗಲೂ ಪ್ರೇಮಿಸುತ್ತಿರುವೆಯಾ?'

'ಹೌದು; ಸತ್ತರೂ ಅವಳನ್ನು ಪ್ರೇಮಿಸುವೆ.'

'ಅವಳು ಅಮರ ಅಂದೆಯಲ್ಲ? ಸಾಯುವ ಮಾತೇಕೆ?'

'ಅವಳು ಸತ್ತಿರಬೇಕು ಅನಿಸಿತು. ಬಹುಶಃ ಅವಳು ರೂಪಾಂತರ ಹೊಂದಿರಬಹುದು. ಅಂತೂ ಅವಳನ್ನು ಕಳೆದುಕೊಂಡು ಇಷ್ಟು ವರ್ಷಗಳಿಂದ ಹುಡುಕುತಲಿದ್ದೇನೆ.

'ನನ್ನದಾದ ಈ ಪರ್ವತದಲ್ಲಿ ಅವಳನ್ನು ಶೋಧಿಸುತ್ತ ಬಂದೆಯಲ್ಲ? ಏಕೆ?'

'ಇಲ್ಲಿ ದಿವ್ಯ ದೃಶ್ಯವೊಂದನ್ನು ಕಂಡೆ. ಹೀಗಾಗಿ ಕಳೆದ ಹೋದ ನನ್ನ ಪ್ರೇಯಸಿ ಇಲ್ಲಿಯೇ ದೊರಕಬಹುದೆಂದು ಬಂದೆ.'

'ಹೊಲ್ಲಿ. ಅವಳನ್ನು ನೀನೂ ಪ್ರೇಮಿಸಿದೆಯಾ?'

'ಇಲ್ಲ, ತಾಯಿ. ಈ ಅನ್ವೇಷಣೆಯಲ್ಲಿ ನನ್ನ ದತ್ತಕ ಪುತ್ರನನ್ನು ಹಿಂಬಾಲಿಸುತ್ತಿದ್ದೇನೆ.'

'ಹಾಗಾದರೆ, ನೀವಿಬ್ಬರೂ ಸೌಂದರ್ಯದ ಹುಚ್ಚು ಹಿಡಿದು ಬೆನ್ನಟ್ಟಿದವರು.'

'ಇಲ್ಲ' ನಾನೆಂದೆ, 'ನಾವು ಹುಚ್ಚರಲ್ಲ. ಹುಚ್ಚರಿಗೆ ಸೌಂದರ್ಯವೆಂದರೆ ಏನೆಂಬುದು ಗೊತ್ತೆ? ಓ ಹಿಸಿಯಾ, ಜ್ಞಾನ ದೃಷ್ಟಿಗಳೆರಡೂ ಬುದ್ಧಿವಂತರ ಸ್ವತ್ತು.'

'ಹೊಲ್ಲಿ, ನಿನ್ನ ಬುದ್ಧಿ, ನುಡಿ ಎರಡೂ ಚುರುಕು.' ಎಂದು ಒಮ್ಮೆಲೆ ತಡೆದಳು. ಅನಂತರ, 'ನನ್ನ ಸೇವಕ ಕಾಲೂನ್‌ದ ಖಾನಿಯಾ ನಿಮಗೆ ಒಳ್ಳೆ ಅತಿಥಿ ಸತ್ಕಾರ ನೀಡಿ, ನನ್ನ ಆಜ್ಞೆಯಂತೆ ನಿಮ್ಮ ಮುಂದಿನ ಪ್ರಯಾಣಕ್ಕೆ ಅನುಕೂಲ ಮಾಡಿಕೊಟ್ಟಳೆ? ನೀವು ಬರುವುದರಲ್ಲಿ ವಿಳಂಬವಾಯಿತೇಕೆ?'

'ಸಾಧ್ಯವಿದ್ದಷ್ಟು ಬೇಗನೇ ಬಂದಿದ್ದೇವೆ. ಆದರೂ ವಿಳಂಬದ ಕಾರಣವನ್ನು ಮಾತ್ರ ಕೇಳಬೇಡ. ನಾವು ಬರುವುದನ್ನು ಅರಿತವಳು ನೀನು. ವಿಳಂಬದ ಕಾರಣವೂ ನಿನಗೆ ತಿಳಿದಿರಬೇಕು.'

'ಹಾಗಾದರೆ ನಾನು ಅತಿನಿಯನ್ನೇ ಕೇಳುತ್ತೇನೆ, ಆಕೆ ಇಲ್ಲಿಯೆ ಹೊರಗಡೆ ನಿಂತಿದ್ದಾಳೆ. ಓರೋಸ್, ಖಾನಿಯಾಳನ್ನು ಕರೆದುಕೊಂಡು ಬಾ' ಎಂದು ಆದೇಶಿಸಿದಳು.

ಆಪಾದಮಸ್ತಕ ಕಪ್ಪು ಮುಸುಕು ಹಾಕಿಕೊಂಡ ಅತಿನಿ ಒಳಗೆ ಬಂದಳು. ಮುಂದೆ ಬಂದು ಹಿಸಿಯಾಗೆ ಹೆಮ್ಮೆಯಿಂದ ವಂದಿಸಿದಳು.

'ಅತಿನಿ, ನನ್ನ ಈ ಅತಿಥಿಗಳನ್ನು ನೇರವಾಗಿ ಇಲ್ಲಿಗೆ ಕರೆತರಬೇಕೆಂದು ನಿನ್ನ ಮಾವನ ಮೂಲಕ ನಿನಗೆ ಸಂದೇಶ ಕಳಿಸಿರಲಿಲ್ಲವೇ? ನನ್ನ ಆಜ್ಞೆಯನ್ನೇಕೆ ಉಲ್ಲಂಘಿಸಿದೆ?'

'ಯಾಕೆಂದರೆ? ಹಿಸಿಯಾ ಈತನನ್ನು ನಾನು ಪ್ರೇಮಿಸುತ್ತೇನೆ. ಆತ ನಿನ್ನವನಲ್ಲ; ಬೇರೆ ಯಾವ ಸ್ತ್ರೀಯ ಸ್ವತ್ತೂ ಅಲ್ಲ. ಆತ ನನ್ನವ; ಕೇವಲ ನನ್ನವ. ನಾನು ಹುಟ್ಟನಿಂದಲೂ ಆತನನ್ನು ಪ್ರೇಮಿಸುತ್ತಿದ್ದೇನೆ. ಆತ ನನ್ನನ್ನು ಪ್ರೇಮಿಸುತ್ತಿದ್ದಾನೆ. ಏಕೆ ಎಂದು ಮಾತ್ರ ನಾನರಿಯೆ. ಆದಕ್ಕೇ, ಸತ್ಯವನ್ನರಿಯಲೆಂದು ಇಲ್ಲಿಗೆ ಬಂದಿರುವೆ. ನಾನು ಪ್ರೇಮಿಸುವ ಈತ ಯಾರು? ಆತನೊಂದಿಗೆ ನನಗೇನು ಸಂಬಂಧ? ನಿನಗೇನು ಸಂಬಂಧ? ಓ ದಿವ್ಯವಾಣಿ' ಓ ರಹಸ್ಯಗಳ ಮಾತೆಯೇ ಮೊದಲು ಈ ರಹಸ್ಯವನ್ನು ಬಿಡಿಸಿ ಹೇಳು! ಆ ನಂತರ ಬೇಕಾದರೆ

ನನ್ನನ್ನು ದಂಡಿಸು,' ಎಂದಳು ಅತಿನಿ.

'ಹೌದು, ಹೇಳು!' ನಾನು ತೀವ್ರವಾಗಿ ಸಂದೇಹ ಆಶೆ ಭೀತಿಗಳಿಂದ ದಿಗ್ಭ್ರಾಂತನಾಗಿ ಸಂಕಟಪಡುತ್ತಿರುವೆ' ಅಂದ ಲಿಯೊ. ಹಿಸಿಯಾ ತುಸು ವಿಚಾರಮಾಡಿ, 'ಲಿಯೋ ವಿನ್ಸಿ, ನಾನು ಯಾರೆಂದು ತಿಳಿದುಕೊಂಡಿರುವಿ?' ಎಂದು ಕೇಳಿದಳು. 'ನೀನು ಆಯೇಶಾ. ಹಿಂದೊಮ್ಮೆ ಆಫ್ರಿಕದ ಕೋರ್ ಗುಹೆಗಳಲ್ಲಿ ನಿನ್ನ ಕೈಯಿಂದಲೆ ನಾನು ಮೃತಪಟ್ಟೆ. ಇಪ್ಪತ್ತು ವರ್ಷಗಳ ಹಿಂದೆ ಅದೇ ಕೋರ್ ಗುಹೆಗಳಲ್ಲಿ ನಿನ್ನನ್ನು ಮತ್ತೆ ಕಂಡೆ, ಪ್ರೇಮಿಸಿದೆ. ಅಲ್ಲಿ ಆ ಭೀಕರ ದುರಂತಕ್ಕೀಡಾಗಿ, "ಮತ್ತೆ ಬರುವೆ" ಎಂದು ವಚನವಿತ್ತೆ. ಅದೇ ಆಯೇಶಾ ನೀನು ಎಂದು ನನ್ನ ನಂಬಿಕೆ,' ಎಂದ ಲಿಯೋ ಗಂಭೀರವಾಗಿ.

'ಹೊಲ್ಲಿ, ನೀನು ಏನೆಂದು ನಂಬಿರುವಿ?'

'ಲಿಯೋನ ನಂಬಿಕೆಯೆ ನನ್ನದೂ! ಕೆಲವೊಮ್ಮೆ ಸತ್ತವರಿಗೆ ಪುನರ್ಜನ್ಮ ಬರುತ್ತದೆ. ಎಲ್ಲ ಸತ್ಯವನ್ನರಿತವಳು ನೀನು. ಅದನ್ನು ಪ್ರಕಟಿಸುವವಳೂ ನೀನೇ' ಎಂದೆ ನಾನು.

'ನಿಜ, ಸತ್ತವರು ಕೆಲವೊಮ್ಮೆ ಪುನರ್ಜನ್ಮ ಪಡೆಯುವದುಂಟು. ಅಲ್ಲದೆ ವಿಚಿತ್ರ ರೂಪದಲ್ಲಿ ಮತ್ತೆ ಮತ್ತೆ ಪ್ರತ್ಯಕ್ಷರಾಗುವದೂ ಉಂಟು. ಎಲ್ಲ ಸತ್ಯವನ್ನರಿತವಳು ನಾನು. ಆ ಸತ್ಯವನ್ನು ನಾಳೆಯೇ ಎದುರಿಸಲು ಸಿದ್ಧರಾಗಿರಿ. ಅಲ್ಲಿಯ ವರೆಗೆ ವಿಶ್ರಮಿಸಿರಿ,' ಎಂದು ಹಿಸಿಯಾ ಹೇಳುತ್ತಿದ್ದಂತೆಯೆ ರಜತ ಪರದೆಗಳು ಮುಚ್ಚಿಕೊಂಡವು. ಓರೋಸ್‌ನೊಂದಿಗೆ ನಾವು ಅಲ್ಲಿಂದ ಹೊರಟು ನಮ್ಮ ಕೋಣೆಗಳಿಗೆ ತೆರಳಿದೆವು. ದಣಿದ ಕಾರಣ ಗಾಢನಿದ್ರೆಯಲ್ಲಿ ಎಷ್ಟೋ ವೇಳೆ ಮಲಗಿಕೊಂಡೆವು.

*

ನಾವು ಎಚ್ಚೆತ್ತಾಗ ಮರುದಿನ ಸಂಜೆಯಾಗಿತ್ತು. ಮಾತೆಯ ದರ್ಶನಕ್ಕೆ ನಮ್ಮನ್ನು ಕರೆದೊಯ್ಯಲು ಓರೋಸ್ ಬಂದ. ಹತ್ತು ನಿಮಿಷಗಳ ನಂತರ ಸಿದ್ಧರಾಗಿ ಹೊರಟೆವು. ವೇದಿಕೆಯ ಹಿಂದೊಂದು ದ್ವಾರದ ಮೂಲಕ ಹಜಾರದಲ್ಲಿ ಹಾಯ್ದು, ಪರ್ವತದ ಶಿಲಾಗರ್ಭದಲ್ಲಿ ಕಡೆದ ಅಸಂಖ್ಯಾತ ಮೆಟ್ಟಲುಗಳನ್ನು ಏರಹತ್ತಿದೆವು. ಕಗ್ಗತ್ತಲೆಯಿದ್ದುದರಿಂದ ಎಲ್ಲರೂ ಒಂದೊಂದು ದೀವಟಿಗೆ ಹಿಡಿದುಕೊಂಡಿದ್ದೆವು. ಒಂದು ಗಂಟೆಯ ನಂತರ ದೊಡ್ಡದೊಂದು ಮೆಟ್ಟಲಿನ ಅಡಿಯಲ್ಲಿ ಕುಳಿತು ಸ್ವಲ್ಪಕಾಲ ವಿಶ್ರಮಿಸಿದೆವು. ಅಲ್ಲಿ ಏನೋ ಗರ್ಜಿಸುತ್ತಿರುವಂತೆ ಕೇಳಿಸುತ್ತಿತ್ತು. ನಾವೀಗ ಅಗ್ನಿಪರ್ವತದ ಅಗ್ನಿಕುಂಡದ ಹತ್ತಿರ ಬಂದಿದ್ದು, ಅಗ್ನಿಜ್ವಾಲೆಗಳ ಬುಸುಗುಟ್ಟುವಿಕೆಯು ಗರ್ಜನೆಯಂತೆ ಕೇಳುತ್ತಿದೆಯೆಂದ ಓರೋಸ್.

ಅನಂತರ ಮತ್ತೆ ಮೇಲೇರತೊಡಗಿದೆವು. ಎತ್ತರೆತ್ತರವಾದ ಮೆಟ್ಟಲುಗಳ ಮೇಲೆ ಕಷ್ಟದಿಂದ ಕಾಲೆಳೆಯುತ್ತ, ಕೊನೆಗೊಂದು ಜಗಲಿಯ ಮೇಲೆ ಬಂದು ನಿಂತೆವು. ಅದು ಪರ್ವತದ ತುತ್ತತುದಿಯಾಗಿತ್ತು. ಕೆಳಗೆ ದೃಷ್ಟಿ ಹಾಯಿಸಿದಾಗ ನಮ್ಮ ತಲೆ ಸುತ್ತಿದಂತಾಯಿತು. ಆಹಾ! ಭವ್ಯ ದೃಶ್ಯವನ್ನು ಅದೆಂತು ವರ್ಣಿಸಲಿ? ಮೇಲೆ ತಾರೆ ತುಂಬಿದ ಆಗಸ. ದಕ್ಷಿಣಕ್ಕೆ ಕಾಲೂನಿನ ಸಮವಿಸ್ತಾರ. ಪೂರ್ವ, ಪಶ್ಚಿಮಕ್ಕೆ ಪರ್ವತ ಶೃಂಗದ ಹಿಮಾವೃತ ಸ್ಕಂಧಗಳು. ಉತ್ತರಕ್ಕಂತೂ ಅತ್ಯದ್ಭುತ ದೃಶ್ಯ. ನಮ್ಮ ಕೆಳಗಡೆಯೇ ಜ್ವಾಲಾಮುಖಿಯ ಅಗ್ನಿಕುಂಡ, ಅದರ ಮಧ್ಯೆ ಅಗ್ನಿಸರೋವರದಲ್ಲಿ ಜ್ವಾಲೆಗಳು ಗುಳ್ಳೆಗಳಾಗಿ ಕುದಿಯುತ್ತ ಸುತ್ತುತ್ತ ಮೇಲೆ ಪುಟಿಯುತ್ತಿದ್ದವು. ಅದರ ಮೇಲ್ಮೈಯಿಂದ ಹೊಗೆ ಹಬೆ ಮೇಲೇರಿದಂತೆ, ಉರಿಯುತ್ತ, ಒಂದು ದೊಡ್ಡ ಬೆಳಕಿನ ತೆರೆಯಾಗಿತ್ತು. ಪ್ರಜ್ವಲಿಸುವ ತೆರೆ ನಮ್ಮೆದುರಿಗೇ ಧಗಧಗಿಸುತ್ತಿತ್ತು. ಆ ಉಜ್ವಲ ಪ್ರಕಾಶ ಪರ್ವತಗಳಾಚೆಯೂ ದೂರ ದಿಗಂತದ ವರೆಗೆ ಮಿನುಗುತ್ತಿತ್ತು. ಆ ಅದ್ಭುತ ದೃಶ್ಯದಿಂದ ಮಂತ್ರಮುಗ್ಧನಾಗಿ ಭಯ ಭಕ್ತಿಯಿಂದ ಅಲ್ಲಿಯೇ ಮಂಡೆಯೂರಿದೆ.

ಅಲ್ಲಿಂದ ಹತ್ತಿಪ್ಪತ್ತು ಹೆಜ್ಜೆ ಕೆಳಗಿಳಿದು, ಒಂದು ಗವಿಯಲ್ಲಿ ಹೊಕ್ಕೆವು. ಅಲ್ಲಿ ಕಲ್ಲಿನ ಪೀಠದ ಮೇಲೆ, ಕೆನ್ನೀಲಿ ವರ್ಣದ ಭವ್ಯ ನಿಲುವಂಗಿಯನ್ನು ಧರಿಸಿ ಹಿಸಿಯಾ ಕುಳಿತಿದ್ದಳು. ಶ್ವೇತವಸ್ತ್ರಾಚ್ಛಾದಿತ ಹಸ್ತದಲ್ಲಿ ರಾಜದಂಡ ಹಿಡಿದಿದ್ದಳು. ಗಹನ ವಿಚಾರದಲ್ಲಿರುವಂತೆ ಕಂಡಳು. ನಂತರ ನಿಟ್ಟುಸಿರೆಳೆದು, ಅಲ್ಲಿಯೇ

ಬಿಟ್ಟ ಬಾಯಿಯಾಗಿದ್ದವರನ್ನು ನೋಡಿ. 'ಅತಿಸ್, ನಿನ್ನೆ ರಾತ್ರಿ ನೀನು ನನಗೊಂದು ಪ್ರಶ್ನೆಯನ್ನು ಕೇಳಿದೆ. ಅದಕ್ಕುತ್ತರವಾಗಿ ಗತಕಾಲದ ತೆರೆ ಸರಿಸಿ ಸತ್ಯವನ್ನು ಬಹಿರಂಗಪಡಿಸುವೆ. ನಾವು ಮೂವರೂ ಈ ಅದೃಷ್ಟದ ತಿರುಗಣೆಯಲ್ಲಿ ಏಕೆ ಬಂಧಿತರಾಗಿರುವೆವೆಂಬುದನ್ನು ಮಾತ್ರ ನಾನ-ರಿಯೆ. ನಮ್ಮ ಮುಂದಿರುವ ಅದೃಷ್ಟವನ್ನೂ ನಾನರಿಯೆ. ಹಿಂದಿನ ಕಥೆಯನ್ನು ನನಗೆ ಗೊತ್ತಿ-ದ್ದಷ್ಟು ವಿವರಿಸುವೆ, ಕೇಳಿ.

'ಅನೇಕ ಯುಗಗಳ ಹಿಂದೆ, ಈ ನನ್ನ ದೀರ್ಘಾಯುಷ್ಯ ಆರಂಭವಾದಾಗ, ಈಜಿಪ್ಟಿನಲ್ಲಿ ಐಸಿಸ್ ಎಂಬ ಮಹಾನ್ ದೇವತೆ ಇದ್ದಳು. ಅವಳ ಪ್ರಧಾನ ಧರ್ಮಗುರು ಕಲ್ಲಿಕ್ರೇಟಿಸ್ ಎಂಬೊಬ್ಬ ಗ್ರೀಕ್. ಐಸಿಸ್ಸಳ ಇಚ್ಛಾನುಸಾರ ಆತನ ಸೇವೆ ಅವಳಿಗೆ ಮಾತ್ರ ಮೀಸಲಾಗಿತ್ತು. ಆದರೆ ಫಾರೋ ರಾಜವಂಶದ ಅಮೆನಾರ್ಟೆಸ್ ಎಂಬ ರಾಜಕುಮಾರಿ ಕಲ್ಲಿಕ್ರೇಟಸ್ಸನಲ್ಲಿ ಅನುರಕ್ತಳಾಗಿದ್ದಳು. ತನ್ನ ಮಂತ್ರಮಾಯೆಗಳಿಂದ ಆತನ ವ್ರತಭಂಗಕ್ಕೆ ಕಾರಣಳಾಗಿ, ಆತನೊಂದಿಗೆ ದೇಶಾಂತರ ಹೊರಟು ಹೋದಳು. ಈ ಅತಿನಿಯೆ ಆ ಅಮೆ-ನಾರ್ಟೆಸ್, ಆಕೆಯ ಪಕ್ಕದಲ್ಲಿ ನಿಂತಿರುವ ಲಿಯೋನೆ ಪುನರ್ಜನ್ಮ ಪಡೆದ ಆ ಧರ್ಮಗುರು ಕಲ್ಲಿಕ್ರೇಟಸ್.

'ಮೂರನೆಯದಾಗಿ, ಆಯೇಶಾ ಎಂಬ ಅರಬ್ಬಿ ಸ್ತ್ರೀಯೊಬ್ಬಳಿದ್ದಳು. ರೂಪವತಿ, ಬುದ್ಧಿವಂತೆ, ಜ್ಞಾನಸಂಪಾದನೆಗೆಂದು ಆಕೆ ಐಸಿಸ್ ದೇವಿಯ ಉಪಾಸನೆಯಲ್ಲಿ ತೊಡಗಿದ್ದಳು. ಆ ದೇವತೆ ಆಯೇಶಾಳಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ತನಗೆ ಅವಿಧೇಯರಾದ ಆ ಅಮೆನಾರ್ಟೆಸ್ ಮತ್ತು ಕಲ್ಲಿಕ್ರೇಟಸ್ಸರ ಮೇಲೆ ಸೇಡು ತೀರಿಸಿಕೊಳ್ಳಲು ಅವಳಿಗೆ ಆಜ್ಞಾಪಿಸಿದಳು. ಅದಕ್ಕೆ ಪ್ರತಿಫಲವಾಗಿ ಆಯೇಶಾಳಿಗೆ ಚಿರಯೌವನ, ಅಮರತ್ವದ ವರ-ವನ್ನೂ ನೀಡಿದಳು.

'ಆಯೇಶಾ ಬಹುದೂರದವರೆಗೆ ಆ ಅವಿಧೇ-ಯರನ್ನು ಬೆನ್ನಟ್ಟಿ ಹೋದಳು. ಅಲ್ಲಿ ನೂಟ ಎಂಬ ಸಂತನೊಬ್ಬನ ಮಾರ್ಗದರ್ಶನದಿಂದ ಅಮರತ್ವ ನೀಡುವ ಆ ಜೀವನಸತ್ವವನ್ನು ಶೋಧಿಸಿದಳು. ಅಮೆನಾರ್ಟೆಸ್– ಕಲ್ಲಿಕ್ರೇಟಸ್ಸರನ್ನು ಕೊಲ್ಲ-ಬೇಕೆಂದು ಯತ್ನಿಸಿದ್ದಷ್ಟೇ ಆಯಿತು. ಆದರೆ ಅವರನ್ನು ಕೊಲ್ಲಲಾಗಲಿಲ್ಲ. ಯಾಕೆಂದರೆ. ಅಪ್ರಾ-ಯಕಳಾದ, ಪ್ರೇಮವೆಂದರೇನೆಂದು ಅರಿಯದ ಆಯೇಶಾ ಸ್ವತಃ ಆ ಸಂತನಲ್ಲಿ ಅನುರಕ್ತಳಾಗಿದ್ದಳು! ತಾವಿಬ್ಬರೂ ಜೀವನಸತ್ವದಲ್ಲಿ ಮಿಂದು ಅಮರತ್ವ ಪಡೆಯಬೇಕು, ಆ ರಾಜಕುಮಾರಿಯನ್ನು ಅಲ್ಲಿಯೇ ಸಾಯಲು ಬಿಡಬೇಕು ಎಂದು ಆಯೇಶಾ ಹಂಚಿಕೆ ಹಾಕಿದಳು. ಆದರೆ ವಿಧಿಲಿಖಿತ ಬೇರೆಯೇ ಆಗಿತ್ತು! ಆಯೇಶಾ ಮೊದಲು ಚಿರಯೌವನ ಪಡೆದಳು, ಆದರೆ ಕಲಿಕ್ರೇಟಸ್ ಆಕೆಯನ್ನು ನಿರಾಕರಿಸಿ, ಅಮೆನಾರ್ಟೆಸ್‌ಳನ್ನೇ ವರಿಸಿದ. ಇದರಿಂದ ಕುಪಿತಳಾದ ಆಯೇಶಾ ಆತನನ್ನು ಕೊಂದು ಬಿಟ್ಟಳು. ಅನಂತರ, ತಾನು ಮಾತ್ರ ಅಮರಳಾಗಿ ಉಳಿದಳು. ಹೀಗೆ ಆ ಕ್ರೋಧಾವಿಷ್ಟ ದೇವತೆ ತನ್ನ ಅವಿಧೇಯರಾದ ಸೇವಕರನ್ನು ಶಿಕ್ಷಿಸಿದಳು.

'ಸಾವಿರಾರು ವರ್ಷಗಳು ಉರುಳಿದರೂ ಅನೇಕ ಶತಮಾನಕಾಲ ಆಯೇಶಾ ತನ್ನ ಪಾಪಗಳಿಗೆ ಪಶ್ಚಾತ್ತಾಪಪಡುತ್ತ, ತನ್ನ ಪ್ರಿಯತಮನ ದಾರಿ ನೋಡುತ್ತ ಆತನ ಪುನರ್ಜನ್ಮದ ನಿರೀಕ್ಷೆಯಲ್ಲಿ ಕಾಲ ಕಳೆದಳು. ಕೊನೆಗೊಮ್ಮೆ ಅವಳ ಅಭಿಲಾಷೆ ಈಡೇರಿತು. ಆತ ಬಂದ. ಎಲ್ಲ ಸುಗಮವಾಯಿತೆನ್ನುವಷ್ಟೊತ್ತಿಗೆ ಐಸಿಸ್ ದೇವತೆಯ ಕೋಪದಿಂದಾಗಿ, ತನ್ನ ಪ್ರಿಯತಮ-ನೆದುರಿಗೆ ಅತೀವ ಅವಮಾನಕರ ಅವಸ್ಥೆಯಲ್ಲಿ ಸೌಂದರ್ಯವನ್ನೆಲ್ಲ ಕಳೆದುಕೊಂಡು, ಇದ್ದೂ ಸತ್ತಂತಾದಳು ಆಯೇಶಾ.

'ಆದರೂ, ಆಯೇಶಾ ಸತ್ತಿಲ್ಲ ಕಲ್ಲಿಕ್ರೇಟಸ್. ಮತ್ತೆ ಬರುವೆನೆಂದು ಕೋರ್ ಗುಹೆಗಳಲ್ಲಿ ಅವಳು ನಿನಗೆ ವಚನ ಕೊಡಲಿಲ್ಲವೇ? ಅನಂತರ, ಅವಳ ಆತ್ಮ ಬಂದು ನಿನಗೆ ಸ್ವಪ್ನದಲ್ಲಿ ಸಂಕೇತ ತೋರ ಲಿಲ್ಲವೇ? ಇಷ್ಟು ವರ್ಷವೆಲ್ಲ ಅವಳ ಅನ್ವೇಷಣೆಯಲ್ಲಿ ಕಳೆದು, ಈಗ ನೀನು ಅವಳೆಡೆಗೆ ಬಂದಿ-ರುವೆ!' ಸ್ವಲ್ಪ ತಡೆದು, ಲಿಯೋನ ಉತ್ತರವನ್ನು ಅಪೇಕ್ಷಿಸುವಂತೆ ಅವನತ್ತ ನೋಡಿದಳು.

ಅವನೆಂದ: 'ಈ ಕಥೆಯ ಪೂರ್ವಭಾಗ ನನ-ಗೇನೂ ಗೊತ್ತಿಲ್ಲ. ಅನಂತರದ ವಿಷಯ ಮಾತ್ರ ಸತ್ಯವಾದದ್ದೆಂದು ಬಲ್ಲೆವು. ಆದರೆ, ಹಿರಿಯಾ. ಈಗ ನಾನು ಆಯೇಶಾಳೆಡೆ ಮರಳಿ ಬಂದಿರುವೆ

ನೋಡು ಹೇಳಿದೆಯಲ್ಲ. ಆಯೇಶಾ ಎಲ್ಲಿದ್ದಾಳೆ? ನೀನೇ ಆಯೇಶಾ ಏನು? ಹೌದಾದರೆ ನಿನ್ನ ಧ್ವನಿ ಬದಲಾಗಿರುವುದೇಕೆ? ನಿನ್ನ ನಿಲುವು ಮೊದಲಿನಂತಿಲ್ಲವಲ್ಲ ಏಕೆ? ದೇವರಾಣೆ ಮಾಡಿ ಹೇಳು, ನೀನು ಆಯೇಶಾ ಹೌದೇ?'

'ಹೌದು, ನಾನು ಆಯೇಶಾ' ಗಂಭೀರವಾಗಿ ಹೇಳಿದಳು.' 'ಸುಳ್ಳು! ಇದು ಸುಳ್ಳು!' ಅತಿನಿ ನಡುವೆ ಬಾಯಿ ಹಾಕಿದಳು. 'ನೀನು ಆಯೇಶಾಳೇ ಹೌದಾಗಿದ್ದರೆ ಹಿಂದೆ ನಿನ್ನನ್ನು ಬಲ್ಲ ಈ ಪುರುಷನ ಮುಂದೆ ಅದನ್ನು ಸಿದ್ಧಪಡಿಸು. ನಿನ್ನ ರೂಪಲಾವಣ್ಯವನ್ನು ಅಡಗಿಸಿಟ್ಟ ಆ ಮುಸುಕನ್ನು ಕಿತ್ತೊಗೆ. ನಿನ್ನ ದಿವ್ಯಸ್ವರೂಪ, ಅಪ್ರತಿಮ ಸೌಂದರ್ಯ ನಮ್ಮ ಕಣ್ಣು ಕುಕ್ಕಿಸಲಿ. ನಿನ್ನ ಪ್ರಿಯತಮ ಖಂಡಿತವಾಗಿ ನಿನ್ನ ಸೌಂದರ್ಯವನ್ನು ಮರೆತಿರಲಿಕ್ಕಿಲ್ಲ. ನಿನ್ನನ್ನು ಗುರುತಿಸಿ "ಇವಳೇ ನನ್ನ ಅಮರ ಪ್ರೇಯಸಿ" ಎಂದು ನಿನ್ನೆದುರು ಮಂಡೆಯೂರುವನು. ಆಗ ಮಾತ್ರ ನಾನು ನಿನ್ನ ಮಾತನ್ನು ನಂಬಿಯೇನು.'

ಸಿಂಹಾಸನಾಸೀನಳಾದ ಹಿಸಿಯಾ ಈ ಮಾತಿನಿಂದ ವ್ಯಾಕುಲಗೊಂಡಂತೆನಿಸಿತು. ಹಿಂದು ಮುಂದೆ ಜೋಲಾಡುತ್ತ, ಕೈಕೈ ಹಿಸುಕಿಕೊಂಡಳು. 'ಕಲ್ಲಿಕ್ರೇಟಸ್, ಇದು ನಿನ್ನ ಅಪೇಕ್ಷೆಯೇ?' ಗೋಳಾಡುವ ಸ್ವರದಲ್ಲಿ ಕೇಳಿದಳು, 'ಹಾಗಾದರೆ ನಾನು ನಿನ್ನಾಜ್ಞೆಯನ್ನು ಪಾಲಿಸಬೇಕಾಗುವದು. ಆದರೂ ಹಾಗೆ ಆದೇಶಿಸಬೇಡ ಎಂದು ನಿನ್ನಲ್ಲಿ ಪ್ರಾರ್ಥಿಸುವೆ. ಯಾಕೆಂದರೆ ಇನ್ನೂ ಆ ಸಮಯ ಬಂದಿಲ್ಲ. ಕೋರ್ ಗುಹೆಗಳಲ್ಲಿ ನಿನ್ನ ಹಣೆಯ ಮೇಲೆ ಮುತ್ತಿಟ್ಟು ನೀನು ನನ್ನವನೆಂದು ನುಡಿದಾಗಿನಿಂದ ನಾನು ಸ್ವಲ್ಪ ಬದಲಾಗಿದ್ದೇನೆ ಕಲ್ಲಿಕ್ರೇಟಸ್.'

ಲಿಯೋ ಹತಾಶನಾಗಿ ಸುತ್ತಲೂ ನೋಡಿದ, ಕೊನೆಗೆ ಆತನ ದೃಷ್ಟಿ ಅತಿನಿಯ ಅಣಕಿಸುವ ಮುಖದ ಮೇಲೆ ಬಿದ್ದಿತು. 'ಅವಳಿಗೆ ಮುಸುಕನ್ನು ತೆಗೆದೊಗೆಯಲು ಹೇಳು ಪ್ರಭು, ನಾನು ಮತ್ಸರಿಸುವುದಿಲ್ಲವೆಂದು ಶಪಥಮಾಡುವೆ' ಅಂದಳಾಕೆ.

'ಹೌದು ನಾನವಳಿಗೆ ಮುಸುಕನ್ನು ತೆಗೆಯಲು ಆದೇಶಿಸುವೆ. ಎಷ್ಟೇ ಬದಲಾಗಿರಲಿ, ಅವಳು ಆಯೇಶಾ ಹೌದಾಗಿದ್ದರೆ, ಅವಳನ್ನು ಗುರುತಿಸುವೆ, ಅವಳನ್ನು ಪ್ರೇಮಿಸುವೆ.'

'ನಿಜವನ್ನೆ ನುಡಿದೆ ಕಲ್ಲಿಕ್ರೇಟಸ್' ಎಂದಳು ಹಿಸಿಯಾ, 'ಈಗ ಕೇಳು. ನಾನು ಮುಸುಕು ತೆಗೆದಾಗ, ಕೊನೆಯ ಬಾರಿ ನೀನು ಆಯ್ಕೆಮಾಡಬೇಕಾಗುವದು, ಪೂರ್ವಕಾಲದಿಂದಲೂ ನನ್ನ ಪ್ರತಿಸ್ಪರ್ಧಿಯಾದ ಈಕೆ ಬೇಕೊ? ನಾನೋ? ಯಾರು ಬೇಕಾದವರನ್ನು ಆರಿಸಿಕೋ. ನನ್ನನ್ನು ನಿರಾಕರಿಸಿದರೆ, ನಿನಗೇನೂ ಕೇಡಿಲ್ಲ ನಿಜ. ಆದರೆ ನನ್ನನ್ನು ನಿನ್ನ ಹೃದಯದಿಂದ ಪೂರ್ಣವಾಗಿ ಕಿತ್ತೊಗೆಯಬೇಕು ತಿಳಿಯಿತೆ? ಜೋಕೆ. ಇದು ಸಾಮಾನ್ಯ ಪರೀಕ್ಷೆ ಅಲ್ಲ, ಸತ್ವಪರೀಕ್ಷೆ.' ಹಿಸಿಯಾ ಬಳಿಕ ನನ್ನತ್ತ ತಿರುಗಿ ಹೇಳಿದಳು, 'ಹೊಲ್ಲಿ, ನೀನು ಅವನ ಆಪ್ತಮಿತ್ರ, ಪ್ರಿಯ ಪಾಲಕ. ಆತನಿಗಷ್ಟು ಉಪದೇಶ ಮಾಡು, ಆತ ನನ್ನನ್ನು ನಿರಾಕರಿಸಿದರೆ, ನೀನು ನಾನು, ಇಬ್ಬರೆ ದೂರ, ಬಹು ದೂರ ಹೋಗಿ, ಮೋಹ ಮಾಯೆ ಇಲ್ಲದ ಆ ಲೋಕದಲ್ಲಿ ಶಾಶ್ವತಸ್ನೇಹದಿಂದಿರೋಣ. ನೀನು ನನ್ನನ್ನು ನಿರಾಕರಿಸುವುದಿಲ್ಲ; ನಿನ್ನ ಮನಸ್ಸು ಸತ್ಯದ ಕುಲುಮೆಯಲ್ಲಿ ಕಾಸಿದ ಕಬ್ಬಿಣದಂತೆ ಸದಾ ಪರಿಶುದ್ಧವಾಗಿರುವದು; ಮೋಹವೆಂಬ ಪಾಪದ ಅಗ್ನಿಜ್ವಾಲೆಯಲ್ಲಿ ಬೆಂದು ತುಕ್ಕು ಹಿಡಿಯುವಂಥ ಮನಸ್ಸು ನಿನ್ನದಲ್ಲ ಎಂದು ನನಗೆ ಗೊತ್ತು.'

ಅವಳ ಮಾತಿನಿಂದ ನನಗೆ ಅತೀವ ಆನಂದವಾಯಿತು. ಆ ಮೇಲೆ ನಾವಿಬ್ಬರೂ ವಿಚಾರ ಮಾಡಿ, ಅವಳು ಮುಸುಕು ಸರಿಸಿ ತನ್ನ ಸ್ವರೂಪ ಪ್ರದರ್ಶಿಸಬೇಕೆಂದು ತೀರ್ಮಾನಿಸಿದೆವು.

'ನಿಮ್ಮ ಆಜ್ಞೆಯಂತೆ ಆಗಲಿ' ಎಂದು ಅತಿ ಕ್ಷೀಣ ಸ್ವರದಲ್ಲಿ ಹೇಳತೊಡಗಿದಳು. 'ಆದರೆ ನನ್ನ ಮೇಲೆ ನಿಮ್ಮಿಬ್ಬರ ಕರುಣೆಯಿರಲಿ, ಎಂದಷ್ಟೇ ವಿನಂತಿಸಿಕೊಳ್ಳುವೆ. ದಯವಿಟ್ಟು ನನ್ನನ್ನು ಪರಿಹಾಸ್ಯ ಮಾಡಬೇಡಿ. ನರಕಯಾತನೆಯನ್ನು ಅನುಭವಿಸುವ ನನ್ನ ಆತ್ಮವನ್ನು ನಿಮ್ಮ ದ್ವೇಷ, ತಿರಸ್ಕಾರದ ಕಿಚ್ಚಿನಲ್ಲಿ ತಳ್ಳಬೇಡಿ. ಯಾಕೆಂದರೆ, ನಾನು ಏನೇ ಆಗಿರಲಿ, ಅದು ನಿನಗೋಸ್ಕರವೇ, ಕಲ್ಲಿಕ್ರೇಟಸ್, ಈಗ ಮಾನವಪ್ರೇಮದ ಬೆಲೆ ಎಷ್ಟು? ಎಂಬುದೊಂದೇ ವಿಷಯವನ್ನು ನಾನು ತಿಳಿಯಬೇಕಿದೆ,'

... ಸ್ಥಿರವಾಗಿ ಎದ್ದು ಬಂದು ಗಾಜಿನ ಮುಂದೆ ಆ ಕೆಂಪಿನ ಕಾವೆಯ ಅಂಚಿನಲ್ಲಿ ಹೋಗಿ ನಿಂತುಕೊಂಡಳು. ಮುಂದೆ ಅರ್ಚಕನನ್ನು ಕರೆದು, ತನ್ನ ವಸ್ತ್ರಗಳನ್ನು ಸಡಿಲಿಸಲು ಹೇಳಿದಳು.

ನಿಧಾನವಾಗಿ ಅವಳನ್ನು ಆವರಿಸಿದ ತೆರೆಗಳು ಕಳಚಿಬೀಳುತ್ತಲೇ ಇದ್ದುವು. ಅವುಗಳಿಗೆ ಅಂತ್ಯವೇ ಇದ್ದಂತಿರಲಿಲ್ಲ. ನಾವು ನೋಡುತ್ತಿದ್ದಂತೆ ಒಳಗಿನ ಆಕೃತಿ ಚಿಕ್ಕದಾಗುತ್ತಲಿತ್ತು. ಅವಳೀಗ ಅತಿ ಕುಳ್ಳಾಗಿದ್ದಳು. ನಾನು ಎದೆಗುಂದಿದೆ. ಕೊನೆಯ ಬಟ್ಟೆಗಳು ಕಟ್ಟಿಗೆಯ ಮೇಲಿನ ಪದರುಗಳಂತೆ ಉದುರಿದಾಗ, ಎರಡು ಸುಕ್ಕುಗಟ್ಟಿದ ಕೈಕಾಲುಗಳು, ಹೊರಬಿದ್ದವು. ಬಳಿಕ ಮೈಮೇಲಿನ ಕೊನೆಯ ವಸ್ತ್ರ ಹಾಗೂ ಮುಖತೆರೆಯಷ್ಟೇ ಉಳಿದವು. ಅದನ್ನೂ ತನ್ನ ಬಡಕಲಾದ ಪಕ್ಕೆಗಳಿಂದ ಹಿಡಿದು, ಕಿರುಚುತ್ತ ಕಿತ್ತೊಗೆದು, ಅನ-

ಹಾಯಕಳಾಗಿ ಕೈ ಚೆಲ್ಲಿ, ತಿರುಗಿ ನಮ್ಮನ್ನು ಎದುರಿಸಿದಳು.

ಓಹ್; ಅವಳು! ಅವಳು ಹೇಗಿದ್ದಳೆಂದು ನಾನು ವರ್ಣಿಸುವದಿಲ್ಲ. ತಕ್ಷಣ ನಾನವಳನ್ನು ಗುರುತಿಸಿದೆ. 'ದಿವ್ಯ ಆಯೇಶಾಳ ಭವ್ಯ ಸ್ವರೂಪಕ್ಕೆ ಇನ್ನೂ ಏನೋ ಹೋಲಿಕೆ ಇತ್ತು. ತನ್ನ ವಿಶಿಷ್ಟ ಮುಖಲಕ್ಷಣ ಹೊತ್ತು ಠೀವಿಯಿಂದ ನಿಂತಿದ್ದಳು. ನಿರ್ದಯಿಯಾದ ಅಗ್ನಿಜ್ವಾಲೆಗಳ ಪ್ರಖರ ಪ್ರಕಾಶ ಅವಳನ್ನು ಅಪಮಾನಗೊಳಿಸುವಂತೆ ಬೆಳಕು ಬೀರುತ್ತಿತ್ತು.



ಸ್ವಲ್ಪ ಹೊತ್ತು ಭಾರಿ ಮೌನ ಆವರಿಸಿತು: ಲಿಯೋನ ಮುಖ ಬಿಳಿಚಿಕೊಂಡಿತು. ಆತನ ಜಂಘಾಬಲವೇ ಉಡುಗಿದಂತಾಯಿತು. ಬಹು ಪ್ರಯಾಸದಿಂದ ಸುಧಾರಿಸಿಕೊಂಡು, ನೆಟ್ಟಗೆ ಸೆಟೆದು ನಿಂತಿದ್ದ ಖಾನಿಯಾ ಅತಿನಿ ಮುಖ ಹೊರಳಿಸಿದ್ದೂ ಕಂಡಿತು. ತನ್ನ ಪ್ರತಿಸ್ಪರ್ಧಿಯ ಗರ್ವಭಂಗವನ್ನು ಕಣ್ಣಾರೆ ಕಾಣಬೇಕೆಂದಿದ್ದಳು ನಿಜ; ಆದರೆ ಆ ಭೀಕರ ದೃಶ್ಯ ಅವಳಿಗೂ ಆಘಾತವುಂಟುಮಾಡಿತ್ತು. ಕ್ಷಣ ಕಾಲ ಅವಳ ಹೆಣ್ಣು ಹೃದಯ ಕನಿಕರಪಟ್ಟಿರಬೇಕು.

ನನಗೆ ಮತಿಭ್ರಮಣೆಯಾಗುವದೇನೊ ಅನಿಸಿತು. ನನ್ನ ತುಟಿಗಳು ಒಣಗಿ ಅಂಟಿಕೊಂಡು ಬಾಯಿಯಿಂದ ಒಂದೂ ಮಾತು ಹೊರಡದಂತಾಯಿತು. ನನ್ನ ಕೈಕಾಲುಗಳು ಅಲುಗಾಡದಂತಾದವು.

ಆಗ ಅತಿನಿ ಆ ವಿಕೃತ ಆಕೃತಿಯ ಪಕ್ಕಕ್ಕೆ ಹೋಗಿ ತನ್ನೆಲ್ಲ ಸೌಂದರ್ಯವನ್ನೂ ಹೆಮ್ಮೆಯಿಂದ ಪ್ರದರ್ಶಿಸುತ್ತ ನಿಂತುಕೊಂಡು, 'ಲಿಯೋ ವಿನ್ಸಿ, ಅಥವಾ ಕಲ್ಲಿಕ್ರೇಟಿಸ್, ನಿನ್ನ ಹೆಸರು ಏನೇ ಇರಲಿ, ನನ್ನ ಬಗ್ಗೆ ನಿನಗೆ ದುರಭಿಪ್ರಾಯವೂ ಇರಬಹುದು, ಆದರೂ ಇಂಥ ಅಪಮಾನದ ಅವಸ್ಥೆಯಲ್ಲಿ ನನ್ನ ಪ್ರತಿಸ್ಪರ್ಧಿಯನ್ನು ಅಣಕಿಸುವ ಅಪೇಕ್ಷೆ ಇಲ್ಲ ಎಂದು ತಿಳಿದುಕೋ. ಇದೀಗ ಅವಳು ನಮಗೊಂದು 'ವಿಚಿತ್ರ ಕಥೆಯನ್ನು ಹೇಳಿದಳು. ನೀನು ನಮ್ಮಿಬ್ಬರಲ್ಲಿ ಒಬ್ಬರನ್ನು ಆಯ್ಕೆ ಮಾಡಬೇಕೆಂದು ಹೇಳಿರುವಳು. ಅದಕ್ಕೆ, ಲಿಯೋ ವಿನ್ಸಿ, ನಿನ್ನ ಆಯ್ಕೆಯ ಕೆಲಸವನ್ನು ಬೇಗ ಮಾಡಿ ಮುಗಿಸಿಬಿಡು. ಜಂಬದ ಮಾತಲ್ಲ—ನಾನು ನಿನಗೆ ಪ್ರೇಮ, ಸುಖ, ಆನಂದಗಳನ್ನು ನೀಡಬಲ್ಲೆ, ನಿನಗೆ ಪುತ್ರರನ್ನೂ ಅಲ್ಪಸ್ವಲ್ಪ ಪ್ರತಿಷ್ಠೆಯನ್ನೂ ಒದಗಿಸಿಕೊಡಬಲ್ಲೆ. ಈ ಮಾಟಗಾತಿಯಿಂದ ನೀನೇನು ಪಡೆಯಬಲ್ಲೆ ಎಂಬುದನ್ನು ನೀನೇ ಊಹಿಸಬೇಕು. ಗತಕಾಲದ ಕಥೆಗಳು ಬುದ್ಧಿವಾದ ಮತ್ತು ಸವಿನುಡಿಗಳು ಇಷ್ಟೇ ಅವಳಿಂದ ನಿನಗೆ ಸಿಗಬಹುದು. ನೀನು ಹೊಳೆಯಲ್ಲಿ, ಮುಳುಗುತ್ತಿದ್ದಾಗ ನನ್ನ ಜೀವದ ಪರಿವೆಯಿಲ್ಲದೆ, ನಿನ್ನನ್ನು ಉಳಿಸಿದೆ ಎನ್ನುವುದನ್ನು ನೆನಪಿಡು. ಸರಿ, ಇನ್ನು ಆಯ್ಕೆ ನಿನ್ನದು!'

ಈ ಮಾತುಗಳನ್ನು ಆಯೇಶಾ ಕಿವಿಗೊಟ್ಟು ಕೇಳಿದಳೇ ವಿನಾ ತುಟಿ ಬಿಚ್ಚಲಿಲ್ಲ. ನಾನು ಲಿಯೋನ ಬಿಳುಪೇರಿದ ಮುಖ ನೋಡಿದೆ. ಆತ ಅತಿನಿಯ ಮುಖ ನೋಡುತ್ತಲಿದ್ದ. ಅವಳ ಸುಂದರ ಕಣ್ಣುಗಳ ಮಿಂಚಿಗೆ ಆತ ಆಕರ್ಷಿತನಾಗಿರಬೇಕು. ಆದರೆ ಒಮ್ಮೆಲೆ ತಲೆ ಹೊರಳಿಸಿ, ನಿಟ್ಟುಸಿರೆಳೆದ. ಆತನ ಮುಖ ಮತ್ತೆ ರಂಗೇರಿ, ಕಣ್ಣಲ್ಲಿ ಸಂತೋಷದ ಕಳೆ ತುಂಬಿತು. 'ನನಗೆ ಅಜ್ಞಾತ ಗತಕಾಲ ಅಥವಾ ನಿಗೂಢ ಭವಿಷ್ಯ ಸಂಬಂಧವಿಲ್ಲ. ನನ್ನ ಪ್ರಸ್ತುತ ಜೀವನವಷ್ಟೇ ನನಗೆ ಸಂಬಂಧಿಸಿದ್ದು. ಎರಡು ಸಾವಿರ ವರ್ಷಗಳ ವರೆಗೆ ಆಯೇಶಾ ನನ್ನ ದಾರಿ ನೋಡಿದಳು, ಅಮೆನಾರ್ಟಿಸ್ಸಳಿಗೆ ನಾನೇನು ವಚನ ಕೊಟ್ಟೆನೆಂಬುದು ಗೊತ್ತಿಲ್ಲ. ಆದರೆ ಆಯೇಶಾಳಿಗೆ ಕೊಟ್ಟ ವಚನ ನೆನಪಿದೆ. ಈಗ ನಾನವಳನ್ನು ತ್ಯಜಿಸಿದರೆ, ನನ್ನ ಜೀವನ, ನಂಬಿಕೆಗಳೆಲ್ಲವೂ ವ್ಯರ್ಥ. ಪ್ರೇಮ ಮುಪ್ಪನ್ನೂ ಮೃತ್ಯುವನ್ನೂ ಜಯಿಸಲಾರದು. ಹೌದು, ಆಯೇಶಾ ಹೇಗಿದ್ದಳೆಂದುದನ್ನು ಸ್ಮರಿಸಿ, ಹೇಗಾಗುವಳೆಂಬ ಶ್ರದ್ಧೆಯಿಂದ, ಸದ್ಯ ಅವಳು ಇದ್ದಂತೆಯೇ ಅವಳನ್ನು ಸ್ವೀಕರಿಸುವೆ. ಪ್ರೇಮ ಅಮರವಾದದ್ದು' ಎಂದು ಲಿಯೋ ಆ ಭೀಕರವಾದ ಕುಗ್ಗಿದ ಆಕೃತಿಯ ಮುಂದೆ ಹೋಗಿ ನಿಂತು, ಮಂಡಿಯೂರಿ, ಆಯೇಶಾಳ ಹಣೆಯನ್ನು ಚುಂಬಿಸಿದ.

'ಲಿಯೋ ವಿನ್ಸಿ, ಅಂತೂ ಆಯ್ಕೆ ಮಾಡಿದೆ!

ಆದರೆ ಆದರಿಂದ ತೀವ್ರವಾಗಿ ನನ್ನ ಮನ ನೊಂದಿದೆ. ಇರಲಿ, ನಿನ್ನ...ನಿನ್ನ...ವರವನ್ನು ಹಿಂಪಡೆಕೊಂಡು ನನಗೆ ಅಪ್ಪಣೆ ಕೊಡು' ಎಂದು ಆತಿನಿ ನಿಷ್ಠುರಳಾಗಿ ನುಡಿದಳು.

ಆಯೇಶಾ ಸ್ವಲ್ಪ ಹೊತ್ತು ಮೌನವಾಗಿದ್ದು ಅನಂತರ ತನ್ನ ಬಡಕಲಾದ ಮೊಣಕಾಲುಗಳನ್ನೂರಿ ಮಣಿದು, ಗಟ್ಟಿಯಾಗಿ ಪ್ರಾರ್ಥಿಸಹತ್ತಿದಳು: 'ಓ ಸರ್ವಶಕ್ತ, ಸಮಸ್ತಲೋಕದ ಸೃಷ್ಟಿನಿಯಾಮಕ ನಿಸರ್ಗದೇವತೆಯೆ! ಜೀವನ್ಮರಣಗಳ ಅಧಿದೇವತೆಯೆ! ಹಿಂದೊಮ್ಮೆ ನೀನು ನನಗೆ ಚಿರಯೌವನ, ಅನುಪಮ ಸೌಂದರ್ಯದ ವರ ನೀಡಿದೆ. ಆದರೆ ನಾನು: ನಿನಗೆ ದ್ರೋಹ ಬಗೆದೆ. ನನ್ನ ಪಾಪಕ್ಕಾಗಿ ನಿರಂತರ ಏಕಾಂತದಲ್ಲಿ ಪ್ರಾಯಶ್ಚಿತ್ತವನ್ನು ಅನುಭವಿಸಿದೆ. ನನ್ನ ಪ್ರಿಯತಮನ ಮುಂದೆ ಇಂಥ ಹೀನಾವಸ್ಥೆಗೆ ಇಳಿದೆ. ಆದರೂ, ಅಮರಳಾದ್ದ ನನಗೆ, ಈ ಹೇಯ ಅವಮಾನದಿಂದ ಮುಕ್ತಳಾಗಿ ದಿವ್ಯ ಸೌಂದರ್ಯವನ್ನು ಪುನಃ ಪಡೆಯುವೆ ಎಂದು ನನ್ನನ್ನು ಆಶೀರ್ವದಿಸಿದೆ. ದೇವೀ! ಆತನ ಶುದ್ಧ ಪ್ರೇಮ ನನ್ನ ಪಾಪವನ್ನು ಪರಿಹರಿಸಲಿ. ಇಲ್ಲವೆ ನನಗೆ ಮರಣವನ್ನೇ ಕರುಣಿಸು' ಎಂದು, ಸುಮ್ಮನಾದಳು.

ದೀರ್ಘ ಮೌನ. ಲಿಯೋ ಮತ್ತು ನಾನು ಹತಾಶರಾಗಿ ಒಬ್ಬರನ್ನೊಬ್ಬರು ನೋಡಿದೆವು. ನಿಸರ್ಗದ ಮಹಾದೇವತೆಗೆ ಸಲ್ಲಿಸಿದ ಈ ಹೃದಯಸ್ಪರ್ಶಿ, ಕರುಣಾಜನಕ ಪ್ರಾರ್ಥನೆ ಸಫಲವಾಗುವದೆಂಬ ತೀವ್ರ ಆಸೆ ನಮ್ಮದಾಗಿತ್ತು.

●

ನಿಮಿಷಗಳು ಕಳೆದವು. ಆದರೆ ಏನೊಂದೂ ಘಟಿಸಲಿಲ್ಲ. ಕೊನೆಗೆ ಆ ಪ್ರಜ್ವಲಿಸುವ ಉರಿಯ ಬೆಳಕು, ನಿಧಾನವಾಗಿ ತಗ್ಗುತ್ತ, ಅಗ್ನಿಜ್ವಾಲೆ ಪಾತಾಳಕ್ಕಿಳಿದದ್ದರಿಂದ ಅಲ್ಲಿ ಆವರಿಸಿದ

ಕತ್ತಲೆಯಲ್ಲಿ ಆ ದೃಶ್ಯ ಕಾಣಿಸದಂತಾಯಿತು. ಆದರ ಛಾಯೆಯಲ್ಲಿ, ಆಯೇಶಾ ಎದ್ದು, ಕೆಲವು ಹೆಜ್ಜೆ ಮುಂದಿಟ್ಟು ಆ ಪ್ರಪಾತದ ಅಂಚಿನಲ್ಲಿಯೇ ಹೋಗಿ ನಿಂತಿದ್ದು ಕಾಣಿಸಿತು. ಆ ಮಬ್ಬುಗತ್ತಲೆಯಲ್ಲಿ ಅವಳೊಂದು ಊನವಾದ ಕರಿಯ ಮರಿ ಪಿಶಾಚಿಯಂತೆ ಕಾಣಿಸುತ್ತಿದ್ದಳು. ಅವಳು ಕೆಳಗೆ ಹಾರಿಬಿಡುವಳೇನೊ ಎಂದೆನಿಸಿ, ಲಿಯೋ ಅವಳೆಡೆಗೆ ಹೋಗುವದರಲ್ಲಿದ್ದ. ಓರೋಸ್ ಆತನನ್ನು ತಡೆದ. ಪೂರ್ಣ ಕತ್ತಲಾವರಿಸಿತು. ಆ ಗಾಢಾಂಧಕಾರದಲ್ಲಿ ಆಯೇಶಾ ಯಾವುದೋ ನಿಗೂಢ ಭಾಷೆಯಲ್ಲಿ ಮಾಡುತ್ತಿದ್ದ ಮಂತ್ರೋಚ್ಚಾರ ಶೋಕಗೀತೆಯಂತೆ ಕೇಳಿಸುತ್ತಿತ್ತು.

ಆಗ ಗಾಳಿಯ ವಿರುದ್ಧ ದಿಕ್ಕಿನಿಂದ ಅಗ್ನಿಜ್ವಾಲೆಯೊಂದು ಹೊಯ್ದಾಡುತ್ತ ತೇಲಿ ಬರುವುದು ಕಂಡಿತು. ಬೃಹದಾಕಾರದ ಜೋಡಿ ರೆಕ್ಕೆಗಳುಂಟಿದ್ದ ಆ ಅಗ್ನಿಜ್ವಾಲೆ ಸಮೀಪ ಬರುತ್ತ, ಆ ಭೂಶಿರದ ಮೇಲೆ ನಿಂತಿರುವ ಆಯೇಶಾಳನ್ನು ಆವರಿಸಿ ಕ್ಷಣಮಾತ್ರ ಬೆಳಗಿ ನಂದಿಹೋಯಿತು. ಆಯೇಶಾ ಅದೃಶ್ಯಳಾಗಿದ್ದಳು.

ಆಕೆ ಪಾತಾಳಕ್ಕೆ ಹಾರಿಕೊಂಡಳೆಂದು ನಾನು ಭಾವಿಸುವಷ್ಟರಲ್ಲೇ ಅದ್ಭುತ ಸಂಗೀತ ಕೇಳಿಬಂದಿತು. ಕರಾಳ ಹೊಗೆಯಾಡುತ್ತಿದ್ದ ಆ ಕೆಂಡದ ಕುಪ್ಪೆಯಿಂದಲೆ ಹೊರಹೊಮ್ಮುತ್ತ, ಆ ಅಲೌಕಿಕ ಸಂಗೀತದ ಸುತ್ತಲೂ ಪ್ರತಿಧ್ವನಿಸಿತು. ಆ ದಿವ್ಯ ಸಂಗೀತ ಸ್ವರಮೇಳದಲ್ಲಿ ಸಕಲ ಸಂವೇದನೆಗಳೂ ಅಭಿವ್ಯಕ್ತವಾಗಿದ್ದವು. ಆಯೇಶಾಳ ಪುನರ್ಜನ್ಮದ ವಿಜಯಗೀತೆಯಾಗಿತ್ತದು.

ಪೂರ್ವ ದಿಗಂತದಲ್ಲಿ ಅರುಣೋದಯದ ಛಾಯೆ ಮೂಡಿತು. ಅನಂತರ ಸೂರ್ಯನ ಮೊದಲ ಕಿರಣ ತೂರಿ ಬಂದು ಪ್ರಪಾತದ ಅಂಚಿನಲ್ಲಿ ನಿಂತಿರುವ ಆ ಸುಂದರ ರೂಪದ ಮೇಲೆ ಬಿದ್ದಿತು. ಕಣ್ಣು ಮುಚ್ಚಿಕೊಂಡು, ನಿದ್ರಿಸುವಂತಿತ್ತು ಆ ಅಚಲ ಮೂರ್ತಿ. ಸೂರ್ಯ ಪ್ರಕಾಶ ಅವಳ ಮೇಲೆ ಚೆಲ್ಲಾಟವಾಡಿದಂತೆ, ಆ ಕಪ್ಪು ಕಣ್ಣುಗಳು ದಿಗಿಲುಗೊಂಡ ಮಗುವಿನ ಕಣ್ಣುಗಳಂತೆ ತೆರೆದವು. ಕೆನ್ನೆಗಳು ರಂಗೇರಿದವು; ಕಪ್ಪಗಿನ ಗುಂಗುರು ಕೇಶರಾಶಿ ಗಾಳಿಯಲ್ಲಿ ಸುಳಿದಾಡಿತು.

ಇದು ಭ್ರಾಂತಿಯೋ? ಕೋರ್ ಗುಹೆಗಳಲ್ಲಿ ಜೀವನಜ್ವಾಲೆಯಲ್ಲಿ ಪ್ರವೇಶಿಸಿದಾಗ ನಾವು ಕಂಡ ಅದೇ ಆಯೇಶಾಳ ಸ್ವರೂಪವೋ? ನಮ್ಮ ಮೊಣಕಾಲುಗಳು ತತ್ತರಿಸುತ್ತಲಿದ್ದಂತೆ ಲಿಯೋ ಮತ್ತು ನಾನು ಒಬ್ಬರನ್ನೊಬ್ಬರು ಅಪ್ಪಿಕೊಂಡು, ಕೆಳಕ್ಕೆ ಕುಸಿದೆವು. ಆಗ, ಜೇನಿಗಿಂತ ಮಧುರವಾದ, ಮುಂಜಾನೆಯ ಮಾರುತಕ್ಕಿಂತ ಮೃದುವಾದ ಸ್ವರವೊಂದು ನುಡಿಯಿತು:

'ನನ್ನೆಡೆಗೆ ಬಾ, ಕಲ್ಲಿಕ್ರೇಟಸ್! ನೀನು ನನಗೆ ಪರಿಶುದ್ಧ ಪ್ರೇಮವನ್ನು ನೀಡಿ, ನನ್ನನ್ನು ಉದ್ಧರಿಸಿದೆ. ಆ ಪ್ರೇಮದ ಚುಂಬನವನ್ನು ನಿನಗೆ ಪ್ರತ್ಯರ್ಪಿಸುವೆ.'

ಲಿಯೋ ಕಷ್ಟಪಟ್ಟು ಎದ್ದ. ಕುಡುಕನಂತೆ ಜೋಲಿ ಹೊಡೆಯುತ್ತ, ಆಯೇಶಾ ನಿಂತಿರುವಲ್ಲಿಗೆ ತಡವರಿಸುತ್ತ ಹೋದ. ಭಾವಪರವಶನಾಗಿ, ಅವಳ ಮುಂದೆ ಮಂಡೆಯೂರಿದ. 'ಏಳು ನೀನಲ್ಲ; ನಾನು ಬಾಗಿ ನಮಿಸಬೇಕಾದವಳು' ಎಂದು ಆಯೇಶಾ ಆತನನ್ನು ಎಬ್ಬಿಸಲು ಕೈ ಚಾಚಿದಳು.

ಆತನಿಗೆ ಏಳಲಿಕ್ಕಾಗಲಿಲ್ಲವೇನೊ. ಅದಕ್ಕೇ ಅವಳು ಮೆಲ್ಲನೆ ಬಾಗಿ, ಆತನ ಹಣೆಯ ಮೇಲೆ ತುಟಿಗಳನೊತ್ತಿ ಆ ಮೇಲೆ ನನ್ನನ್ನು ಕರೆದಳು. ನಾನು ಅವಳ ಮುಂದೆ ಮಂಡೆಯೂರಬೇಕೆಂದೆ. ಆದರೆ ಅವಳು 'ಬೇಡ, ನೀನು ಕನ್ಯಾರ್ಥಿ ಅಲ್ಲ, ನನಗೆ ಪ್ರಿಯತಮರು, ಆರಾಧಕರು ಸಾಕಷ್ಟು ಸಿಗಬಲ್ಲರು. ಆದರೆ ಹೊಲ್ಲಿ, ನಿನ್ನಂಥ ಸ್ನೇಹಿತ ನನಗೆಲ್ಲಿ ಸಿಗಬಲ್ಲ?' ಎಂದು ನನ್ನತ್ತ ವಾಲಿ. ನನ್ನ ಹಣೆಯ ಮೇಲೂ ಒಂದು ಮುತ್ತನ್ನಿತ್ತಳು.

ಅವಳ ಉಸಿರು ಗುಲಾಬಿ ಹೂವಿನ ಸುಗಂಧದಿಂದ ಸುವಾಸಿತವಾಗಿತ್ತು. ಅವಳ ಕೇಶರಾಶಿಯಿಂದಲೂ ಅಂಥದೇ ಪರಿಮಳ ಹೊರಸೂಸುತ್ತಿತ್ತು. ಅವಳ ಸುಂದರ ರೂಪ ಶುಭ್ರ ಸಮುದ್ರದ ಮುತ್ತಿನಂತೆ ಮಿನುಗುತ್ತಿತ್ತು. ಅವಳ ಮಸ್ತಕದ ಮೇಲೆ ತೇಜೋಮಂಡಲ ಶೋಭಿಸುತ್ತಿತ್ತು. ಅವಳ ಪ್ರಶಾಂತ ನೇತ್ರಗಳು ತಾರೆಗಳಂತೆ ನಿಚ್ಚಳವಾಗಿ ಹೊಳೆಯುತ್ತಿದ್ದವು.

ಸೂರ್ಯ ಮೇಲೇರಿ ಪರ್ವತದ ಪಾರ್ಶ್ವಗಳು,

[illegible] ಸಮವಿಸ್ತಾರಗಳು, ಮತ್ತು ದೂರದ ಬೆಟ್ಟದ ಶಿಖರಗಳು ಹೊಂಬಣ್ಣದ ಹೊದಿಕೆಯಿಂದ ಆವರಿಸಿ-ದಂತಿತ್ತು. ಈ ದೃಶ್ಯವನ್ನು ಅವಲೋಕಿಸುತ್ತ ನಿಂತ ಆಯೇಶಾ ಲಿಯೋನತ್ತ ತಿರುಗಿ, 'ಲಿಯೋ, ಈ ಸೊಗಸಾದ ಲೋಕವನ್ನೆಲ್ಲ ನಿನಗೆ ಅರ್ಪಿ-ಸುವೆ' ಅಂದಳು.

ಆಗ ಅತಿನಿ ಕೇಳಿದಳು, 'ಅಂದರೆ, ಈತನಿಗೆ ಪ್ರೇಮದ ಕಾಣಿಕೆಯೆಂದು ನನ್ನ ರಾಜ್ಯವನ್ನೂ ಕೊಡುವೆಯಾ? ಹಾಗಾದರೆ ನಾನು ಅದಕ್ಕಾಗಿ ಹೋರಾಡಬೇಕಾಗುವದು.'

'ನಿನ್ನದು ನಿಷ್ಠುರ ಮಾತಾದರೂ ನಿನ್ನನ್ನು ಕ್ಷಮಿಸುವೆ; ಯಾಕೆಂದರೆ, ನನ್ನ ಗೆಲುವಿನ ಸಂದರ್ಭದಲ್ಲಿ ಪ್ರತಿಸ್ಪರ್ಧಿಯು ಪರಿಹಾಸ್ಯ ಮಾಡುವದು ನನಗಿಷ್ಟವಿಲ್ಲ. ನಿನ್ನ ಮೇಲು-ಗೈಯಾದಾಗ ನೀನೂ ಆತನಿಗೆ ಇದೇ ರಾಜ್ಯವನ್ನು ನೀಡದೆಯಿರುವೇ? ಆದರೆ ಈಗ ಹೇಳು, ಯಾರು ಹೆಚ್ಚು ರೂಪಸಿ? ನಮ್ಮಿಬ್ಬರನ್ನೂ ನೋಡಿ ನೀವೆಲ್ಲರೂ ತೀರ್ಮಾನಿಸಿ' ಎಂದು ಅತಿನಿಯ ಪಕ್ಕದಲ್ಲಿ ಹೋಗಿ ನಿಂತು ಮುಗುಳುನಗೆ ಬೀರಿದಳು ಆಯೇಶಾ.

ಅತಿನಿ ನಿಜಕ್ಕೂ ಸುಂದರಿ, ಆದರೆ ಪುನರ್ಜನ್ಮ ಪಡೆದ ಆಯೇಶಾಳ ದಿವ್ಯ ಸೌಂದರ್ಯದ ಮುಂದೆ ಅವಳ ರೂಪ ಮಸುಕಾ-ದಂತೆ ಕಂಡಿತು! ಆ ಹಣೆಯ ಮೇಲೆ ಹೊಳೆ-ಯುವ ಕಾಂತಿ, ಆ ವಿಶಾಲ ಮಾದಕ ನೇತ್ರಗಳು, ಆ ಮನಮೋಹಕ ಅಧರಗಳು, ಅಲೆ ಅಲೆಯಾಗಿ ಹರಡಿದ ಆ ರೇಶಿಮೆಯ ಕೇಶರಾಶಿ-ಒಟ್ಟಿನಲ್ಲಿ ಆಯೇಶಾಳ ಅಪ್ರತಿಮ ರೂಪ ಲಾವಣ್ಯದಲ್ಲಿ ಏನೋ ಅಗಾಧ ಶಕ್ತಿ ಅಭಿವ್ಯಕ್ತವಾಗಿತ್ತು. 'ನನ್ನ ನಶ್ವರ ದೇಹ ನಿನ್ನ ಅಮರ ಆತ್ಮದೊಂದಿಗೆ ಸರಿಸಾಟಿಯಾಗಲಾರದೇನೊ ನಿಜ. ಆದರೊಂದು ಮಾತು-ಮರ್ತ್ಯ ಮಾನವ ಮತ್ತು ಅಮರರ ಸಹವಾಸ ಎಂದಿಗೂ ಅಸಾಧ್ಯ,' ಎಂದು ಅತಿನಿ ಕ್ರೋಧಾವೇಶದಿಂದ ನುಡಿದಳು.

ಈ ಮಾತಿನಿಂದ ಆಯೇಶಾ ಒಂದು ಕ್ಷಣ

ಕಳೆಗುಂದಿದಳು. ಅವಳ ಕೆಂಪು ಅಧರಗಳು ವಿವರ್ಣವಾಗಿ, ಕಪ್ಪು ಕಣ್ಣುಗಳು ಕಳಾಹೀನವಾದವು. ಮರುಕ್ಷಣವೇ ಧೈರ್ಯದಿಂದ ಕೇಳಿದಳು, 'ಹುಚ್ಚಳಂತೆ ಹೀಗೇಕೆ ಬಡಬಡಿಸುವಿ, ಅತಿನಿ? ನನ್ನ ಅನಂತ ಶಕ್ತಿಯೆದುರು ನೀನೊಂದು ಅಲ್ಪ ಪ್ರಾಣಿ. ನಿನ್ನ ಕ್ಷುದ್ರ ರಾಜ್ಯ ನನಗೆ ಬೇಡ. ನಾನು ಇಷ್ಟಪಟ್ಟರೆ, ಸಮಸ್ತ ಲೋಕವೇ ನನ್ನ ಸಾಮ್ರಾಜ್ಯವಾಗಬಲ್ಲದು. ನೀನು ಯಾವನಾದರೂ ಒಬ್ಬ ಯೋಗ್ಯ ಪುರುಷನ ಕೈ ಹಿಡಿದು, ನಿನ್ನ ದೇಶದಲ್ಲಿ ಶಾಂತಿ ಸ್ಥಾಪನೆಯಾಗುವಂತೆ ರಾಜ್ಯವಾಳು—ಅತಿಥಿಗಳೇ, ನಡೆಯಿರಿ ಇಲ್ಲಿಂದ ಹೋಗೋಣ' ಎಂದು ಅತಿನಿಯ ಪಕ್ಕದಲ್ಲೇ ಹಾಯ್ದು ಬೆಟ್ಟದಂಚಿನಲ್ಲಿ ಮುಂದೆ ಹೆಜ್ಜೆಯಿಟ್ಟಳು.

ಆಕೆಯ ಉಪೇಕ್ಷಿತ ನುಡಿಗಳಿಂದ ರೊಚ್ಚಿಗೆದ್ದ ಅತಿನಿ ಒಂದು ಚೂರಿಯನ್ನು ಹೊರತೆಗೆದು, ಹತ್ತಿರವೆ ಹಾಯ್ದು ಹೋಗುತ್ತಿದ್ದ ಆಯೇಶಾಳ ಬೆನ್ನಿನಲ್ಲಿ ರಭಸದಿಂದ ಇರಿದಳು. ಆಯೇಶಾಳ ದೇಹದಲ್ಲಿ ಆ ಚಾಕು ನೆಟ್ಟಿದ್ದನ್ನು ನೋಡಿದೆನಾದರೂ ಅದು ನೆಲಕ್ಕೆ ಬಿದ್ದಿತು; ಆಯೇಶಾ ಸುರಕ್ಷಿತವಾಗಿಯೇ ಇದ್ದಳು! ಈ ತನ್ನ ಪ್ರಯತ್ನ ವಿಫಲವಾದಾಗ ಆಯೇಶಾಳನ್ನು ಪಾತಾಳಕ್ಕೆ ದಬ್ಬಬೇಕೆಂದು ಅತಿನಿ ಅವಳನ್ನು ಜೋರಾಗಿ ನೂಕಿದಳು. ಆದರೆ ಆಯೇಶಾ ಎಳ್ಳಷ್ಟೂ ಅಲುಗಾಡಲಿಲ್ಲ. ಬದಲಾಗಿ ಬೀಳುತ್ತಿರುವ ಅತಿನಿಯನ್ನೇ ಆಯೇಶಾ ಹಿಡಿದು ಹಿಂದಕ್ಕೆಳೆದು ನಿಲ್ಲಿಸಿದಳು. 'ಅತಿನಿ, ಇದು ಮೂರ್ಖತನವೇ ಸರಿ. ದೇವರ ವರದಿಂದ ದೊರೆತ ಈ ನಿನ್ನ ಆಯುಷ್ಯವನ್ನು ಅಂತ್ಯಗೊಳಿಸುವದು ಅದೆಂಥ ಹುಚ್ಚುತನ! ನೀನು ಮತ್ತೆ ಯಾವ ರೂಪ ಧರಿಸಿ ಹುಟ್ಟುವಿಯೆಂಬುದನ್ನು ಬಲ್ಲೆಯಾ? ದರಿದ್ರ, ಅಸಹ್ಯ ಮಗುವಾಗಿ ಹುಟ್ಟಬಹುದು. ಅಥವಾ ಹಾವು, ಬೆಕ್ಕು, ಹುಲಿಯಂಥ ಕಾಡುಪ್ರಾಣಿಯ ರೂಪವನ್ನೂ ತಾಳಬಹುದು. ಆತ್ಮಹತ್ಯೆ ಮಾಡಿಕೊಳ್ಳುವವರಿಗೆ ಇದೇ ಪ್ರತಿಫಲವಂತೆ. ನೋಡಿಲ್ಲಿ, ಈ ಚೂರಿಯ ತುದಿ, ವಿಷಪೂರಿತವಾಗಿದೆ—ನಿನಗೆ ಚುಚ್ಚಿದ್ದರೆ ಎಂಥ ಅನಾಹುತವಾಗುತ್ತಿತ್ತು!' ಎಂದು ಆಯೇಶಾ ನೆಲದ ಮೇಲಿದ್ದ ಚೂರಿಯನ್ನು ಎತ್ತಿಕೊಂಡು ದೂರ ಎಸೆದಳು.

ಈ ಅಣಕದ ಮಾತಿನಿಂದ ಅತಿನಿ 'ನೀನು ಮಾನವಳೇ ಅಲ್ಲವೆಂದ ಮೇಲೆ ನಿನ್ನ ಮುಂದೆ ನನ್ನದು ಹೇಗೆ ಮೇಲುಗೈಯಾದೀತು! ಆ ದೇವರೇ ನಿನ್ನನ್ನು ದಂಡಿಸಬೇಕು' ಎಂದು ಅಲ್ಲಿಯೇ ಕಲ್ಲುಬಂಡೆಯ ಮೇಲೆ ಕುಳಿತು ಅತ್ತಳು.

ಹತ್ತಿರವೇ ನಿಂತ ಲಿಯೋಗೆ ಅವಳ ಸ್ಥಿತಿಯನ್ನು ನೋಡಿ ಕನಿಕರವೆನಿಸಿತು. ಅವಳನ್ನು ಮೇಲಕ್ಕೆಬ್ಬಿಸಿ, ಕೆಲವು ಸೌಜನ್ಯದ ಮಾತುಗಳನ್ನಾಡಿದ. ಒಂದು ಕ್ಷಣ ಆಕೆ ಆತನ ಭುಜದ ಮೇಲೆ ತಲೆಯಾನಿಸಿದಳು. ಅನಂತರ ದೂರ ಸರಿದು, ತನ್ನ ವೃದ್ಧ ಮಾವ ಚಾಚಿದ ಕೈ ಹಿಡಿದಳು.

ಲಿಯೋ, ಅತಿನಿಗೆ ಅವಳ ಮಾವನೇ ಆಸರೆಯಾಗಲಿ. ಆಕೆ ತನ್ನಲ್ಲಿ ಇನ್ನೆಷ್ಟು ಚೂರಿಗಳನ್ನು ಅಡಗಿಸಿಟ್ಟುಕೊಂಡಿರುವಳೋ ಏನೊ. ಬಾ, ನಾವಿನ್ನು ವಿಶ್ರಮಿಸೋಣ' ಎಂದಳು ಆಯೇಶಾ. ನಾವು ಅಲ್ಲಿಂದ ಹೊರಟೆವು.

೩

ನಮ್ಮ ಕೋಣೆಗಳಿಗೆ ಮರಳಿ, ಆ ಅದ್ಭುತ ಅನುಭವದ ಆಯಾಸದಿಂದ ನಿರ್ವಿಣ್ಣರಾಗಿ, ಸುಮ್ಮನೆ ಹಾಸಿಗೆಯ ಮೇಲೆ ಬಿದ್ದುಕೊಂಡು ನಿದ್ರಿಸಿದೆವು.

ಎಚ್ಚರವಾದಾಗ ಮಧ್ಯಾಹ್ನವಾಗಿತ್ತು. ಲಿಯೋ ನಡೆದುದನ್ನು ನೆನೆದು, 'ಇದೆಲ್ಲದರ ಬಗ್ಗೆ ನೀನೇನನ್ನುತ್ತಿ ಹೊರೆಸ್?' ಎಂದು ಕೇಳಿದ.

'ಎಲ್ಲವೂ ಸುಗಮವಾಗಿ ಸಾಗಿದೆ, ಲಿಯೋ. ನಮ್ಮ ಕನಸು, ನಮ್ಮ ಪರಿಶ್ರಮಗಳು ವ್ಯರ್ಥವಾಗಿಲ್ಲ. ನೀನು ಸುದೈವಿಯೂ ಸುಖಿಯೂ ಆಗುತ್ತಿ.'

'ಅವಳು ಸುಂದರಿಯೇನೋ ನಿಜ, ಆದರೆ ಮಾಂಸ-ಖಂಡದ ಮರ್ತ್ಯಳಂತೆ ಇಲ್ಲವೇ ಇಲ್ಲ. ನನ್ನ ಹಣೆಯನ್ನಾಕೆ ಚುಂಬಿಸಿದಾಗ, ನನಗೆ ಸ್ಪರ್ಶದ ಅನುಭವವೇ ಆಗಲಿಲ್ಲ. ಇದೆಲ್ಲ ಭಯಾನಕವೆನಿಸುತ್ತದೆ, ಹೊರೆಸ್. ಅವಳೆಡೆಗೆ ನಾನು ಆಕರ್ಷಿತನಾಗಿರುವೆನಾದರೂ, ನಮ್ಮ ನಡುವೆ ಎಂಥದೋ ಆತಂಕ ಇರುವಂತಿದೆ... ಅಂಥ ದಿವ್ಯ ಹೆಣ್ಣಿಗೆ ನಾನೆಂಥ ಪತಿಯಾಗು-

ವೆನೋ? ಮೇಲಾಗಿ, "ಮಾನವ ಮತ್ತು ಅಮರ ಸಹವಾಸ ಮಾಡಲಾರರು" ಎಂದಳಲ್ಲ ಆತಿನಿ. ಆ ಮಾತಿನ ಅರ್ಥವೇನು?'

'ಲಿಯೋ, ಈ ಒಣ ಮಾತುಗಳಿಂದ ಸುಮ್ಮನೆ ನೀ ಕಿವಿಗೊಡಬೇಡ. ನಿನಗೆ ವರವಾಗಿ ಬಂದ ಪ್ರೇಮ, ಪ್ರಭುತ್ವ, ಪ್ರತಿಷ್ಠೆ – ಇವುಗಳನ್ನು ಸ್ವೀಕರಿಸು. ಅವಳಾಡಿದುದನ್ನು ಮರೆತು ಬಿಡು.'

ಅಷ್ಟರಲ್ಲಿ ಓರೋಸ್ ಬಂದ. ಲಿಯೋಗೆ ನಮ್ರತೆಯಿಂದ ವಂದಿಸಿ, ಮಂದಿರದಲ್ಲಿ ನಡೆಯುವ ವಾರ್ಷಿಕ ರಾಜ್ಯ ಸಮಾರಂಭಕ್ಕೆ ತಯಾರಾಗಿ ಬರಬೇಕೆಂಬ ಓರಿಯಾನಳ ಅಭಿಲಾಷೆಯನ್ನು ಅರುಹಿದ. ಸೇವಕರು ಲಿಯೋನ ಕೂದಲನ್ನು ಓರಣವಾಗಿ ಕತ್ತರಿಸಿ, ಕಾಲಿಗೆ ಜರತಾರಿ ಹೆಣಿಕೆಯ ಪಾದರಕ್ಷೆಗಳನ್ನು ತೊಡಿಸಿ ಜರತಾರಿಯ ಶುಭ್ರವಾದ ಮೇಲಂಗಿ ಹೊದಿಸಿ ಕೈಯಲ್ಲೊಂದು ಬೆಳ್ಳಿಯ ರಾಜದಂಡವನ್ನು ಕೊಟ್ಟರು.

ಗರ್ಭಗುಡಿಯಲ್ಲಿ ವಿಶೇಷ ಪೂಜೆ ನಡೆದಿತ್ತು. ಮಾತೆಯ ರಜತ ಪ್ರತಿಮೆಯ ಮುಂದೆ ಎರಡು ನೂರಕ್ಕೂ ಹೆಚ್ಚು ಶ್ವೇತವಸ್ತ್ರಧಾರಿ ಅರ್ಚಕರು ಸಾಲಾಗಿ ಕುಳಿತಿದ್ದರು. ವೇದಿಕೆಯ ಮೇಲೆ ಎತ್ತರವಾದ ಪೀಠದಲ್ಲಿ ಆಯೇಶಾ ಎಲ್ಲರಿಗೆ ಕಾಣಿಸುವಂತೆ ಆಸೀನಳಾಗಿದ್ದಳು. ಅವಳ ಪಕ್ಕದಲ್ಲಿ ಅಂಥದೇ ಒಂದು ಖಾಲಿ ಆಸನವಿತ್ತು.

ಆಯೇಶಾ ಮಹಾರಾಣಿಯ ಪೋಷಾಕು ಧರಿಸಿದ್ದಳು. ಅವಳ ಹಣೆಯ ಮೇಲೆ ಶೋಭಿಸುವ ಚಿಕ್ಕ ಚಿನ್ನದ ಪಟ್ಟಿಯ ಮಧ್ಯೆ ಮಾಣಿಕ್ಯದ ಹಾವಿನ ಹೆಡೆ ತಲೆಯೆತ್ತಿತ್ತು. ಕೆನ್ನೀಲಿ ವರ್ಣದ ಮೇಲಂಗಿಯ ಮೇಲೆಲ್ಲ ಆ ವಿಪುಲ ಕೇಶರಾಶಿ ಹರಡಿತ್ತು. ಒಳಗೆ ಶ್ವೇತ ರೇಶಿಮೆಯ ವಸ್ತ್ರ ತೊಟ್ಟಿದ್ದಳು. ಸೊಂಟಕ್ಕೆ ಸುತ್ತಿದ ಚಿನ್ನದ ಪಟ್ಟಿಯ ನಡುವೆ ಎರಡು ಹೆಡೆಯ ಚಿನ್ನದ ಹಾವಿದ್ದಿತು. ಬಲಗೈಯಲ್ಲಿ ರತ್ನಗಳನ್ನೂ ಗಂಟೆಗಳನ್ನೂ ಕೂಡಿಸಿದ ರಾಜದಂಡವನ್ನೂ ಹಿಡಿದಿದ್ದಳು.

ನಾವು ಮುನ್ನಡೆಯುತ್ತ, ಧರ್ಮಗುರುಗಳನ್ನೆಲ್ಲ ದಾಟಿ ಆಯೇಶಾಳ ಎದುರು ಬಂದು ನಿಂತೆವು.

ಅವಳು ಆಸನದಿಂದೆದ್ದು ಇಳಿದು ಬಂದು ಲಿಯೋನ ಕೈಯನ್ನು ಹಿಡಿದು ತನ್ನ ಪಕ್ಕದಲ್ಲಿ ನಿಲ್ಲಿಸಿ ಕೊಂಡಳು. ಇನ್ನೊಂದು ಬದಿಯಲ್ಲಿ ನಾನು ನಿಲ್ಲಬೇಕೆಂದು ಸನ್ನೆ ಮಾಡಿದಳು. ಲಿಯೋನ ಹಣೆಗೆ ತನ್ನ ರಾಜದಂಡವನ್ನು ತಾಗಿಸಿ, ಆತನ ಕೈ ಹಿಡಿದು ಸ್ಪಷ್ಟ ಸ್ವರದಲ್ಲಿ ಘೋಷಿಸಿದಳು.

'ಸಕಲ ಜನರೇ, ಕೇಳಿ! ಪ್ರಥಮ ಬಾರಿ ನಾನು ನನ್ನ ತೆರೆ ತೆಗೆದು ನಿಮ್ಮೆದುರಿಗೆ ನಿಂತಿದ್ದೇಕೆಂದರೆ, ನಮ್ಮ ಮಂದಿರಕ್ಕೆ ಆಗಮಿಸಿದ ಆಗಂತುಕ, ನೀವು ತಿಳಿದಂತೆ ನನಗೆ ಅಪರಿಚಿತನಲ್ಲ, ಆತ ನನ್ನ ಜನ್ಮಜನ್ಮಾಂತರಗಳ ಪ್ರಭು; ತನ್ನ ಪ್ರೇಯಸಿ ಯನ್ನು ಮತ್ತೆ ಪಡೆಯಲು ಬಂದಿರುವನು. ನಾನು ಆತನನ್ನು ಸ್ವೀಕರಿಸುವೆ' ಎಂದು ನಯ ವಾಗಿ ಆತನಿಗೆ ಮೂರು ಸಲ ನಮಿಸಿ, ಸಾವಕಾಶ ವಾಗಿ ಅವನ ಮುಂದೆ ಮಂಡೆಯೂರಿದಳು.

'ಹಿಸಿಯಾಳ ವರಪ್ರಭುವಿಗೆ ಸುಸ್ವಾಗತ!' ನರೆದವರೆಲ್ಲ ಘೋಷಿಸಿದರು.

'ಕಲ್ಲಿಕ್ರೇಟಸ್' ಎಂದು ಆಯೇಶಾ ಆತನನ್ನು ಕೇಳಿದಳು. 'ನನ್ನನ್ನು ನಿನ್ನ ವಿವಾಹನಿಶ್ಚಿತ ವಧು ಎಂದು ಇವರೆಲ್ಲರ ಸಾಕ್ಷಿಯಾಗಿ ಸ್ವೀಕರಿಸು ವಿಯಾ?'

'ಹೌದು, ಸ್ವೀಕರಿಸುವೆ' ಲಿಯೋ ಗಂಭೀರ ವಾಗಿ ನುಡಿದ.

ಆಗ ಆಯೇಶಾ ಎದ್ದು, ತನ್ನ ಪೀಠದ ಪಕ್ಕ ದಲ್ಲಿ ತನ್ನ ಪ್ರಭು ಆಸೀನನಾಗಿ, ಎಲ್ಲರ ಸನ್ಮಾನ ಸ್ವೀಕರಿಸಬೇಕೆಂದು ವಿನಂತಿಸಿದಳು. ನಂತರ ಮತ್ತೆ ಮಂತ್ರೋಚ್ಚಾರ, ಭಕ್ತಿಗಾನ. ಆಮೇಲೆ ಆಯೇಶಾ ಎದ್ದು ತನ್ನ ರಾಜದಂಡವನ್ನು ಬೀಸಿದಳು. ಅರ್ಚಕರೆಲ್ಲ ಮೂರು ಬಾರಿ ವಂದಿಸಿ, ಸಾವಕಾಶವಾಗಿ ಮಂತ್ರಪಠಣ ಮಾಡುತ್ತ ನಿರ್ಗಮಿಸಿದರು.

ನಾವು ಮೂವರೇ ಉಳಿದಾಗ, ಆಯೇಶಾ ಎದ್ದು, ಲಿಯೋನತ್ತ ಕೈ ಚಾಚಿದಳು, 'ಬಾ, ನನ್ನ ಪ್ರಿಯತಮ— ನಿನ್ನನ್ನು ನಾನು ಯಾವ ಹೆಸರಿ ನಿಂದ ಕರೆಯಲಿ? ಕಲ್ಲಿಕ್ರೇಟಸ್. ಅಥವಾ...'

'ನನ್ನನ್ನು ಲಿಯೋ ಎಂದೇ ಕರೆ ಆಯೇಶಾ, ಈ ಕಲ್ಲಿಕ್ರೇಟಸ್ ಬಲು ನಿರ್ಭಾಗ್ಯ ಪ್ರಾಣಿ ಎಂದೆನಿಸುತ್ತದೆ. ಕೋರ್‌ನಲ್ಲಿ ನೀನು ಆತನನ್ನು ಕೊನೆಯ ಬಾರಿ ನೋಡಿದ್ದೇ ಸಾಕು. ಲಿಯೋ ಎಂಬ ನನ್ನ ಈ ಜನ್ಮದ ಹೆಸರಿ ನಿಂದಲೆ ಕರೆ' ಎಂದು ಆತನೆಂದ.

'ಹಾಗೇ ಆಗಲಿ, ನನ್ನ ಲಿಯೋ! ನಿನ್ನೊಡನೆ ಅರಬ್ಬಿಯಲ್ಲೇ ಮಾತನಾಡುವೆ, ಮಾತೃಭಾಷೆ-ಯೆಂದರೆ ನನಗೆ ಬಲು ಇಷ್ಟ. ನಮ್ಮ ಅದೃಷ್ಟ ಈಗ ಈಡೇರುವ ಸಮಯ ಬಂದಿದೆ' ಎಂದು ನಿಟ್ಟುಸಿರೆಳೆದು ಆತನ ಕೈ ಹಿಡಿದು ಭಾವಪರವಶ ಳಾಗಿ ಆತನೆಡೆ ನೋಡಿದಳು. 'ನೀನು ನನ್ನನ್ನು ಉದ್ಧರಿಸಿರುವಿ, ನನ್ನ ಪ್ರಭು. ಇನ್ನು ನನಗೆ ಮುಂದಿನ ಜೀವನದ ಆಶಾಂಕುರವಾಗಿದೆ. ನಾವಿಬ್ಬರೂ ಶುದ್ಧ ಬಾಳೊಂದರಲ್ಲಿ ಪಾಲು-ಗೊಳ್ಳೋಣ.' ಎಂದು ಅಂದಳು.

'ಆಯೇಶಾ ಆ ಪರ್ವತಶೃಂಗದ ಮೇಲೆ ನೀನು ಹೇಗೆ ರೂಪಾಂತರ ಹೊಂದಿದೆ?' ಕೇಳಿದ ಲಿಯೋ.

'ಉರಿಯಲ್ಲಿ ನಿನ್ನನ್ನು ಬಿಟ್ಟು ಹೋಗಿದ್ದೆ, ಲಿಯೋ, ಉರಿಯಲ್ಲಿ ಮತ್ತೆ ಮರಳಿ ಬಂದೆ. ಬಹುಶಃ ಉರಿಯಲ್ಲಿಯೇ ನಾವಿಬ್ಬರೂ ಜೊತೆ ಯಾಗಿ ನಿರ್ಗಮಿಸುವೆವು... ಅಥವಾ, ನನ್ನ ರೂಪಾಂತರ ಆಗಿರಲಿಕ್ಕೇ ಇಲ್ಲ: ನಿಮ್ಮ ದೃಷ್ಟಿಗೆ ಪರಿವರ್ತನೆ ಕಂಡಿರಬಹುದು. ಎಲ್ಲವೂ ನಿನ್ನ ಮನಸ್ಸಿನ ಭ್ರಾಂತಿಯಷ್ಟೇ ಆಗಿರಬಹುದು... ಸರಿ, ಇನ್ನು ಹೆಚ್ಚಿಗೆ ಕೇಳಬೇಡ.'

'ಇನ್ನೊಂದೇ ಪ್ರಶ್ನೆ, ಆಯೇಶಾ, ಇಂದು ರಾತ್ರಿ ನಮ್ಮ ವಿವಾಹ ನಿಶ್ಚಯವಾಯಿತು, ನಮ್ಮ ವಿವಾಹ ಯಾವಾಗ?'

'ಇಲ್ಲ, ಸದ್ಯ ಇಲ್ಲ' ಅವಸರದಿಂದೆಂದಳು, 'ಲಿಯೋ, ಸದ್ಯ ನೀನು ಆ ವಿಚಾರ ಮಾಡ ಬಾರದು. ಇನ್ನೊಂದು ವರ್ಷದವರೆಗೆ ಕೇವಲ ನನ್ನ ಸ್ನೇಹಿತನೂ ಪ್ರಿಯತಮನೂ ಆಗಿರುವು ದರಲ್ಲೇ ನೀನು ತೃಪ್ತಿಪಟ್ಟುಕೊಂಡಿರಬೇಕಷ್ಟೇ.'

'ಯಾಕೆ? ಇಷ್ಟು ದಿನವೆಲ್ಲ ನಾನು ಹಾಗೆ ಮಾಡಿ ಬೇಸತ್ತಿದ್ದೇನೆ. ಅಲ್ಲದೆ, ಕಾಲಚಕ್ರ ಉರುಳುತ್ತಿದೆ; ನಾನು ಬೇಗನೆ ವೃದ್ಧನಾಗುವೆ; ನನ್ನ ಜೀವನದ ಅಂತ್ಯ ಸಮೀಪಿಸುತ್ತಿದೆ.' ಆತ ನಿರಾಸೆಯಿಂದ ಹೇಳಿದ.

'ಇಂಥ ಅಪಶಕುನದ ಮಾತಾಡಬೇಡ' ಎಂದು ರೇಗಿದಳು... 'ಆದರೂ ನಿನ್ನ ಮಾತು ನಿಜ;

ಕಾಲನ ಆಕ್ರಮಣವನ್ನು ತಡೆಯಲು ನಿನ್ನ ದೇಹಕ್ಕೆ ಸಾಮರ್ಥ್ಯವಿಲ್ಲ. ಆದ ಕಾರಣ, ವಸಂತ ಋತುವಿನಲ್ಲಿ ಹಿಮವೆಲ್ಲ ಕರಗಿದಾಗ, ನಾವು ಕೂಡಿಯೇ ಲಿಬಿಯಾಕ್ಕೆ ಪ್ರಯಾಣಗೈದು, ಅಲ್ಲಿ ಜೀವನಸತ್ವದಲ್ಲಿ ಅಗ್ನಿಸ್ನಾನ ಮಾಡಿ ನೀನು ಚಿರ-ಯೌವನ ಪಡೆದು ನಂತರ ನಾನು ನಿನ್ನನ್ನು ವಿವಾಹವಾಗುವೆ' ಎಂದು ಹೇಳಿದಳು.

'ನಾವಲ್ಲಿ ಹೋಗಿ ಮುಟ್ಟಬೇಕಾದರೆ ಇನ್ನೂ ಎರಡು ವರ್ಷವಾದರೂ ಕಳೆಯುತ್ತವೆ. ಆದ್ದರಿಂದ, ಮೊದಲು ವಿವಾಹವಾಗಿ ಆನಂತರ ಅಲ್ಲಿಗೆ ಪ್ರಯಾಣ ಬೆಳೆಸೋಣ' ಎಂದು ಮೊರೆಯಿಟ್ಟ.

ಆದರೆ ಅವಳು 'ಇಲ್ಲ, ಇಲ್ಲ, ಇಲ್ಲ' ಎಂದು ನಿರಾಕರಿಸುತ್ತಲೆ ಇದ್ದಳು. ಕೊನೆಗೆ ಎದ್ದು, 'ಇನ್ನು ಬೇಗ ಸಿದ್ಧಮಾಡಿಕೊಳ್ಳಿ; ನಾಳೆ ಹೊರಟುಹೋಗೋಣ.' ಎಂದು ನಮಗೆ ಅಪ್ಪಣೆ ಕೊಟ್ಟಳು.

*

ನಂತರದ ಕೆಲವು ವಾರಗಳಲ್ಲಿ ನಾನು ಆಯೇಶಾಳ ಕುರಿತು ಬಹಳೇ ಆಲೋಚಿಸಿದ್ದುಂಟು. ಅವಳು ಮರ್ತ್ಯಳೋ, ಅಮರಳೋ? ನನಗಂತೂ ಇದುವರೆಗೂ ಗೊತ್ತಾಗಿಲ್ಲ. ಅವಳ ಶಕ್ತಿಸಾಮರ್ಥ್ಯದ ಆಳವನ್ನೂ ನಾನರಿಯೆ. ಪರ್ವತ-ಶೃಂಗದ ಮೇಲೆ ಪ್ರಥಮತಃ ಅವಳು ನಿಜಕ್ಕೂ ಕುರೂಪಿಯಾಗಿಯೋ ವೃದ್ಧಳಾಗಿಯೋ ಇದ್ದಳೋ, ಅಥವಾ ತನ್ನ ಪ್ರಿಯತಮನ ಸತ್ವಪರೀಕ್ಷೆಗೋಸ್ಕರ ಅಂಥ ರೂಪ ತಾಳಿದ್ದಳೋ ಎನ್ನುವದು ನನಗೆ ತಿಳಿಯದು. ಕೋರ್ ಗುಹೆಗಳಲ್ಲಿ ಅಂಥ ದುರ್ಘಟನೆಗೀಡಾದವಳ ಅಂತರಾತ್ಮ ಈ ಮಧ್ಯ ಏಶಿಯದ ಪರ್ವತಶಿಖರಕ್ಕೆ ವಾಯುವಿನೊಂದಿಗೆ ತೇಲಿಬಂದಿತೆಂಬ ಸಂಗತಿಯೂ ನನಗೆ ಅರಿಯದು. ಈ ವೃತ್ತಾಂತದ ಓದುಗರೇ ತಂತಮ್ಮ ಅಭಿ-ಪ್ರಾಯಗಳನ್ನು ರೂಪಿಸಿಕೊಳ್ಳಲಿ.

ಲಿಯೋ ಸತತವಾಗಿ ಆಯೇಶಾಳ ಸಾನ್ನಿಧ್ಯದಲ್ಲಿ ವಾಸ ಮಾಡುತ್ತಿದ್ದ. ವಿವಾಹವಿಷಯವೊಂದರ ಹೊರತಾಗಿ, ಆತನ ಇತರ ಎಲ್ಲ ಅಭಿಲಾಷೆಗಳನ್ನು ಆಯೇಶಾ ಪೂರೈಸುತ್ತಿದ್ದಳು. ನಾವು ಪ್ರತಿ ಸಾಯಂಕಾಲ ಅವಳ ಜತೆಯಲ್ಲಿ ಕಳೆಯುತ್ತಿದ್ದೆವು. ಆದರೂ, ಸದಾ ಹೀಗೆ ಇದ್ದರೆ ಆತನಲ್ಲಿ ಆಲಸ್ಯ ಬೆಳೆಯುವದೆಂದು ತಿಳಿದು ಲಿಯೋ ಶಿಕಾರಿಯಾಡಲು ಹೋಗಬಹುದೆಂದು ಸೂಚಿಸಿದಳು. ಅವನೇನಾದರೂ ಅಪಘಾತಕ್ಕೊಳಗಾಗಬಹುದೆಂದು ಭಯಪಟ್ಟರೂ ಆತನಿಗೆ ಬೇಟೆಯಾಡುವದಕ್ಕೆ ಹೋಗಲು ಒತ್ತಾಯಪಡಿಸಿದಳು.

ಹೀಗೊಮ್ಮೆ ಅಪಘಾತ ಸಂಭವಿಸಿಯೇ ಬಿಟ್ಟಿತು. ಆಯೇಶಾಳೊಂದಿಗೆ ನಾನು ಉದ್ಯಾನದಲ್ಲಿ ಕುಳಿತಿದ್ದೆ. ಗಾಯಗೊಂಡ ಕೈ ನೋವಿನ ಸಲುವಾಗಿ ನಾನು ಶಿಕಾರಿಗೆ ಹೋಗುತ್ತಿರಲಿಲ್ಲ. ಅವಳು ಹಿಮಾಚ್ಛಾದಿತ ಪರ್ವತಗಳತ್ತ ಶೂನ್ಯ ದೃಷ್ಟಿಯಿಂದ ನೋಡುತ್ತಿದ್ದಳು. ನಾನು ಸುಮ್ಮನೆ ಅವಳ ಅನುಪಮ ರೂಪಲಾವಣ್ಯವನ್ನು ಅವಲೋಕಿಸುತ್ತಿದ್ದೆ. ಆಕೆ ಒಮ್ಮೆಲೆ ಪ್ರಕ್ಷುಬ್ಧಳಾಗಿ, ಮೈಲುಗಟ್ಟಲೆ ದೂರವಿರುವ ಬೆಟ್ಟದ ಪಾರ್ಶ್ವದತ್ತ ಕೈಮಾಡಿ ತೋರಿಸುತ್ತ, 'ಓಹ್, ...ಓಹ್...ನೋಡಲ್ಲಿ!' ಎಂದಳು.

ನಾನೆಷ್ಟು ದಿಟ್ಟಿಸಿ ನೋಡಿದರೂ, ಹಿಮದ ಹೊರತಾಗಿ ಮತ್ತೇನೂ ಕಾಣಿಸಲಿಲ್ಲ 'ಕುರುಡ, ಮೂರ್ಖ. ನನ್ನ ಪ್ರಭು ಅಪಾಯಕ್ಕೀಡಾಗಿರುವುದು ನಿನಗೆ ಕಾಣಿಸುವದಿಲ್ಲವೇ?' ಎಂದು ಅರಚಿದಳು. 'ಓಹ್, ನಾನು ಮರೆತೆ... ನಿನಗೆ ದೂರ-ದೃಷ್ಟಿ ಇಲ್ಲ. ಈಗ ನೋಡು,' ಎಂದು ನನ್ನ ತಲೆಯಮೇಲೆ ತನ್ನ ಕೈಯನ್ನಿರಿಸಿ, ಏನೋ ಉಸುರಿದಳು. ಕೂಡಲೆ ನನ್ನ ತಲೆಯಲ್ಲಿ ವಿದ್ಯುತ್ಸಂಚಾರವಾದಂತಾಯಿತು. ನನ್ನ ಕಣ್ಣ ಮುಂದೆಯೇ, ಲಿಯೋ ದೊಡ್ಡದೊಂದು ಹಿಮ ಚಿರತೆಯೊಂದಿಗೆ ಸೆಣಸಾಡುತ್ತಿರುವುದು ಕಂಡಿತು. ಅವನ ಸುತ್ತಲೂ ಶಿಕಾರಿಯ ಮುಖಂಡ ಮತ್ತಿ-ತರ ಬೇಟೆಗಾರರು ಆತನನ್ನು ರಕ್ಷಿಸಲು ಓಡಾ-ಡುತ್ತ, ತಮ್ಮ ಭರ್ಚಿಗಳಿಂದ ಆ ಕಾಡುಮೃಗ-ವನ್ನು ಇರಿಯಲು ಪ್ರಯತ್ನಿಸುತ್ತಿದ್ದರು.

ಭಯಗ್ರಸ್ತಳಾದ ಆಯೇಶಾ ನನ್ನ ಪಕ್ಕದಲ್ಲಿ ಕಳವಳದಿಂದ ಜೋಲಾಡುತ್ತಿದ್ದಳು. ಕೊನೆಗೆ ಲಿಯೋ ತನ್ನ ಶಿಕಾರಿ ಚಾಕುವನ್ನು ಚಿರತೆಯ ಹೊಟ್ಟೆಯಲ್ಲಿ ಇರಿದಾಗ ಅದು ಹಿಮದಲ್ಲಿ ಬಿದ್ದು ಒಂದೆರಡು ಬಾರಿ ಉರುಳಾಡಿ ಸ್ತಬ್ಧವಾಯಿತು. ಆ ಮೇಲೆ ಲಿಯೋ ಎದ್ದು, ನಗುತ್ತ ಸುರಕ್ಷಿತ-ವಾಗಿ ನಿಂತಿದ್ದು ನೋಡಿ ಅವಳಿಗೆ ಸಮಾಧಾನ

ವಾಯಿತು.

ಆ ದೃಶ್ಯ ಒಮ್ಮೆಲೆ ಮಾಯವಾಯಿತು. ಗಾಬರಿಗೆಟ್ಟ ಆಯೇಷಾ ಸಾಮಾನ್ಯ ಸ್ತ್ರೀಯಂತೆ, ನನ್ನ ಭುಜದ ಮೇಲೆ ತಲೆಯಾನಿಸಿ, ನಿಟ್ಟುಸಿರೆಳೆದಳು. 'ನಾನೆಷ್ಟೆಂದು ಸಹಿಸಿಕೊಳ್ಳಬೇಕು!' ನೋಡಿದೆಯಾ, ಹೊಲ್ಲಿ, ನನ್ನದೆಂಥ ಯಾತನಾಮಯ ಜೀವನ!' ಅಂದಳು.

ನಾಲ್ಕು ಗಂಟೆಗಳ ನಂತರ ಲಿಯೋ ಕುಂಟುತ್ತ ಮರಳಿ ಬಂದಾಗ ಆಯೇಷಾ ಅವನೆಡೆಗೆ ಸರಸರ ಹೋಗಿ, ಚಿಂತಾಕುಲಳಾಗಿ ಆತನ ಯೋಗಕ್ಷೇಮವನ್ನು ವಿಚಾರಿಸಿದಳು. 'ಈ ವಿಷಯವೆಲ್ಲ ನಿನಗೆ ಹೇಗೆ ಗೊತ್ತು?' ಆತ ಕೇಳಿದ.

'ನಾನು ನೋಡಿದೆನೆಂದು ಗೊತ್ತು' ಉತ್ತರಿಸಿದಳು.

'ಆದರೆ ಇಲ್ಲಿಂದ ನೀನು ಹೊರಬಿದ್ದಿಲ್ಲವಲ್ಲ? ಹೇಗೆ ನೋಡಿದೆ?'

'ಹೇಗಾದರೂ ಆಗಲಿ. ನಾನು ನೋಡಿದೆ. ಹೊಲ್ಲಿಯೂ ನೋಡಿದ. ಕೇಳು.'

'ಇದೆಲ್ಲ ಮಂತ್ರವಾಟ ನನಗೆ ಸಾಕಾಗಿ ಹೋಗಿದೆ.'

'ಒಂದು ಗಂಟೆಯಾದರೂ ನಾನೊಬ್ಬನೆ ಇರಗೋಡಿ. ನನಗೋಸ್ಕರ ಇಷ್ಟೇಕೆ ಕಾಳಜಿ? ನಾನೇನು ಕಂಕುಳಿನ ಕೂಸೇ? ಈ ಮಂತ್ರ ಮಾಟದಿಂದ ನನ್ನ ಮೇಲೆ ಗೂಢಚರ್ಯೆ ನಡೆಸುವಬೇಕೆ?' ಎಂದು ಅವನನ್ನು ತರಾಟೆಗೆ ತೆಗೆದುಕೊಂಡ ಲಿಯೋ. ಇದನ್ನೆಲ್ಲ ಆಯೇಶಾ ನಮ್ರತೆಯಿಂದಲೇ ಸಹಿಸಿದಳು. ಮತ್ತೆ ಯಾರಾದರೂ ಅವಳಿಗೆ ಇಂಥ ಮಾತುಗಳನ್ನಾಡಿದ್ದರೆ ಆತನ ಅವತಾರವೇ ಮುಗಿಯುತ್ತಿತ್ತು. ಆಯೇಶಾ ಸಾಮಾನ್ಯಳಂತೆ ಅಳಹತ್ತಿದಳು. ಕಂಬನಿಗಳು ಒಂದೊಂದಾಗಿ ಅವಳ ಬಾಗಿದ ಮುಖದ ಮೇಲಿಳಿದು ನೆಲದಮೇಲೆ ಬಿದ್ದವು.

ಅವಳು ಅಳುವುದನ್ನು ಕಂಡು ಲಿಯೋನ ಕೋಪವೆಲ್ಲ ಕರಗಿತು. ಪಶ್ಚಾತ್ತಾಪದಿಂದ ಅವಳ ಕ್ಷಮೆ ಕೋರಿದ. ಆತನ ಕೈಹಿಡಿದು, ಆಯೇಶಾ, 'ಲಿಯೋ ನಿನ್ನಿಂದ ಇಂಥ ನಿಷ್ಠುರ ನುಡಿಗಳನ್ನು ಸಹಿಸಲಾರೆ! ನೀನೆಷ್ಟು ನಿರ್ದಯಿ! ನಾನೇನು ತಪ್ಪು ಮಾಡಿದೆ? ನಿನ್ನ ಮೇಲೆ ನನ್ನ ಅಂತರಾತ್ಮ ಸದಾ ಕಣ್ಣಿಟ್ಟಿರೆ. ನಾನೇನು ಮಾಡಲಿ? ನೀನು ಅಪಾಯಕ್ಕೀಡಾದಾಗ ನನ್ನ ಹೃದಯ ಅದೆಷ್ಟು ತಲ್ಲಣಿಸುವದು ಗೊತ್ತೆ?' ಎಂದಳು.

'ಪ್ರಿಯೇ, ನನಗೋಸ್ಕರ ನೀನಿಷ್ಟು ಭಯಪಡುತ್ತಿದ್ದರೆ, ನನಗೆ ಆ ನಿನ್ನ ಅಮರತ್ವದ ವರ ಪ್ರಸಾದ ಬೇಡ. ಅಂದರೆ ನಾವೆಂದಿಗೂ ಬೇರ್ಪಡಲಾರೆವು. ಇಲ್ಲವಾದರೆ ನಾವು ಮದುವೆಯಾಗಿ, ನಮ್ಮ ಭವಿಷ್ಯವನ್ನು ಎದುರಿಸೋಣ. ಮರಣ ಯಾರಿಗೂ ತಪ್ಪಿದ್ದಲ್ಲ; ಆದರೆ ಸಾಯುವ ಮೊದಲು ನಾನು ಒಂದು ಗಂಟೆಯಾದರೂ ನಿನ್ನೊಂದಿಗಿದ್ದು ಸುಖ ಅನುಭವಿಸಬೇಕೆಂದಿರುವೆ!'

'ಅದೊಂದು ಮಾತ್ರ ಬೇಡ. ನನಗೆ ಧೈರ್ಯವಿಲ್ಲ. ಲಿಯೋ, ನಮ್ಮ ವಿವಾಹಕ್ಕೆ ಮಾತ್ರ ಇನ್ನು ಆಗ್ರಹಪಡಿಸಬೇಡ. ಯಾಕೆಂದರೆ, ನಾನು ಒಪ್ಪಿ ನಿನ್ನನ್ನು ಅಪಾಯದ ದಾರಿಗೇ ಎಳೆದೊಯ್ಯಬಹುದು!' ಎಂದು ಖೇದದಿಂದ ಆಯೇಶಾ ಓಡಿಹೋದಳು.

*

## ೪

ಮುಂದೆ ಕೆಲವು ದಿನಗಳಲ್ಲಿಯೇ, ನಮಗೆ ಆಯೇಶಾಳ ಸ್ವಭಾವದ ಮತ್ತೊಂದು ಸ್ವರೂಪ ಅಂದರೆ ಅವಳ ಮಹತ್ವಾಕಾಂಕ್ಷೆಯ ನಿದರ್ಶನವಾಯಿತು. ಸಾಯಂಕಾಲ ಊಟವಾದ ನಂತರ, ನಮ್ಮ ಉಜ್ವಲ ಭವಿಷ್ಯದ ಬಗ್ಗೆ ಚರ್ಚಿಸುವುದು ಅವಳ ರೂಢಿ.

ಈ ವೃತ್ತಾಂತದ ಪೂರ್ವ ಭಾಗವನ್ನು ಓದಿದವರಿಗೆ, ಕೋರ್‌ನಲ್ಲಿ ನಾವು ಅವಳನ್ನು ಕಂಡಾಗ, ನಾವು ಇಂಗ್ಲಂಡಿನವರೆಂದು ತಿಳಿದು, ತಾನು ಬ್ರಿಟನ್ನಿನ ಸಮ್ರಾಜ್ಞಿ ಆಗಬೇಕೆಂಬ ಅಭಿಲಾಷೆಯನ್ನು ವ್ಯಕ್ತಪಡಿಸಿದ್ದು ನೆನಪಿರಬಹುದು. ಈಗ ಅವಳ ಕಲ್ಪನೆ ವಿಸ್ತಾರವಾಗಿತ್ತು. ಲಿಯೋ ಅಖಂಡ ಜಗತ್ತಿನ ಸರ್ವಾಧಿಪತಿಯಾಗಬೇಕೆಂಬ ಆಕಾಂಕ್ಷೆಯಿಟ್ಟುಕೊಂಡಿದ್ದಳು. ತನಗೆ ಇಂಥ ಅಪೇಕ್ಷೆ ಇಲ್ಲವೆಂದು ಲಿಯೋ ಅವಳಿಗೆ ಎಷ್ಟು ಬಾರಿ ಹೇಳಿದರೂ, ಆಕೆ ಬರಿ ನಕ್ಕು, 'ಮರ್ತ್ಯರಲ್ಲಿ ಆಯೇಶಾ ಅದ್ವಿತೀಯಳು. ಅವಳ ಪ್ರಭು ಲಿಯೋ ಲೋಕದ ಸಾರ್ವಭೌಮ – ತಿಳಿಯಿತೆ? ಇನ್ನು ಮೇಲೆ ನಮ್ಮ ಜೀವನದ ಆರಂಭ. ರಾಜ ಮಹಾರಾಜರು ನಮ್ಮ ಸಿಂಹಾಸನದ ಮುಂದೆ ಮಂಡೆಯೂರಿ ವಿನಯರಾಗಿ ನಮ್ಮ ಆಜ್ಞೆ ಪಾಲಿಸಲು ಸಿದ್ಧರಾಗಿರುವುದನ್ನು ನೋಡುವದು ನನಗೆ ಎಷ್ಟು ಆನಂದದಾಯಕ.'

ಲಿಯೋಗೆ ಈ ತತ್ವ ಹಿಡಿಸಿದಂತಿರಲಿಲ್ಲ. 'ಇದನ್ನೆಲ್ಲ ಹೇಗೆ ಸಾಧಿಸುವಿ, ಹೇಳು?' ಎಂದ.

'ಬಹಳ ಸುಲಭ.'

'ಅನೇಕ ಬಾರಿ ಬೇರೆ ಬೇರೆ ರಾಷ್ಟ್ರಗಳ ಬಗ್ಗೆ ಹೊಲ್ಲಿಯ ಉಪನ್ಯಾಸಗಳನ್ನು ನಾನು ಕೇಳಿದ್ದೇನೆ, ಆತ ಬರೆದು ತೋರಿಸಿದ ನಕ್ಷೆಗಳನ್ನೂ ಪರಿಶೀಲಿಸಿದ್ದೇನೆ. ಜಗತ್ತಿನ ಜನಾಂಗಗಳ ಕುರಿತು ನಿನ್ನ ವರದಿಗಳ ಬಗೆಯೂ ದೀರ್ಘವಾಗಿ ವಿಚಾರ ಮಾಡಿದ್ದೇನೆ, ಅವರ ಮೂರ್ಖತನ, ದಾರಿದ್ರ್ಯ, ಕ್ಷುದ್ರ ಅಧಿಕಾರಕ್ಕಾಗಿ ವ್ಯರ್ಥ ಹೋರಾಟವನ್ನೆಲ್ಲ ಅರಿತಿದ್ದೇನೆ. ಅದಕ್ಕೆ ಅವರನ್ನು ಒಟ್ಟುಗೂಡಿಸುವದೇ ಉತ್ತಮ ಮಾರ್ಗವೆಂದು ನನ್ನ ನಿರ್ಧಾರ. ನಾವು ಅವರ ಮುಖಂಡ

ರಾಗಿ, ಅವರದೆಲ್ಲ ಕಾರ್ಯಭಾರವನ್ನು ನಿರ್ವಹಿಸಿ, ಜಗತ್ತಿನ ಯುದ್ಧ, ರೋಗ, ದಾರಿದ್ರ್ಯಗಳನ್ನು ನಿರ್ಮೂಲಗೊಳಿಸಿದರೆ, ಎಲ್ಲರೂ ಆಜನ್ಮ ಪರ್ಯಂತ ಸುಖಶಾಂತಿಯಿಂದ ಜೀವಿಸುವರು.'

'ಜಗತ್ತಿನಲ್ಲಿಯ ರಾಜ ಮಹಾರಾಜರು ತಮ್ಮ ಮುಕುಟಗಳನ್ನು ತೆಗೆದು ನಿನ್ನ ತಲೆಯ ಮೇಲಿಡುವಂತೆ ಹೇಗೆ ಮಾಡುವಿ?' ಆಶ್ಚರ್ಯದಿಂದ ನಾನು ಕೇಳಿದೆ.

'ಅವರ ಪ್ರಜೆಗಳೇ ಅವುಗಳನ್ನು ನಮಗೆ ಅರ್ಪಿಸುವಂತೆ ಮಾಡುವರು ಹೊಲ್ಲಿ. ಸ್ವಲ್ಪ ವಿಚಾರ ಮಾಡಿ ನೋಡಯ್ಯ! ನಾವು ಪ್ರಬಲರಾಗಿ, ಅನುಪಮ ಶಕ್ತಿ ಸೌಂದರ್ಯಯುತರಾಗಿ, ಅವರ ಅಭೀಷ್ಟ ಪೂರ್ತಿಗಾಗಿ ಹಣ ಸುರಿಯುತ್ತ ಹೋದರೆ, ಅವರು "ನೀವೇ ನಮ್ಮ ಅಧಿಪತಿಗಳು" ಎಂದು ಜಯಘೋಷ ಮಾಡಲಾರರೇ? ರಣರಂಗದಲ್ಲಿ ನನ್ನ ಭವ್ಯ ಧ್ವಜಗಳು ವಿಜಯ ಪಥದಲ್ಲಿ ಮುನ್ನಡೆದಂತೆ ಒಂದೊಂದೇ ರಾಷ್ಟ್ರ ಅಳಿದು ಹೋಗಿ ಕೊನೆಗೆ ಲೋಕದ ಸಾರ್ವಭೌಮನೆಂದು ಲಿಯೋನ ಪಟ್ಟಾಭಿಷೇಕ ಮಾಡುವೆ.' ಎಂದಳು ಸರಳವಾಗಿ.

ಈ ವಿಲಕ್ಷಣ ವಿಚಾರ ಲಿಯೋನ ಸಾಮಾಜಿಕ ಹಾಗೂ ರಾಜಕೀಯ ಧೋರಣೆಗೆ ವಿರುದ್ಧವಾಗಿತ್ತು. ಆತ ಅವಳೊಡನೆ ವಾದಿಸುತ್ತಲೇ ಇದ್ದ. ಈ ಅಸಂಬದ್ಧ ಯೋಜನೆಗೆ ಅಪರಿಮಿತ ಹಣ ಬೇಕಾಗುವುದರಿಂದ ಕಟ್ಟಕಡೆಗೆ ಅವೆಲ್ಲ ಕುಸಿದು ಬೀಳುವವೇದೂ ಲಿಯೊ ಹೇಳಿದ. ಎಂಥ ತೆರಿಗೆಯ ಪದ್ಧತಿಯಿಂದಲೂ ಅವಳಿಗೆ ಅಷ್ಟು ಹಣ ಪೂರೈಸುವದು ಅಸಾಧ್ಯ ಎಂದು ಸಾಧಿಸಿದ.

ಅವಳು ನಗುತ್ತ 'ನಾನು ಬರೀ ಗಾಳಿಗೋಪುರಗಳನ್ನು ಕಟ್ಟುವ ಹುಚ್ಚು ಹುಡುಗಿ ಎಂದು ನೀವಿಬ್ಬರೂ ತಿಳಿದಿದ್ದೀರಲ್ಲವೇ? ಆದರೆ, ನಾನು ಪೂರ್ವಸಿದ್ಧತೆಗಳಿಲ್ಲದೆ ಇಂಥ ಹೋರಾಟ ಹೂಡುವೆನೆಂದು ತಿಳಿದಿರುವಿರಾ, ನಡೆಯಿರಿ, ನಿಮಗೊಂದು ಚಮತ್ಕಾರ ತೋರಿಸುವೆ' ಎಂದು ಕರೆದಳು.

ಅವಳನ್ನು ಹಿಂಬಾಲಿಸಿದೆವು. ಹಿಂದೆಂದೂ ನೋಡದ ಅನೇಕ ಮಾರ್ಗಗಳಲ್ಲಿ ಹಾಯ್ದು, ಕೊನೆಗೊಂದು ಮುಚ್ಚಿದ ಬಾಗಿಲೆದುರು ಬಂದು ನಿಂತೆವು. ಅದನ್ನು ತೆರೆದು ಒಳಹೊಕ್ಕಾಗ, ಆ ಗವಿಯು ಒಂದು ಪ್ರಯೋಗಶಾಲೆಯೆಂದು ತಿಳಿಯಿತು. ಅಲ್ಲಿದ್ದ ಕುಲುಮೆಯಲ್ಲಿಯ ಜ್ವಾಲೆ ಅಗ್ನಿಪರ್ವತದ ಗರ್ಭದಿಂದಲೆ ಹುಟ್ಟಿಬಂದದ್ದು. ಒಂದಿಬ್ಬರು ಅರ್ಚಕರು ದೊಡ್ಡ ಕಡಾಯಿಯಲ್ಲಿ ಕಬ್ಬಿಣ ಸಳಿಯಿಂದ ಏನೋ ತಿರುವುತ್ತಲಿದ್ದರು. ಕಬ್ಬಿಣದ ಅದಿರಿನಿಂದ ಚಿನ್ನ ತಯಾರಾಗುತ್ತಿದೆ ಎಂದಳು ಆಯೇಶಾ! ಈ ವಿದ್ಯೆ ಅವಳ ಅದ್ಭುತ ಶಕ್ತಿಯ ಮತ್ತೊಂದು ಪ್ರತೀಕವಾಗಿತ್ತು.

'ನೋಡಿದಿರಾ? ಈ ನನ್ನ ರಸಾಯನ ಶಾಸ್ತ್ರದಿಂದ ನಮಗೆ ಅವಶ್ಯವಿದ್ದಾಗ ಸಾಕಷ್ಟು ಚಿನ್ನವನ್ನು ಪಡೆಯಬಹುದು.' ಆಕೆಯ ಮುಖದಲ್ಲಿ ಗೆಲುವಿತ್ತು.

'ಆದರೆ, ಆಯೇಶಾ, ಈ ನಿನ್ನ ಪ್ರಯೋಗ ಜಗತ್ತಿನ ನಾಶಕ್ಕೆ ಕಾರಣವಾಗುವುದೆಂದು ಬಲ್ಲೆಯಾ?'

'ಅದು ಹೇಗೆ? ಹೇಳು ಲಿಯೋ.'

'ಜಗತ್ತಿನಲ್ಲಿ ಚಿನ್ನವೇ ಸಂಪತ್ತಿನ ಒರೆಗಲ್ಲಾಗಿದೆ. ಚಿನ್ನ ಎಲ್ಲ ನಾಗರಿಕತೆಗಳ ಮೂಲಾಧಾರ. ಚಿನ್ನ ಸುಲಭವಾಗಿ ಸಿಗುವಂತಾದರೆ, ವ್ಯಾಪಾರೋದ್ಯಮವೆಲ್ಲ ಕುಸಿಯುವದು. ಪೂರ್ವಜರಂತೆ ಮತ್ತೆ ಪದಾರ್ಥಗಳ ವಿನಿಮಯವನ್ನು ಆರಂಭಿಸಬೇಕಾಗುವದು.'

'ಅದೇ ಒಳಿತಲ್ಲವೇ? ಜಗತ್ತಿನಲ್ಲಿ ಲೋಭ, ಮೋಹಗಳನ್ನರಿಯದ ಕಾಲ ಮತ್ತೆ ಬಂದಂತಾಗುವುದು. ದೀನದಲಿತರ ಉದ್ಧಾರವಾದಾಗ, ಈ ಲೋಕ ಹೆಚ್ಚು ಸುಖಮಯವಾಗುವುದಿಲ್ಲವೇ? ಆಗ ಪುನಃ ನಿಜವಾದ ಧರ್ಮದ ಸ್ಥಾಪನೆಯಾಗುವದು.'

'ಹಾಗಾಗುವದೋ ಇಲ್ಲವೋ ಗೊತ್ತಿಲ್ಲ. ಜಗತ್ತು ಬದಲಾಗುವದೆಂದು ಮಾತ್ರ ಬಲ್ಲೆ, ಅಜ್ಞಾತ ಕಾನೂನುಗಳು, ನೂತನ ಯೋಜನೆಗಳಿಂದ ರೂಪಿಸಿದ ಈ ನಿನ್ನ ಜಗತ್ತು ಅತಿ ವಿಚಿತ್ರವಾಗುವುದು' ಎಂದ ಲಿಯೋ.

ಒಟ್ಟಿನಲ್ಲಿ ಭೂಮಂಡಲದ ನಿವಾಸಿಗಳನ್ನು ವಶಪಡಿಸಿಕೊಳ್ಳುವ ಪೂರ್ವಸಿದ್ಧತೆಯಲ್ಲಿ ಆ ಗವಿಯಲ್ಲಿ ಚಿನ್ನದ ತಯಾರಿ ಸತತ ನಡೆದಿತ್ತು.

*

ಮರುದಿನ ಅನಿಷ್ಟ ವಾರ್ತೆಯೊಂದು ಬಂತು. ಕಾಲೂನ್‌ನ ಖಾನಿಯಾ ಅತಿ ಕ್ರೋಧಾವಿಷ್ಟಳಾಗಿ ಆಯೇಶಾಳ ಮೇಲೆ ಯುದ್ಧ ಹೂಡುವ ತಯಾರಿಯಲ್ಲಿ ಸೈನ್ಯವನ್ನು ಒಟ್ಟುಗೂಡಿಸುತ್ತಿರುವಳೆಂದು ಗೂಢಚಾರರು ವರ್ತಮಾನ ತಂದರು. ಅದಕ್ಕೆ ಆಯೇಶಾ ತನ್ನ ಜನರಿಗೂ ಇಪ್ಪತ್ತು ಸಾವಿರ ಸಂಖ್ಯೆಯಲ್ಲಿ ಸೇರಿ ಸಿದ್ಧರಾಗಲು ಆಜ್ಞೆ ಕಳಿಸಿದಳು. ಸಮರದ ಮುಖಂಡತ್ವವನ್ನು ತಾನೇ ವಹಿಸುವವಳಿದ್ದಳು.

ಅಂದು ರಾತ್ರಿ ಊಟದ ವೇಳೆಯಲ್ಲಿ ಆಯೇಶಾ ಆಗಾಗ ಖಿನ್ನ ಮನಸ್ಕಳಾಗುತ್ತಿದ್ದರೂ ಊಟವಾದ ಮೇಲೆ ನಗುನಗುತ್ತ, ಹಿಂದಿನ ಕಾಲದ ಅನೇಕ ಕಥೆಗಳನ್ನು ಹೇಳಿದಳು. ಎರಡು ಸಾವಿರ ವರ್ಷಗಳ ಹಿಂದೆ ತನಗೆ ಪರಿಚಿತರಿದ್ದ ವ್ಯಕ್ತಿಗಳ ವೃತ್ತಾಂತವನ್ನು ವಿವರಿಸಿದಳು. ಬಳಿಕ ತನ್ನ ಜ್ಞಾನಪಿಪಾಸೆ ಸತ್ಯಶೋಧ ನಡೆಸಿದ್ದು, ಜೆರೂಸಲೇಮ್‌ನಲ್ಲಿ ಧರ್ಮಪ್ರಚಾರ ಮಾಡುವಾಗ ಕಲ್ಲಿನೇಟು ತಿಂದದ್ದು, ಅಲ್ಲಿಂದ ಅರೇಬಿಯಕ್ಕೆ ಮರಳಿ ಸ್ವಜನರಿಂದ ಪರಿತ್ಯಕ್ತಳಾಗಿ, ಇಜಿಪ್ತಿಗೆ ಹೋಗಿ, ಅಲ್ಲಿ ಫಾರೋನ ಆಸ್ಥಾನದಲ್ಲಿ ಒಬ್ಬ ಖ್ಯಾತ ಮಾಂತ್ರಿಕನ ಶಿಷ್ಯಳಾಗಿ ಅತೀಂದ್ರಿಯ ದೃಷ್ಟಿಯುಳ್ಳವಳೆಂದು ಆತನಿಗೇ ಗುರುವಾಗಿದ್ದು ಎಲ್ಲವನ್ನು ಹೇಳಿದಳು.

ಅನಂತರ ಆಯೇಶಾಳ ಇತಿಹಾಸ ಇಜಿಪ್ತಿನಿಂದ ಆಫ್ರಿಕಕ್ಕೆ ಮುಂದುವರೆಯಿತು. ಅಮೆನಾರ್ಟೆಸ್‌ಳ ಸಂಗಡ ಕಲ್ಲಿಕ್ರೇಟಸ್ ಅಲ್ಲಿಗೆ ಆಗಮಿಸಿದ. ಬರ್ಬರರು ಅವರನ್ನು ಹಿಂಸಿಸುತ್ತಿದ್ದಾಗ ತಾನು ಅವರನ್ನು ಬರಮಾಡಿಕೊಂಡು ಆಶ್ರಯ ನೀಡಿದ್ದಳು. ಕೋರ್ ಗುಹೆಗಳಲ್ಲಿ ಜೀವನಸತ್ತ್ವದ ಪರಿಶೋಧಕ್ಕೆ ಹೊರಡುವ ಹಿಂದಿನ ಸಂಜೆ ಮೂವರೂ ಕೂಡಿ ಊಟ ಮುಗಿಸಿದ ಬಳಿಕ ಅಮೆನಾರ್ಟೆಸ್ ಅಪಶಕುನದ ಭವಿಷ್ಯ ನುಡಿದಿದ್ದಂತೆ. ಅವಳ ನುಡಿಯಂತೆಯೇ ನಡೆಯಿತು....

ಅದೇ ವೇಳೆ ಓರೋಸ್ ಅತೀನಳಿಂದ ಬಂದ ಸಂದೇಶವನ್ನು ಓದಿ ಹೇಳಿದ: 'ವಂದನೆಗಳು,

ಆಯೇಶಾ, ಯುಗಯುಗಾಂತರಗಳಿಂದಲೂ ನೀನು ಅಪಾರ ಜ್ಞಾನವನ್ನು ಸಂಪಾದಿಸಿರುವಿ. ನಿನ್ನ ಮಂತ್ರವಿದ್ಯೆಯಿಂದ ಮರುಳಾದ ಮನುಷ್ಯರ ಕಣ್ಣಲ್ಲಿ ರೂಪಸಿಯಾಗಿ ಕಾಣುವ ಪ್ರಭಾವವನ್ನು ಪಡೆದುಕೊಂಡಿರುವಿ. ಆದರೆ ಭವಿಷ್ಯದರ್ಶನದ ಗುಣ ಮಾತ್ರ ನಿನ್ನಲ್ಲಿಲ್ಲ. ನಾನೂ ಮತ್ತು ದಿವ್ಯ ಜ್ಞಾನಿಯಾದ ನನ್ನ ಮಾವನೂ ಭವಿಷ್ಯವನ್ನು ದರ್ಶಿಸಿ, ಈ ಯುದ್ಧದ ಫಲಿತಾಂಶವನ್ನು ಕಂಡಿದ್ದೇವೆ. ನನಗೂ ನಿನಗೂ ಮರಣ; ಕಾಲೂನ್ ದೇಶದಲ್ಲಿ ರಕ್ತಪಾತ, ಒಟ್ಟಿನಲ್ಲಿ ಸರ್ವನಾಶ.'

ಆಯೇಶಾ ಅನುದ್ವಿಗ್ನಳಾಗಿ ಆಲಿಸಿದಳು. ಅನಂತರ ನಮ್ಮತ್ತ ತಿರುಗಿ, 'ಈ ಅಶುಭ ಸಂದೇಶದಿಂದ ನಾನೇನೂ ಹಿಂಜರಿಯುವುದಿಲ್ಲ. ನಾನು ಖಂಡಿತ ವಿಜಯಿಯಾಗುವೆ. ಲಿಯೊ, ಮೊದಲಿನಿಂದಲೂ ಇರುವ ಈ ನಮ್ಮ ಋಣಾನುಬಂಧ ಶಾಶ್ವತ. ದೈವಸಂಕಲ್ಪವನ್ನು ಯಾರೂ ತಪ್ಪಿಸಲಾರರು...ಇನ್ನು ವಿಶ್ರಮಿಸಿರಿ. ನಾಳೆ ನಸುಕಿನಲ್ಲಿಯೇ ಹೊರಡಬೇಕು' ಎಂದು ಎದ್ದಳು.

ಮರುದಿನ ಮುಂಜಾನೆ ನಾವು ಬರ್ಬರ ಸೈನ್ಯ ಸಮೇತರಾಗಿ ಪರ್ವತದಿಂದ ಇಳಿದೆವು. ಆಯೇಶಾ ಮತ್ತೆ ಮುಸುಕು ಹಾಕಿಕೊಂಡು, ಶ್ವೇತಾಶ್ವವನ್ನೇರಿ ಅಶ್ವಸೇನೆಯ ನಡುವೆ ಹೊರಟಳು. ಅವಳೊಂದಿಗೆ ಅಶ್ವಾರೂಢರಾದ ಲಿಯೋ ಮತ್ತು ನಾನು; ನಮ್ಮ ಸುತ್ತಲೂ ಅಸ್ತ್ರಧಾರಿ ಅರ್ಚಕರ ಕಾವಲುಪಡೆ, ಜತೆಗೆ ವಿಶಿಷ್ಟ ಯೋಧರದೊಂದು ಸೈನ್ಯಪಡೆ.

ಎಲ್ಲರೂ ಉಲ್ಲಾಸದಿಂದಿದ್ದೆವು. ಶರದೃತುವಿನ ಹಿತಕರ ಸೂರ್ಯಪ್ರಕಾಶದಲ್ಲಿ, ಆ ಮಬ್ಬಾದ ಗವಿಗಳಲ್ಲಿ ನಮ್ಮನ್ನು ಬಾಧಿಸಿದ ಭೀತಿ, ಅಪಶಕುನಗಳೆಲ್ಲ ಮಾಯವಾಗಿದ್ದವು. ಮುಂಬರುವ ಯುದ್ಧದ ಸಂಭ್ರಮದಲ್ಲಿ ನಾವು ಪುಲಕಿತರಾಗಿದ್ದೆವು. ಬಹಳ ದಿನಗಳ ಬಳಿಕ ಲಿಯೋ ಇಷ್ಟು ಗೆಲುವಿನಿಂದಿದ್ದುದನ್ನು ಕಂಡೆ. ಆಯೇಶಾಳೂ ಬಹು ಕಾಲದ ನಂತರ ಬಾಹ್ಯ ಜಗತ್ತಿನ ಆಹ್ಲಾದಕರ ದೃಶ್ಯಗಳಿಂದ ನೆಮ್ಮದಿಯಿಂದಿದ್ದಳು.

ಮಧ್ಯಾಹ್ನವೆಲ್ಲ ಬೆಟ್ಟದಿಂದಿಳಿದು, ಸೂರ್ಯಾಸ್ತದ ಸಮಯಕ್ಕೆ ರಾತ್ರಿ ವಸತಿಯ ಠಾಣೆಯನ್ನು ತಲುಪಿದೆವು. ಈ ದೊಡ್ಡ ಮೈದಾನದ ಮುಂದೆಯೇ ಆ ಅಸ್ಥಿಪಂಜರಗಳ ಕಣಿವೆ ಇದ್ದಿತು. ಅಲ್ಲಿ ಆಯೇಶಾಳಿಗಾಗಿ ಮಾತ್ರ ಡೇರೆಯೊಂದು ಸಿದ್ಧವಾಗಿತ್ತು. ನಾವು ನಮ್ಮ ಪಡೆಯವರೊಂದಿಗೆ ಹತ್ತಿರದ ಬಯಲಲ್ಲಿ ಬಂಡೆಗಲ್ಲುಗಳ ಮಧ್ಯೆ ಉಳಿದುಕೊಂಡೆವು.

ಅಂದು ಸಂಜೆ ಆಯೇಶಾ ಸ್ವಲ್ಪ ಉದ್ವಿಗ್ನಳಾಗಿದ್ದಳು. ಯಾವವೂ ಹೊಸ ಭೀತಿಗಳು ಅವಳಿಗೆ ಬಾಧಿಸಿದಂತಿತ್ತು. ಕೊನೆಗೆ ಮಲಗಲು ಎದ್ದು, ನಮಗೂ ಸುಖನಿದ್ರೆ ಕೋರಿ ರಾತ್ರಿ ಏನಾದರೂ ಹೊಸ ವಿಚಾರ ಹೊಳೆದರೆ, ನಮ್ಮೊಡನೆ ಚರ್ಚಿಸಲು ಬೆಳಗಾಗುವ ಮುಂಚೆಯೇ ಹೇಳಿ ಕಳಿಸುವುದಾಗಿ ಹೇಳಿ ಹೋದಳು. ನಾವು ದಣಿದಿದ್ದರಿಂದ ಬೇಗನೇ ಗಾಢನಿದ್ರೆಯಲ್ಲಿ ಮೈಮರೆತೆವು.

ಕಾವಲುಗಾರನ ಧ್ವನಿ ಕೇಳಿ ಎಚ್ಚೆತ್ತೆ. ನಮ್ಮೆದುರು ಅರ್ಚಕನೊಬ್ಬ ನಿಂತಿದ್ದ. ಆಯೇಶಾ ನಮಗೆ ಕೂಡಲೆ ಬರಹೇಳಿದ್ದಾಳೆಂದೂ ಓರೋಸ್‌ನಿಂದ ಸಂದೇಶ ಬಂದಿದೆಯೆಂದೂ ಹೇಳಿದ. ಅಲ್ಲದೆ, ಅವಳು ತನ್ನ ಡೇರೆ ಬಿಟ್ಟು, ತುಸು ದೂರ ಗಿರಿಕಂದರವೊಂದರಕ್ಕೆ ಹೋಗಿ, ದಾಳಿಯ ಮುನ್ನಡೆಯ ವಿಚಾರವನ್ನು ನಡೆಸಿರುವಳೆಂದೂ ಹೇಳಿದ.

ಗತ್ಯಂತರವಿಲ್ಲದೆ ಹೊರಟೆವು. ಇಕ್ಕಟ್ಟಾದ ದಾರಿಯಿಂದ ಕಣಿವೆಯ ಅಡಿ ಸೇರಿದಾಗ, ಮಂದ ಬೆಳದಿಂಗಳ ಛಾಯೆಯಲ್ಲಿ ಶ್ವೇತವಸ್ತ್ರಾಚ್ಛಾದಿತ ಆಕೃತಿಯೊಂದು ಕಂಡಿತು. ಲಿಯೋ ಆ ಕಡೆಗೆ ಬೇಗ ಬೇಗ ಹೆಜ್ಜೆ ಹಾಕಿದ. ತನ್ನನ್ನು ಹಿಂಬಾಲಿಸಬೇಕೆಂದು ಸನ್ನೆಮಾಡಿ, ಮುಂದೆ ನಡೆದಳಾಕೆ. ಶಿಲಾರಸ ನೆಲದ ಮೇಲೆ ಬಿದ್ದಿರುವ ಅಸ್ಥಿಪಂಜರಗಳ ನಡುವೆ ಹಾಯ್ದು ಎದುರಿಗಿದ್ದ ಕಲ್ಲುಬಂಡೆಯ ನೆರಳಿನಲ್ಲಿ ಹೋಗಿ ನಿಂತಳು. ಅಲ್ಲಿ ಇನ್ನೂ ಹೆಚ್ಚು ಅಸ್ಥಿಪಂಜರಗಳು ಬಿದ್ದಿರುವುದನ್ನು ಗಮನಿಸಿದೆ. ಲಿಯೋ ಅವಳ ಹತ್ತಿರ ಹೋಗಿ, 'ಆಯೇಶಾ, ಅಪರಾತ್ರಿಯಲ್ಲಿ ಇಂಥ ಸ್ಥಳದಲ್ಲಿ ಏಕೆ ಹೋಗಬೇಕು? ನಿನಗೇನಾದರೂ ಅಪಾಯವಾದರೆ?' ಎಂದ.

ಅವಳು ಉತ್ತರಿಸಲಿಲ್ಲ. ಸುಮ್ಮನೆ ತೋಳುಗಳನ್ನು ಮುಂದಕ್ಕೆ ಚಾಚಿ, ಕೂಡಲೆ ಕೆಳಗೆ ಇಳಿಬಿಟ್ಟಳು. ತಕ್ಷಣ ನಮ್ಮ ಸುತ್ತಲೂ ವಿಚಿತ್ರ

ರೀತಿಯ ಸರಸರ ಸಪ್ಪಳ ಕೇಳಹತ್ತಿದಳು. ಅಸ್ಥಿಪಂಜರಗಳೆಲ್ಲಾ ಎದ್ದು ಕೈಯಲ್ಲಿ ಖಡ್ಗಗಳನ್ನು ಹಿಡಿದು ನಮ್ಮನ್ನು ಸುತ್ತುವರಿದವು.

ಆಗ ಆಯೇಶಾ ಮಂತ್ರವಿದ್ಯೆಯ ಮತ್ತೊಂದು ಪ್ರದರ್ಶನ ಎಂದುಕೊಂಡೆ. ಲಿಯೋ ಕೂಡ 'ಇದೇನು ನಿನ್ನ ಹೊಸ ಮಂತ್ರ ಮಾಟ?' ಎಂದು ಕೋಪದಿಂದ ಕೇಳಿದ.

'ಈತನನ್ನು ಬಂಧಿಸಿ. ಆದರೆ ಪ್ರಾಣಹಾನಿ ಮಾಡಬೇಡಿರಿ!' ಎಂದಾಕೆ ಆಜ್ಞಾಪಿಸಿದಳು. ಅದು ಖಾನಿಯಾಳ ಧ್ವನಿ.

'ದ್ರೋಹಿ'! ಎಂದು ನಾನು ಚೀರುವಷ್ಟರಲ್ಲಿ ಒಂದು ಗಟ್ಟಿಮುಟ್ಟಾದ ಅಸ್ಥಿಪಂಜರ ನನ್ನ ತಲೆಯ ಮೇಲೆ ರಭಸದಿಂದ ಕುಟ್ಟಿತು. ಕಣ್ಣಿಗೆ ಕತ್ತಲಾವರಿಸಿ ಕೆಳಗೆ ಕುಸಿದು ಬಿದ್ದೆ.

*

ನನಗೆ ಸ್ಮೃತಿ ಮರಳಿದಾಗ ಬೆಳಗಾಗಿತ್ತು. ನನ್ನ ಮೇಲೆ ಬಾಗಿದ ಓರೋಸ್‌ನ ಶಾಂತ ಮುಖವನ್ನು ಕಂಡೆ. ಆತನ ಪಕ್ಕದಲ್ಲಿ ಆಯೇಶಾ ನಿಂತಿದ್ದಳು.

'ಇಲ್ಲಿ ಏನಾಯಿತು? ನನ್ನ ಪ್ರಭು ಎಲ್ಲಿ?' ಎಂದು ಕಳವಳದಿಂದ ಕೇಳಿದಳು.

'ಖಾನಿಯಾ ಅತಿನಿ ಆತನನ್ನು ಬಂಧಿಸಿ ಕರೆದೊಯ್ದಳು,' ಎಂದು ಅವಳಿಗೆ ರಾತ್ರಿ ನಡೆದ ವೃತ್ತಾಂತವನ್ನೆಲ್ಲ ವಿವರಿಸಿದೆ.

'ಅತಿನಿಗೆ ಆಯೇಶಾಳ ಪಾತ್ರ ವಹಿಸುವಷ್ಟು ಧೈರ್ಯ ಬಂದಿತೇ?' ಎಂದು ಅವಡುಗಚ್ಚಿ ಮುಷ್ಟಿ ಬಿಗಿಯಾಗಿಸಿದಳು. 'ಹೇಳು ಹೊಲ್ಲಿ, ನನ್ನ ಸ್ವಾಮಿ ಗಾಯಗೊಂಡನೆ? ಆತನ ಒಂದೊಂದು ಹನಿ ರಕ್ತಕ್ಕೂ ಒಂದು ನೂರು ಜೀವ ಬಲಿ ತೆಗೆದುಕೊಳ್ಳುವೆ!' ಎಂದು ಶಪಥ ಮಾಡಿದಳು. ಮುಂದಿನ ದಂಡಯಾತ್ರೆಗೆ ತನ್ನ ಯೋಧರನ್ನು ಹುರಿದುಂಬಿಸಿದಳು. 'ಶತ್ರು ಸೈನ್ಯ ಬಿರುಗಾಳಿಯ ಮುಂದೆ ಮಂಜಿನಂತೆ ಕರಗಿ ಹೋಗುವುದು' ಎಂದು ಧೈರ್ಯದಿಂದ ನನಗೆಂದಳು. 'ಹೊಲ್ಲಿ, ನೀನಿಂದು ಯಾವ ಮಾನವನೂ ನೋಡದಂಥ ಪವಾಡವನ್ನು ನೋಡುವಿ, ನನ್ನ ಶಕ್ತಿಗಳನ್ನು ಮುಕ್ತಗೊಳಿಸಿದಾಗ. ಈ ನನ್ನ ಮಾತನ್ನು ನೆನಪಿಡು... ಓಹ್, ಅತಿನಿ ನನ್ನ ಲಿಯೋನ ಕೊಲೆ ಮಾಡಿದರೆ...' ಎಂದು ಗೋಳಾಡಿದಳು.

'ಶಕ್ತಿಗಳನ್ನು ಮುಕ್ತಗೊಳಿಸುವದು ಎಂದರೇನು ನನಗರ್ಥವಾಗಲಿಲ್ಲ. ಆದರೂ, ಶಾಂತವಾಗಿರು; ಅತಿನಿ ಲಿಯೋನನ್ನು ಅತೀವವಾಗಿ ಪ್ರೇಮಿಸುತ್ತಾಳೆ. ಅವನ ಕೊಲೆ ಮಾಡಲಾರಳು' ಎಂದು ಹೇಳಿದೆ.

'ನಿಜ, ಆದರೆ ಆತ ಅವಳನ್ನು ನಿರಾಕರಿಸಿದಾಗ, ಅವಳ ದ್ವೇಷ, ಕೋಪಾವೇಶ ಮಿತಿ ಮೀರುವದು. ಆಗ ನನ್ನ ಪ್ರತೀಕಾರದ ಪ್ರಯೋಜನವೇನು?' ಎಂದು ಆಯೇಶಾ ಆಕಾಶದತ್ತ ದಿಟ್ಟಿಸಿ ನೋಡುತ್ತ ನಿಂತಳು. ಅವಳ ಮುಸುಕು ಹಾಕಿದ ಮುಖ ಕಾಣಿಸದಿದ್ದರೂ ಅವಳ ನೇತ್ರಗಳು ಪರ್ವತ ಶೃಂಗದ ಮೇಲಿನ ಗಗನದಲ್ಲಿ ಕೇಂದ್ರೀಕೃತವಾಗಿದ್ದವೆಂದು ಊಹಿಸಿದೆ. ಏಕಚಿತ್ತದಿಂದ ಏನನ್ನೋ ಅವಲೋಕಿಸುತ್ತಿದ್ದಂತೆ ಅವಳ ದೇಹವಿಡೀ ಕಂಪಿಸುತ್ತಿತ್ತು.

ಅಂದು ಮುಂಜಾನೆ ಹವೆ ತಂಪಾಗಿತ್ತು. ಆಗಸ ಶುಭ್ರವಾಗಿತ್ತು. ಆದರೆ ಅವಳು ದೃಷ್ಟಿ ನೆಟ್ಟಲ್ಲಿ ನಾನೂ ನೋಡಿದಾಗ, ಆಕಾಶದಲ್ಲಿ ದಟ್ಟ ಕಾರ್ಮೋಡಗಳು ಗುಂಪುಗೂಡುತ್ತಿರುವವನ್ನು ಕಂಡೆ. ಪ್ರತಿಯೊಂದು ಮೋಡಕ್ಕೆ ಅಗ್ನಿಜ್ವಾಲೆಯ ಅಂಚಿದ್ದಿತು. ಈ ವಿಲಕ್ಷಣ, ಅಶುಭಸೂಚಕ ಮೋಡಗಳನ್ನು ನೋಡಿ, ಹವಾಮಾನ ಬದಲಾಗುವದೇನೋ, ಎಂದು ಅವಳಿಗೆಂದೆ. 'ಹೌದು, ರಾತ್ರಿಯೊಳಗಾಗಿ ಹವಾಮಾನ ನನ್ನ ಕೋಪಕ್ಕಿಂತ ಉಗ್ರವಾಗುವುದು...ನಡೆಯಿರಿ, ಮುನ್ನಡೆಯಿರಿ' ಎಂದು ಕುದುರೆಯೇರಿದಳು.

ಕಾಲೂನ್ ನಗರಾಭಿಮುಖವಾಗಿ ನಮ್ಮ ಸೈನ್ಯ ಮುನ್ನುಗ್ಗಿತು. ಮೇಲುಗಡೆ ಆಕಾಶದಲ್ಲಿ ಆ ಭೀಕರ ಮೋಡಗಳೂ ನಮ್ಮೊಡನೆ ದಂಡಯಾತ್ರೆ ನಡೆಸಿದ್ದವು. ಅವರ ಕರಾಳ ನೆರಳಿನಲ್ಲಿ ಸಮವಿಸ್ತಾರದಲ್ಲೆಲ್ಲಾ ಕತ್ತಲು ಕವಿದಿತ್ತು. ಕಾಲೂನ್ ಪಟ್ಟಣದ ಮುಂದೆ ಖಾನಿಯಾಳ ಅಸಂಖ್ಯಾತ ಸೈನ್ಯಪಡೆಗಳು ಸಜ್ಜಾಗಿ ನಿಂತಿದ್ದವು. ಆ ದೊಡ್ಡ ಸೈನ್ಯದೊಡನೆ ಹೋರಾಡಿದರೆ ನಮ್ಮ ಸರ್ವನಾಶವಾದಂತೆಯೇ.

ಆಯೇಶಾ ಎಳ್ಳಷ್ಟೂ ಎದೆಗುಂದಲಿಲ್ಲ. ತನ್ನ ಮುಸುಕನ್ನು ತೆಗೆದೊಗೆದು, ಪತಾಕೆಯಂತೆ

ಮೇಲೆತ್ತಿ ಹಿಡಿದಳು. ಅವಳ ಹಣೆಯ ಮೇಲೆ ಆ ಉಜ್ವಲ ಪ್ರಭೆಯನ್ನು ಮತ್ತೆ ಕಂಡೆ, ಕೈಯೆತ್ತಿ ತನ್ನ ಶ್ವೇತ ತೆರೆಯನ್ನು ಗಾಳಿಯಲ್ಲಿ ಬೀಸಾಡಿದಳು.

ಕೂಡಲೇ ಗಗನದ ಒಡಲಿನಿಂದ ಭಯಂಕರ ಉರಿಮಳೆ ಸುರಿಯಹತ್ತಿತ್ತು. ಹಿಂದೆಂದೂ ಸಂಭವಿಸದ ರಭಸದ ಬಿರುಗಾಳಿಯೊಂದಿಗೆ ಗುಡುಗಿನ ಗರ್ಜನೆ, ಮಿಂಚಿನ ಬಾಣಗಳು ಕಾಲೂನ್ ನಗರದ ಮೇಲೆ ಅವತರಿಸಿದವು. ಕಗ್ಗತ್ತಲೆಯಲ್ಲಿ ಝಂಝಾವಾತವು ಝುಂಯ್‌ಗುಟ್ಟುತ್ತ, ಆಣೆಕಲ್ಲಿನ ವೃಷ್ಟಿ ಫಟಫಟಿಸಿತು. ಪಟ್ಟಣದ ತುಂಬೆಲ್ಲ ಹಾಹಾಕಾರ. ಸೈನಿಕರು ದಿಕ್ಕೆಟ್ಟು ಪರಾರಿಯಾದರು. ಆರ್ಭಟಿಸುವ ಸಿಡಿಲಿನ ಜ್ವಾಲೆಯಲ್ಲಿ ಸಿಕ್ಕು ಕುದುರೆಗಳು, ಸವಾರರು ನೆಲದ ಮೇಲೆ ಕುಸಿದು ನರಳಾಡುತ್ತ ಒದ್ದಾಡಿದರು. ಮರಗಳು ಕಮರಿ ಹೋದವು. ಗೋಡೆಗಳು ಕುಸಿದು ಬಿದ್ದವು. ನಿಸರ್ಗದ ಸುಪ್ತವಾದ ಶಕ್ತಿಗಳನ್ನು ಆಯೇಶಾ ಮುಕ್ತಗೊಳಿಸಿದ್ದರ ಅರ್ಥ ನನಗಾಯಿತು.

ಮರುಕ್ಷಣ ಎಲ್ಲವೂ ಸ್ತಬ್ಧವಾಯಿತು. ಸಂಜೆಯ ವೇಳೆಗೆ ಆಗಸ ಪ್ರಶಾಂತವಾಗಿತ್ತು. ಕಾಲೂನ್‌ನಲ್ಲಿ ಅರಮನೆಯತ್ತ ವೇಗದಿಂದ ಸಾಗಿದೆವು. ಮಹಾದ್ವಾರದಲ್ಲಿ ಆಯೇಶಾ ಕುದುರೆಯಿಂದ ಜಿಗಿದು ಒಳಾಂಗಣ, ಹಜಾರಗಳನ್ನು ದಾಟಿ, ಮೆಟ್ಟಿಲುಗಳನ್ನು ಏರಿ ಮೇಲಿನ ಉಪ್ಪರಿಗೆಯಲ್ಲಿದ್ದ ಶಮಣ ಸಿಂಬ್ರಿಯ ಕೋಣೆಗೆ ಧಾವಿಸಿದಳು. ಮುಚ್ಚಿದ ಬಾಗಿಲು ತಾನಾಗಿಯೇ ತೆರೆದು ಒಳಹೊಕ್ಕಾಗ, ಒಂದು ಕುರ್ಚಿಯಲ್ಲಿ ಲಿಯೋನನ್ನು ಹಗ್ಗಗಳಿಂದ ಕಟ್ಟಿಹಾಕಿ, ಆತನನ್ನು ಕೊಲ್ಲಲು ಕೈಯಲ್ಲಿ ಚೂರಿ ಹಿಡಿದುಕೊಂಡು ಸಿಂಬ್ರಿ ಸಿದ್ಧನಾಗಿ ನಿಂತಿದ್ದ. ಅಲ್ಲಿಯೇ ನೆಲದ ಮೇಲೆ, ಖಾನಿಯಾ ಅತಿನಿ ಕೈಯಲ್ಲಿ ವಿಷದ ಬಟ್ಟಲು ಹಿಡಿದು ಅಂಗಾತ ಸತ್ತು ಬಿದ್ದಿದ್ದಳು.

ಆಯೇಶಾ ಕೈ ಬೀಸಿದಳು. ತಕ್ಷಣ ಸಿಂಬ್ರಿಯ ಕೈಯಿಂದ ಚೂರಿ ಕೆಳಗೆ ಬಿದ್ದಿತು, ಆತ ಕಲ್ಲಿನ ಮೂರ್ತಿಯಂತೆ ನಿಶ್ಚಲನಾಗಿಬಿಟ್ಟ, ಅದೇ ಚೂರಿಯನ್ನು ಎತ್ತಿಕೊಂಡು ಆಯೇಶಾ ಲಿಯೋನನ್ನು ಬಂಧಿಸಿದ ಹಗ್ಗಗಳನ್ನು ಕತ್ತರಿಸಿದಳು. ಆತ ಎದ್ದು ದಿಗ್ಭ್ರಾಂತನಾಗಿ ಸುತ್ತಲೂ ನೋಡಿದ.

'ಸರಿಯಾದ ಸಮಯಕ್ಕೆ ಬಂದೆ, ಆಯೇಶಾ. ಆದರೆ ಆ ಭಯಂಕರ ಬಿರುಗಾಳಿ, ಆ ಆರ್ಭಟಿಸುವ ಮಳೆ, ಗುಡುಗು ಮಿಂಚಿನಲ್ಲಿ ಇಲ್ಲಿಗೆ ಹೇಗೆ ಬಂದು ಮುಟ್ಟಿದೆ?' ಎಂದ ಲಿಯೋ.

'ಅವೆಲ್ಲ ನನ್ನ ಕೈಯಲ್ಲಿಯೇ ಇವೆ. ನಿನ್ನನ್ನು ರಕ್ಷಿಸಲು ಅವನ್ನು ನಾನೇ ಕಳಿಸಿದ್ದೆ. ಕರಾಳರಾತ್ರಿ ಕಳೆಯಿತು, ವಿಜಯದ ಬೆಳಕು ಮೂಡುತ್ತಿದೆ. ಲಿಯೋ ನಿನಗೆ ಸಮಸ್ತಲೋಕದ ರಾಜಮುಕುಟ ನೀಡುವೆ! ನೀನು ಅಖಂಡ ಜಗತ್ತಿನ ದೊರೆಯಾಗಿರು! ನಿನಗೆ ಅನಂತ ಜೀವನದ ವರವನ್ನೂ ನೀಡುವೆ; ಜ್ಞಾನದ ಚಿನ್ನದರಾಶಿಯನ್ನು ಅರ್ಪಿಸುವೆ. ...ನನ್ನ ವರಪ್ರಸಾದಗಳಿಂದ ತೃಪ್ತನಾಗಿರುವಿಯಾ, ಪ್ರಭು?' ಎಂದು ಗೆಲುವಿನಿಂದ ಕೇಳಿದಳು.

ಲಿಯೋ ಅವಳತ್ತ ವಿಷಾದದಿಂದ ನೋಡಿ, ತಲೆ ಅಲ್ಲಾಡಿಸಿದ.

'ಹಾಗಾದರೆ ಇನ್ನೇನು ಬೇಕು, ಹೇಳು, ಅದನ್ನೂ ಒದಗಿಸುವೆ.'

'ನನಗೆ ನಿನ್ನನ್ನೇ ಅರ್ಪಿಸು, ಆಯೇಶಾ— ಮುಂದೆಂದೋ, ನಾನು ಯಾವುದೋ ನಿಗೂಢ ಅಗ್ನಿಜ್ವಾಲೆಯಲ್ಲಿ ಮಿಂದ ಮೇಲಲ್ಲ; ಈಗಲೇ, ಇದೇ ರಾತ್ರಿ.'

ಅವಳು ನಿರಾಶೆಯಿಂದ ತುಸು ಹಿಂಜರಿದಳು. 'ಇಷ್ಟು ಕೀರ್ತಿ ವೈಭವಗಳು ನಿನ್ನೆದುರು ಹರಡಿರುವಾಗ, ನೀನು ಒಬ್ಬ ಹೆಣ್ಣಿನ ಪ್ರೇಮವನ್ನು ಬೇಡುವೆ ಎಂದುಕೊಂಡಿರಲಿಲ್ಲ' ಎಂದು ಮೆಲ್ಲನೆ ಅಂದಳು.

'ಆಯೇಶಾ, ನಾನು ದೇವತೆಯಲ್ಲ; ಸಾಮಾನ್ಯ ಮಾನವ. ಉಳಿದವರಂತೆ ನಾನು ಪ್ರೇಮಿಸುವ ಸ್ತ್ರೀಯನ್ನು ಬಯಸುವೆ. ನಿನ್ನ ಶಕ್ತಿ, ನಿನ್ನ ಮಹದಾಸೆಗಳನ್ನೆಲ್ಲ ತೊರೆದು, ಒಂದು ರಾತ್ರಿಯಾದರೂ ನನ್ನ ಪತ್ನಿಯಾಗು!'

ಅವಳು ಉತ್ತರಿಸಲಿಲ್ಲ. ಸುಮ್ಮನೆ ಅವನತ್ತ ನೋಡಿ ತಲೆ ಅಲ್ಲಾಡಿಸಿದಳು.

'ನನ್ನ ಕೋರಿಕೆಯನ್ನೂ ನಿರಾಕರಿಸುವಿಯಾ ಹಾಗಾದರೆ ನಾನು ನಿನ್ನನ್ನು ಬಿಟ್ಟು ಎಲ್ಲಿಯಾದರೂ ಹೋಗಿ ಸಾಯುವೆ. ಈ ಯಾತನೆಯನ್ನು ಇನ್ನು ಸಹಿಸಲಾರೆ' ಲಿಯೋನ ಧ್ವನಿಯಲ್ಲಿ. ದುಃಖ

# ಲೈಫ್‌ಬಾಯ್ ಎಲ್ಲಿದೆಯೋ,
# ಅಲ್ಲಿದೆ ಆರೋಗ್ಯ!

LIFEBUOY
for Health

ಆರೋಗ್ಯಮಯ ಲೈಫ್‌ಬಾಯ್.
ಕೆಲಸದೊಡನೆ ದಿನವಿಡಿ ಹೋರಾಟ— ಜೋರಾದ
ಆಟ-ಓಟ. ಇವುಗಳ ನಂತರ ಲೈಫ್‌ಬಾಯ್
ಸ್ನಾನಕ್ಕಿಂತ ಮಿಗಿಲಾದದ್ದು ಬೇರೊಂದಿಲ್ಲ...
ಆ ಸ್ವಚ್ಛತೆಯು, ಆರೋಗ್ಯದ ಆ ಉಲ್ಲಾಸಕರ
ಸುಖಾನುಭವ... ಸದಾ ನಿಮಗೆ!

**ಲೈಫ್‌ಬಾಯ್**
**ಕೊಳೆಯಲ್ಲಿರುವ ಕ್ರಿಮಿಗಳನ್ನು ತೊಳೆದುಬಿಡುತ್ತದೆ.**

LINTAS.L95 1711 KN

ಹಿಂದುಸ್ತಾನ್ ಲೀವರ್ ಅವರ ಉತ್ಕೃಷ್ಟ ಉತ್ಪಾದನೆ.

ನಿರಾಸೆಗಳಿದ್ದವು.

ಆಯೇಶಾ ಮೌನವಾಗಿಯೇ, ತಲೆ ತಗ್ಗಿಸಿ ನಿಂತು ಬಿಕ್ಕಳಿಸಹತ್ತಿದಳು, 'ಅದು ನಿನಗೆ ಅಪಾಯಕರ, ಲಿಯೋ' ಎಂದು ಉಸುರಿದಳು.

'ನಾನೆಂಥ ಅಪಾಯವನ್ನಾದರೂ ಎದುರಿಸುವೆ, ಆಯೇಶಾ. ನಿನ್ನ ವಚನವನ್ನು ಪಾಲಿಸು; ನನ್ನವಳಾಗು' ಎಂದು ಲಿಯೋ ಅವಳನ್ನು ಆಲಂಗಿಸಿದ.

ಹಿಂದೊಮ್ಮೆ ನಾವು ಟಿಬೇಟಿನಲ್ಲಿ ತಿಂಗಳು ಗಟ್ಟಲೆ ಹಿಮಪಾತದಿಂದ ಒಳಗಡೆಯೇ ಸಿಕ್ಕು ಬಿದ್ದಿದ್ದೆವು. ಬರಿ ಶುಭ್ರವರ್ಣದ ಹಿಮವನ್ನು ನೋಡಿ ನೋಡಿ ಬೇಸರವಾಗಿತ್ತು, ಆ ಸುರಿಯುವ ಮಳೆ, ದಟ್ಟವಾದ ಮಂಜಿನಲ್ಲಿ ಹೊರಬೀಳುವ ದಂತೂ ಇನ್ನೂ ಅಪಾಯಕರವಾಗಿತ್ತು. ರಾತ್ರಿ ಗಳಂತೂ ಇನ್ನೂ ಕರಾಳವೆನಿಸುತ್ತಿದ್ದವು.

ಒಂದು ದಿನ ಮುಂಜಾನೆ ಸೂರ್ಯಪ್ರಕಾಶ ವನ್ನು ಕಂಡು ಬಾಗಿಲಿಗೆ ಬಂದು ನೋಡಿದೆವು, ಎಂಥ ಚಮತ್ಕಾರ! ಹಿಮವೆಲ್ಲ ಮಾಯವಾಗಿತ್ತು, ಬದಲು ಕಣಿವೆಯ ತುಂಬೆಲ್ಲ ಹಸಿರು ಹುಲ್ಲು, ಅದರ ನಡುವೆಲ್ಲ ನಗುವ ಹೂವುಗಳು. ಹೊಳೆಗಳು ಭರದಿಂದ ಹರಿಯುತ್ತಿದ್ದವು; ಹಕ್ಕಿಗಳು ಮರಗಳಲ್ಲಿ ಕುಳಿತು ಹಾಡುತ್ತಿದ್ದವು. ನೀಲಾಕಾಶವು ನಗು ತ್ತಿತ್ತು, ಶಿಶಿರಮಾಸದ ತಂಗಾಳಿ ಶಾಂತವಾಗಿ, ವಸಂತಋತು ಮಂದಾನಿಲದೊಂದಿಗೆ ಪ್ರೇಮಗೀತೆ ಹಾಡುತ್ತ ನಲಿದಾಡುತ್ತ ಬಂದಿತ್ತು.

ನಾನು ಆಯೇಶಾಳನ್ನು ನೋಡುತ್ತಿದ್ದಂತೆ, ಆ ದೃಶ್ಯ ಒಮ್ಮೆಲೆ ನೆನಪಿಗೆ ಬಂತು. ಅದಕ್ಕೆ ಕಾರಣ ಅವಳ ಮುಖದ ಮೇಲಾದ ಪರಿವರ್ತನೆ, ಇಷ್ಟು ದಿನ, ಅವಳೆಷ್ಟು ರೂಪವತಿಯಾಗಿದ್ದರೂ, ಅವಳ ಹೃದಯ ಆ ಹಿಮಾಚ್ಛಾದಿತ ಪರ್ವತದಂತೆ ದುರ್ಗಮವಾಗಿತ್ತು. ಅವಳ ಘನಗಾಂಭೀರ್ಯದ ಮುಂದೆ ಎಲ್ಲ ಆಶಾಕಾಂಕ್ಷೆ ಗಳು ಕುಸಿದು, ಅಭಿಲಾಷೆಗಳು ಕಮರುತ್ತಿದ್ದವು. ಅವಳ ನಿಗೂಢ ಅನುರಾಗ ಬರೀ ಬಾಹ್ಯಭಾವ ಎಂದೆನಿಸುತ್ತಿತ್ತು.

ಆದರೀಗ ಎಲ್ಲವೂ ಬದಲಾಗಿತ್ತು. ಆಯೇಶಾ ಳಲ್ಲಿ ಸ್ತ್ರೀತ್ವ ಮೂಡಿದ್ದು ಸ್ಪಷ್ಟವಾಯಿತು. ಅವಳ ಹೃದಯ ಸ್ಪಂದಿಸಹತ್ತಿತ್ತು. ಅವಳ ಮುಖದಲ್ಲಿ, ಅವಳ ಮಾದಕ ನೇತ್ರಗಳಲ್ಲಿ ಪ್ರೇಮದ ಆ ನಯ ವಾದ ಕಳೆ ಬೆಳಗುತ್ತಿತ್ತು. ಅವಳೀಗ ಗುಹೆ ಯಲ್ಲಿಯ ಮುಸುಕು ಹಾಕಿಕೊಂಡ ವಿರಕ್ತಳಾಗಿರ ಲಿಲ್ಲ, ದೇವಾಲಯದ ನಿಗೂಢ ದಿವ್ಯವಾಣಿಯೂ ಆಗಿರಲಿಲ್ಲ, ರಣರಂಗದ ವೀರಯೋಧಳೂ ಆಗಿರಲಿಲ್ಲ, ಈಗವಳು ಪತಿಯ ಕಣ್ತುಂಬುವ ಆತನ ಮನವನ್ನು ಪುಲಕಿತಗೊಳಿಸುವ ಸುಂದರ, ಮಂದಸ್ಮಿತ ವಧುವಾಗಿದ್ದಳು.

'ಹೇಳು, ಲಿಯೋ, ಹೇಗೆ ಮದುವೆ-ಯಾಗೋಣ?' ಎಂದು ಕೇಳಿ, ನನ್ನೆಡೆ ಕೈ ತೋರಿಸಿ, 'ಹಾಂ, ನಮ್ಮಿಬ್ಬರ ಪರಮಸ್ನೇಹಿತ ನಾದ ಹೊಲ್ಲಿಯೆ ನಮ್ಮ ಕೈ ಕೂಡಿಸುತ್ತಾನೆ. ನಮ್ಮ ವಿವಾಹ ಸಮಾರಂಭಕ್ಕೆ ಈ ಜ್ವಲಿಸುವ ಪಟ್ಟಣವೇ ಮಂಟಪವಾಗುವುದು. ಬದುಕಿ-ದ್ದವರೂ ಸತ್ತವರೂ ನಮ್ಮ ಮದುವೆಗೆ ಸಾಕ್ಷಿ ಯಾಗುವರು. ವಿವಾಹದ ವಿಧಿಗಳ ಬದಲಾಗಿ ನನ್ನ ಅಧರಗಳನ್ನು ಮೊದಲ ಬಾರಿ ನಿನ್ನ ಅಧರಗಳ ಮೇಲಿಡುವೆ. ಅನಂತರ ಮದುವೆಯ ಮಂತ್ರೋಚ್ಚಾರವೆಂದು ನಾನೊಂದು ಅಪೂರ್ವ ಪ್ರೇಮಗೀತೆಯನ್ನು ಹಾಡುವೆ... ಬಾ, ಹೊಲ್ಲಿ; ನಿನ್ನ ಕಾರ್ಯವನ್ನು ಪೂರೈಸು. ಕನ್ಯಾದಾನ ಮಾಡು' ಎಂದಳು.

ಸ್ವಪ್ನದಲ್ಲಿದ್ದವನಂತೆ ನಡೆದೆ. ಆಯೇಶಾ ಮುಂದೆ ಚಾಚಿದ ಕೈಯನ್ನು ಹಿಡಿದು ಲಿಯೋನ ಕೈಯಲ್ಲಿರಿಸಿದೆ. ಹೇಗೆ ಅವರ ಕೈಗಳನ್ನು ಕೂಡಿಸಿದೆನೋ ಗೊತ್ತಿಲ್ಲ. ಹೇಗೆ ಅವರನ್ನು ಆಶೀರ್ವದಿಸಿದೆನೋ ನೆನಪಿಲ್ಲ. ಅವರಿಬ್ಬರ ಕೈಗಳನ್ನು ಕೂಡಿಸಿದಾಗ ಮಾತ್ರ, ನರನಾಡಿ-ಗಳಲ್ಲೆಲ್ಲ ಅಲೌಕಿಕ ಆನಂದ ಅಲೆ ಅಲೆಯಾಗಿ ಆವರಿಸಿತು. ನನ್ನ ತನುಮನದಲ್ಲಿ ಜೀವನಸತ್ವ ತುಂಬಿ ತುಳುಕಿದಂತೆನಿಸಿತು.

ಅನಂತರ ಹಿಂದೆ ಗೋಡೆಗೆ ಆತುಕೊಂಡು ನಿಂತು ನೋಡಿದೆ. ಆಯೇಶಾ ಮುಕ್ತಮನಸ್ಸಿ-ನಿಂದ, ಮಿತಿ ಮೀರಿದ ಮೋಹದಿಂದ 'ಸ್ವಾಮೀ' ಎಂದು ಉಸುರಿ, ತನ್ನ ತೋಳುಗಳಿಂದ ಪ್ರಿಯ-ತಮನ ಕೊರಳು ಸುತ್ತು ಬಳಸಿ ಲಿಯೋನ

ಹಣೆಯ ಮೇಲೆ ಮುತ್ತಿಟ್ಟಳು.

ಆ ಮೇಲೆ ಅವರು ಆಲಿಂಗನದಲ್ಲಿ ಮೈ-ಮರೆತರು. ಆ ವೇಳೆ ಅವಳ ಹಣೆಯ ಮೇಲಿನ ಸೌಮ್ಯ ಕಾಂತಿ ಆತನ ಹಣೆಯ ಮೇಲೆಯೂ ಹರಡಿತು. ಅವಳ ಶುಭ್ರ ವಸ್ತ್ರಗಳಲ್ಲಿ ಅಡಗಿದ ಅಂದವಾದ ಮೈಮಾಟ ಜ್ಯೋತಿಯಂತೆ ಬೆಳಗುತ್ತಿರುವುದು ಕಾಣಿಸಿತು. ನಂತರ ನೆಮ್ಮದಿಯಿಂದ ನಗುತ್ತ, ಆತನಿಂದ ಸರಿದು ನಿಂತು ನುಡಿದಳು:

'ಲಿಯೋ ವಿನ್ಸಿ! ಎರಡನೆ ಬಾರಿ ನಾನು ಹೀಗೆ ಜನ್ಮವಾದೆ. ಇನ್ನೆಂದೂ ಯಾವ ಪ್ರಸಂಗದಲ್ಲಿಯೂ ನಾವು ಅಗಲಲಾರೆವು. ಈಗ ನಾನು ಹಾಡುವ ಗೀತೆಯನ್ನು ಸರಿಯಾಗಿ ಆಲಿಸು. ಆ ಗಾನದಲ್ಲಿ ನೀನು ಸತ್ಯವನ್ನು ಅರಿಯುವೆ—ನಾನು ಯಾರು, ನೀನು ಯಾರು, ನಮ್ಮ ಪ್ರೇಮದ ಉದಾತ್ತ ಧ್ಯೇಯವೇನು— ಎಲ್ಲವನ್ನೂ ತಿಳಿಯುವೆ. ಕೇಳು, ನನ್ನ ಪ್ರಿಯತಮ, ಪ್ರಭು, ಈ ದೈವದ ಗೀತೆಯ ಸಾರವನ್ನು ಕೇಳು.'

ಮೌನವಾಗಿ ಆಗಸದತ್ತ ತನ್ಮಯಳಾಗಿ ನೋಡುತ್ತ ನಿಂತಳು. ಪ್ರೇಮ ಸಾಫಲ್ಯದ ಈ ಸುಮುಹೂರ್ತದಲ್ಲಿ ಅವಳು ಅಪ್ರತಿಮ ದಿವ್ಯ ಸೌಂದರ್ಯದಿಂದ ವಿರಾಜಿಸುತ್ತಿದ್ದಳು.



ನಾನು ಲಿಯೋನತ್ತ ನೋಡಿದೆ. ಆತ ಅವಳ ಮುಂದೆ ಸ್ತಬ್ಧವಾಗಿ ನಿಂತಿದ್ದ. ಇಂಥ ಸುಂದರ, ಶಕ್ತಿಶಾಲಿಯಾದ ಸ್ತ್ರೀಯು ತನ್ನನ್ನು ಇಷ್ಟು ಹೃತ್ಪೂರ್ವಕವಾಗಿ ಪೂಜಿಸುವಾಗಲೂ ಆತ ಹೀಗೆ ನಿಶ್ಚಲನಾಗಿ ನಿಂತಿರಲು ಕಾರಣವೇನೆಂದು ನಾನು ದಿಗಿಲುಗೊಂಡೆ.

ಆಯೇಶಾ ಹಾಡಲಾರಂಭಿಸಿದಳು. ಅವಳ ಧ್ವನಿ ಎಷ್ಟು ಮಧುರ! ಆ ಮಧುರಸ್ವರದಿಂದ ನನ್ನ ಅಂತರಾತ್ಮ ತೃಪ್ತಿಯಿಂದ ತೇಲತೊಡಗಿತು. ...ಒಮ್ಮೆಲೇ, ಆಯೇಶಾಳ ಗಾನ ನಿಂತಿತು. ಅವಳ ಮುಖ ಕಾಂತಿವಿಹೀನವಾಯಿತು. ಭಯಾನಕವಾಯಿತು.

ಹೊಯ್ದಾಡುತ್ತಲಿದ್ದ ದೋಣಿಯಲ್ಲಿ ನಿಂತಂತೆ ಜೋಲಾಡುತ್ತಿದ್ದ ಲಿಯೋ ಆಯೇಶಾಳನ್ನು ಅಪ್ಪಿಕೊಳ್ಳಲು ತನ್ನ ಬಾಹುಗಳನ್ನು ಚಾಚಿದ. ಆದರೆ ಹಠಾತ್ತನೆ ಒಂದಕ್ಕೆ ವಾಲಿ, ನೆಲದ ಮೇಲೆ ಬಿದ್ದು ನಿಶ್ಚೇಷ್ಟಿತನಾದ.

ಆಯೇಶಾ ಅರಚಿದಳು. ಎಂಥ ಚೀತ್ಕಾರವದು! ಮಸಣದಲ್ಲಿದ್ದ ಶವಗಳನ್ನು ಎಚ್ಚರಿಸುವಂಥದು ಗಗನದ ನಕ್ಷತ್ರಗಳೆಲ್ಲ ಪ್ರತಿಧ್ವನಿಸುವಂಥ ಚೀತ್ಕಾರ. ಅದೊಂದೇ ಕೂಗು—ಬಳಿಕ ಮೌನ.

ನಾನು ಲಿಯೋನೆಡೆಗೆ ಹಾರಿದೆ. ಆದರೆ ಆತ ಅಸು ನೀಗಿದ್ದ! ಆಯೇಶಾಳ ಆ ಚುಂಬನದಿಂದ ಕಮರಿ, ಅವಳ ಪ್ರೇಮಜ್ವಾಲೆಯಲ್ಲಿ ಆಹುತಿಯಾಗಿ ಲಿಯೋ ಸತ್ತು ಬಿದ್ದಿದ್ದ!

ಕೆಲ ಹೊತ್ತು ಕಳೆಯಿತು. ಬಳಿಕ ಆಯೇಶಾಳ ಧ್ವನಿ ಕೇಳಿದೆ: 'ನನ್ನ ಪ್ರಭು ಕೆಲಕಾಲದ ಮಟ್ಟಿಗೆ ನನ್ನನ್ನು ಅಗಲಿದಂತಿದೆ. ನನ್ನ ಸ್ವಾಮಿ ಇರುವಲ್ಲಿಗೆ ನಾನು ಕೂಡಲೆ ಹೋಗಬೇಕು,' ಎಂದಳು.

ನಂತರ ಏನಾಯಿತೋ ಗೊತ್ತಿಲ್ಲ. ಭಗ್ನ ಹೃದಯಿಯಾಗಿ ಸ್ಮೃತಿ ತಪ್ಪಿದವನಂತಾಗಿದ್ದೆ ನಾನು. ನನ್ನ ಸರ್ವಸ್ವವನ್ನೂ ಕಳೆದುಕೊಂಡು ನಾನು ಸಂಪೂರ್ಣ ಜರ್ಜರಿತನಾಗಿದ್ದೆ. ನಿಃಶಕ್ತ ವೃದ್ಧನಾದ ನಾನಿನ್ನೂ ಬದುಕಿ ಉಳಿದು ಸಬಲ ತರುಣ ಹೀಗೆ ಚಿರನಿದ್ರೆಯಲ್ಲಿ ಮಲಗಬೇಕೆಂದರೆ...

*

ಸ್ವಲ್ಪ ಸುಧಾರಿಸಿಕೊಂಡು, ಪಕ್ಕದ ಕೋಣೆಗೆ ಹೋಗಿ ಹಾಸಿಗೆಯ ಮೇಲೆ ಉರುಳಿದೆ. ನಿದ್ರೆ ಬರಲಿಲ್ಲ. ತೆರೆದ ಬಾಗಿಲಿನಿಂದ ಆಯೇಶಾ ಮೃತನ ಬದಿಯಲ್ಲಿ ಕುಳಿತಿರುವುದು ಕಂಡಿತು. ಗಂಟೆಗಟ್ಟಲೆ, ಮೌನವಾಗಿ, ಅಚಲಳಾಗಿ ಆತನನ್ನೇ ನೋಡುತ್ತ ಕುಳಿತಿದ್ದಳು. ಅವಳು ಅಳಲಿಲ್ಲ, ನಿಟ್ಟುಸಿರನ್ನೂ ಬಿಡಲಿಲ್ಲ. ನಿದ್ರಿಸುವ ಮಗುವನ್ನು ಮಮತೆಯ ಮಾತೆ ನೋಡುವಂತೆ ದಿಟ್ಟಿಸುತ್ತಿದ್ದಳು. ಅವಳ ಮುಖದಲ್ಲಿ ಕೋಪ, ಹೆಮ್ಮೆಗಳು ಮಾಯವಾಗಿ, ಸೌಮ್ಯ, ಶಾಂತ, ಆತ್ಮವಿಶ್ವಾಸದ ಕಳೆ ಕಂಡಿತು.

ಆಮೇಲೆ ಎದ್ದು ನನ್ನೆಡೆ ಬಂದಳು. 'ದುಃಖಿಸಬೇಡ ಹೊಲ್ಲಿ. ಯಾಕೆಂದರೆ, ಆತ ತನ್ನ ನಶ್ವರ ಬಂಧನಗಳಿಂದ ಮುಕ್ತನಾಗಿರುವನೆಂದು ನನ್ನಾತ್ಮ ಸಂತೋಷಪಡುತ್ತದೆ. ಮರಣದಲ್ಲಿಯೇ ಪ್ರೇಮದ ನೆಲೆ; ಮರಣದಲ್ಲಿಯೇ ಪ್ರೇಮದ ಶಕ್ತಿ ಎಂದು ನನಗಿಂದು ಮನದಟ್ಟಾಗಿದೆ.' ಅದಕ್ಕೆ ಕಣ್ಣೀರು ಸುರಿಸದೇ ನನ್ನ ದಾರಿ ನೋಡುತ್ತಲಿರುವ ಆತನನ್ನು ಕೂಡಿಕೊಳ್ಳಲು ಶಾಂತಚಿತ್ತದಿಂದ ಹೋಗುವೆ...ಇನ್ನು ವಿಶ್ರಮಿಸು, ಗೆಳೆಯಾ ನಿದ್ರಿಸು' ಎಂದು ಹೇಳಿ ಹೋದಳು.

ಮರುದಿನ ನಾವು ಅಗ್ನಿಪರ್ವತಕ್ಕೆ ಮರಳಿ ಹೊರಟೆವು. ಲಿಯೋನ ಅಂತ್ಯಸಂಸ್ಕಾರ ಅಲ್ಲಿಯೇ ನಡೆಯುವುದಿತ್ತು. ರಾತ್ರಿಯ ವೇಳೆಗೆ ಮಂದಿರವನ್ನು ಸೇರಿದೆವು. ಆ ಮಾತೆಯ ರಜತ ಮೂರ್ತಿಯ ಮುಂದೆ ಲಿಯೋನ ಪಾರ್ಥಿವ ಶರೀರವನ್ನು ಇರಿಸಲಾಯಿತು. ಸಿಂಹಾಸನದ ಮೇಲೆ ಮುಸುಕು ಹಾಕಿಕೊಂಡು ಹಿಸಿಯಾ ಕುಳಿತು ತನ್ನ ಅರ್ಚಕರನ್ನು ಕುರಿತು, 'ನಾನು ದಣಿದಿದ್ದೇನೆ' ಅಂದಳು. 'ಕೆಲ ದಿನ ವಿಶ್ರಾಂತಿಗಾಗಿ ನಾನು ನಿಮ್ಮನ್ನು ಬಿಟ್ಟು ಪರ್ವತಗಳಾಚೆ ಹೋಗಬಹುದು. ಒಂದು ವರ್ಷ, ಅಥವಾ ಸಾವಿರ ವರ್ಷಗಳೂ ಕಳೆಯಬಹುದು. ನಾನಿಲ್ಲದಾಗ ಓರೋಸ್ ನಿಮ್ಮ ಸಲಹೆಗಾರನಾಗಿ ನನ್ನ ಸ್ಥಾನವನ್ನು ತುಂಬುವನು.

'ಅರ್ಚಕರೇ, ಪರಂಪರಾಗತ ಧನವೆಂದು ಈ ನನ್ನ ರಾಜ್ಯವನ್ನು ಒಳ್ಳೆಯ ರೀತಿಯಿಂದ ಆಳಿರಿ. ನಮ್ಮ ಪುರಾತನ ಧರ್ಮ – ಸಂಪ್ರದಾಯ

ಗಳ ಸತ್ವವನ್ನು ಅರಿತುಕೊಳ್ಳಿರಿ. ಸ್ವರ್ಗದಲ್ಲಿ ದಿವ್ಯಮಾತೆ ಪ್ರೇಮವಾತ್ಸಲ್ಯದಿಂದ ತನ್ನ ಮರ್ತ್ಯ ಲೋಕದ ಮಕ್ಕಳನ್ನು ಸಂರಕ್ಷಿಸುವಳು. ನಮ್ಮನ್ನು ಪಡೆದು, ಪೋಷಿಸಿ, ಪಾಲಿಸಿದ ಆ ಮಹಾ ತಾಯಿ ಕೊನೆಯಲ್ಲಿ ನಮ್ಮನ್ನು ಬರಮಾಡಿಕೊಳ್ಳು ವಳು. ನಾವು ಸದಾ ಕಹಿ ರೊಟ್ಟಿಯನ್ನೇ ತಿನ್ನ ಲಾರೆವು; ಕಣ್ಣೀರಿನ ಜಲವನ್ನೇ ಸದಾ ಕುಡಿಯ ಲಾರೆವು. ಇರುಳು ಕಳೆದು ಸೂರ್ಯ ಉದಯಿ ಸುವದುಂಟು, ಮಳೆಯಾಗಿ ಕಾಮನಬಿಲ್ಲು, ಮೂಡುವದು. ನಾವು ಕಳೆದುಕೊಂಡ ಜೀವನ ಚಿರಂಜೀವಿಯಾಗಿರುವದು.' ಥಟ್ಟನೆ ಮಾತು ನಿಲಿಸಿ ಅವರಿಗೆ ಅಪ್ಪಣೆ ಕೊಡುವಂತೆ ಕೈ ಬೀಸಿ ದಳು. ಅನಂತರ ನನ್ನತ್ತ ಕೈ ತೋರಿಸಿ 'ಈತ ನನ್ನ ಒಲವಿನ ಸ್ನೇಹಿತ ಹಾಗೂ ಅತಿಥಿ. ಈತ ನಿಮ್ಮ ಆಪ್ತ ಮಿತ್ರನೂ ಆದರದ ಅತಿ ಥಿಯೂ ಆಗಿರಲಿ. ಇಲ್ಲಿಯೇ ಈತನ ಯೋಗ ಕ್ಷೇಮವನ್ನು ನೋಡಿಕೊಂಡು, ಹಿಮವೆಲ್ಲ ಕರಗಿ ಬೇಸಿಗೆ ಬಂದಿತೆಂದರೆ, ಈತನನ್ನು ಸುರಕ್ಷಿತವಾಗಿ ಪರ್ವತಗಳಾಚೆ ಇವನು ಬಂದ ಮಾರ್ಗಕ್ಕೆ ಒಯ್ದು ಮುಟ್ಟಿಸಿ. ಮರೆಯಬೇಡಿ.' ಅಂದಳು.

ರಾತ್ರಿ ಸರಿದು ನಸುಕಿನ ಜಾವ ಸಮೀಪಿಸಿತ್ತು. ನಾವು ಮತ್ತೆ ಪರ್ವತಾಗ್ರದ ಮೇಲೆ ನಿಂತಿದ್ದೆವು. ಕೆಳಗೆ ಅದೇ ಬೆಂಕಿಯ ಕಣಿವೆ, ಎದುರುಗಡೆ ಅಗ್ನಿ ಜ್ವಾಲೆಯ ಪರದೆ, ಲಿಯೋನ ಮೃತದೇಹ ವನ್ನು ಶಿಖರದ ಅಂಚಿನಲ್ಲಿ ಇರಿಸಲಾಗಿತ್ತು. ಅದರ ಪಕ್ಕದಲ್ಲಿ ಆಯೇಶಾ ಮಂಡೆಯೂರಿ ಮೌನವಾಗಿ ಲಿಯೋನ ನಗುಮುಖವನ್ನೇ ನೋಡುತ್ತಿದ್ದಳು. ಕೊನೆಗೆ ಎದ್ದು ನಿಂತು, 'ಹೊಲ್ಲಿ, ಅರುಣೋದಯಪೂರ್ವದ ಗಾಢಾಂ- ಧಕಾರ ಈಗ ಸಮೀಪವಿದೆ. ನಾನು ಪರಾಜಿತ ಳೆಂದು ಭಾವಿಸಬೇಡ; ನನ್ನ ಸ್ವಾಮಿಯ ಪ್ರೇಮ ಯಜ್ಞದಲ್ಲಿ ನನ್ನ ಆತ್ಮ ಪುನರ್ಜನ್ಮ ಪಡೆದು ಪಾವನವಾಗಿದೆ. ಎಂದಿನಂತೆ ನಮ್ಮಿಬ್ಬರ ಆತ್ಮ ಗಳು ಒಂದಾಗಿವೆ.

'ಮಿತ್ರಾ, ನನ್ನ ನೆನಪಿಗಾಗಿ ಈ ರಾಜದಂಡ ವನ್ನು ತೆಗೆದುಕೋ. ನಿನ್ನ ಅಂತ್ಯ ಕಾಲದಲ್ಲಿ ನನ್ನನ್ನು ಕರೆಯಲು ಮಾತ್ರ ಅದನ್ನು ಉಪಯೋ ಗಿಸು. ಆಗ ನಾನು ಬರುವೆ. ಇನ್ನು ಶಾಂತ ನಾಗು. ಆತನ ಹಣೆಗೆ ಮುತ್ತಿಟ್ಟು, ಹಿಂದಕ್ಕೆ ಸರಿದು, ಸುಮ್ಮನೆ ನಿಂತಿರು,' ಎಂದು ನನಗೆ ಅಂದಳು.

ಹಿಂದಿನ ಸಲದಂತೆಯೇ ಈಗಲೂ ಅಗ್ನಿಕುಂಡ ದಲ್ಲಿ ಕತ್ತಲು ಕವಿಯಿತು. ಕೆಲ ಹೊತ್ತಿನಲ್ಲಿ ಮತ್ತೊಮ್ಮೆ ಆ ಎರಡು ರೆಕ್ಕೆಯ ಅಗ್ನಿಜ್ವಾಲೆ ತೇಲಿ ಬಂದು ಆಯೇಶಾ ನಿಂತಿರುವಲ್ಲಿ ಸುತ್ತು ವರೆದು ಅದೃಶ್ಯವಾಯಿತು.

ಒಂದೊಂದೇ ನಿಮಿಷಗಳು ಕಳೆದವು. ಸೂರ್ಯನ ಮೊದಲ ಕಿರಣ ಬಂಡೆಗಲ್ಲಿನ ಅಂಚನ್ನು ಬೆಳಗಿತ್ತು. ಕ್ಷಣಾರ್ಧದಲ್ಲಿ ಅದು ತೆರವಾಗಿತ್ತು! ಲಿಯೋನ ಮೃತದೇಹ ಮಾಯ ವಾಗಿತ್ತು. ಆಯೇಶಾಳೂ ಅಂತರ್ಧಾನಳಾಗಿ ದ್ದಳು.

ಆ ಅಗ್ನಿಜ್ವಾಲೆ ಪುನಃ ಮೇಲೇರುವಾಗ ಅದರಲ್ಲಿ ಲಿಯೋ ಹಾಗೂ ಆಯೇಶಾರ ಮುಖ ಚರ್ಯೆ ಹೊತ್ತ ಎರಡು ಭವ್ಯ ಆಕೃತಿಗಳನ್ನು ನಾನು ಕಂಡೆ.

ಮುಂದಿನ ಅನೇಕ ತಿಂಗಳುಗಳ ವರೆಗೆ ನಾನು



ಮಂಕು ಹಿಡಿದು ಮಂದಿರದಲ್ಲಿ ಅಲೆದಾಡುವಾಗ ಪರ್ವತದ ಹಿಮಾಚ್ಛಾದಿತ ಮಾರ್ಗಗಳಲ್ಲಿ ತಿರುಗಾಡುವಾಗ, 'ಆಯೇಶಾ ಎಲ್ಲಿ ಹೋದಳು?' ಎಂದು ವಿಚಾರಿಸುತ್ತಿದ್ದೆ.

ಆದರೆ ಅದಕ್ಕೆ ಉತ್ತರವೇ ಸಿಗಲಿಲ್ಲ. ಆಯೇಶಾಳ ಜೀವನವೆಂದರೆ ಒಂದು ನಿಗೂಢ ರಹಸ್ಯ. ಅವಳ ಮರಣ-ಅವಳು ಮರಣ ಹೊಂದಿದ್ದಳೆನ್ನುವುದನ್ನು ನಾನು ಒಪ್ಪಲಾರೆ. ಇಲ್ಲಿಲ್ಲದಿದ್ದರೆ, ಮತ್ತೆ ಯಾವುದಾದರೂ ಲೋಕದಲ್ಲಿ ಅವಳು ಖಂಡಿತ ಇರಬಹುದೆಂಬುದು ನನ್ನ ದೃಢ ನಂಬಿಕೆ. ನನ್ನ ಅಂತ್ಯಕಾಲದಲ್ಲಿ ನನ್ನ ಮಾರ್ಗದರ್ಶಿಯಾಗಲು ಬರುವಳೋ? ನಾನು ತಾಳ್ಮೆಯಿಂದ ದಾರಿ ಕಾಯಬೇಕು.

*

ಓರೋಸ್ ಮತ್ತಿತರ ಅರ್ಚಕರೆಲ್ಲ ನನಗೆ ಒಳ್ಳೆ ಆದರವನ್ನು ತೋರಿದರು. ಬೇಸಿಗೆಯಲ್ಲಿ ನಾನಲ್ಲಿಂದ ಹೋಗಲಿಚ್ಛಿಸಿದಾಗ ನನ್ನ ಪ್ರಯಾಣಕ್ಕೋಸ್ಕರ ಎಲ್ಲ ಸಿದ್ಧತೆಗಳನ್ನೂ ಮಾಡಿದರು. ಓರೋಸ್‌ಗೆ ವಿದಾಯ ಹೇಳಿ ಹೊರಟಾಗ, 'ನಾವಿಬ್ಬರೂ ವಿಚಿತ್ರ ಘಟನೆಗಳನ್ನು ಕಂಡವರು ಈಗ ನೀನೇ ಇಲ್ಲಿಯ ಸರ್ವಾಧಿಪತಿ' ಎಂದೆ.

'ಅದು ತಾತ್ಕಾಲಿಕ.' ಎಂದು ತಕ್ಷಣ ಉತ್ತರಿಸಿದ ಓರೋಸ್.

'ಅಂದರೆ?'

'ಹಿಸಿಯಾಗೆ ಮರಣವಿಲ್ಲ. ಅವಳ ರೂಪಾಂತರ ಆಗುವದಷ್ಟೇ. ಖಂಡಿತವಾಗಿ ಅವಳೀಗ ಹೋದಂತೆಯೇ ಮತ್ತೆ ಬರುವಳು. ಅವಳ ಪುನರಾಗಮನವನ್ನೇ ನಾನು ನಿರೀಕ್ಷಿಸುತ್ತಿದ್ದೇನೆ.'

'ನಾನೂ ಅವಳ ಪುನರಾಗಮನದ ನಿರೀಕ್ಷೆಯಲ್ಲಿರುವೆ' ಎಂದೆ. ಅಲ್ಲಿಂದ ಓರೋಸ್‌ನನ್ನು ಬೀಳ್ಕೊಟ್ಟು ನಾನು ಹೊರಟೆ.

ಅನೇಕ ದಿನಗಳ ಪ್ರವಾಸದ ನಂತರ ನಾನೊಂದು ಸಂಜೆ ಮತ್ತೆ ಆ ಬೌದ್ಧ ಸಂನ್ಯಾಸಿ ಮಠವನ್ನು ತಲಪಿದೆ. ಬಾಗಿಲಲ್ಲಿ ಹರಕು ಮೇಲಂಗಿ ತೊಟ್ಟ ಅದೇ ವೃದ್ಧ ಯತಿ ಆಕಾಶವನ್ನು ನೋಡುತ್ತ ಕುಳಿತಿದ. ನನ್ನನ್ನು ನೋಡಿ, 'ನಿನ್ನ ದಾರಿಯನ್ನೇ ನೋಡುತ್ತಿದ್ದೆನಯ್ಯ, ಅಂದ ಹಾಗೆ ಇನ್ನೊಬ್ಬ ಬಂಧು ಎಲ್ಲಿ?' ಎಂದ.

'ಸತ್ತು ಹೋದ' ಅಂದೆ.

'ಅಂದರೆ ಮತ್ತೆಲ್ಲಿಯೋ ಪುನರ್ಜನ್ಮ ಪಡೆದಿದ್ದಾನೆ. ಮುಂದೆಂದಾದರೂ ಖಂಡಿತ ಆತನನ್ನು ಭೇಟಿಯಾಗುವೆವು...ಈಗ ಬಾ; ಊಟ ಮಾಡು ಅನಂತರ ನಿನ್ನ ಕಥೆ ಹೇಳುವಿಯಂತೆ' ಎಂದ.

ಆ ರಾತ್ರಿ ಊಟವಾದ ಮೇಲೆ ಆತನಿಗೆ ಎಲ್ಲವನ್ನೂ ಹೇಳಿದೆ. ಆತ ಏಕಚಿತ್ತದಿಂದ ಆಲಿಸಿದ. ಆದರೆ ಆತನಿಗೆ ಯಾವುದೂ ವಿಚಿತ್ರವೆನಿಸಲಿಲ್ಲ. ಪುನರ್ಜನ್ಮದ ಸಿದ್ಧಾಂತದ ಆಧಾರದಿಂದ ಅದರ ತಾತ್ಪರ್ಯವನ್ನು ನನಗೆ ಸ್ಪಷ್ಟಗೊಳಿಸಹತ್ತಿದ.

'ಹಾಗಾದರೆ ಅಮರ ಲೋಕದಲ್ಲಿ ನಾವೆಲ್ಲ ಚಿರಂಜೀವಿಗಳೇ, ಪುಣ್ಯವಂತರೆ?' ನಾನು ಕೇಳಿದೆ.

'ಹೌದು. ಆದರೆ ಬಲು ನಿಧಾನವಾಗಿ ಪುಣ್ಯ ಪ್ರಾಪ್ತಿಯಾಗುವುದು. ನೀನು ಹೇಳುವ ಹಿಸಿಯಾ ಅಥವಾ ಆಯೇಶಾ ಇನ್ನೂ ನಿಧಾನವಾಗಿ ಪುಣ್ಯ ಪಡೆಯುವಳು...

ಇಲ್ಲಿ ಹೊಲ್ಲಿಯ ಹಸ್ತಪ್ರತಿ ಮುಕ್ತಾಯವಾಗಿದೆ. ಹೊರಗಿನ ಹಾಳೆಗಳು ಕಂಬಲ್ಯಾಂಡಿನ ಮನೆಯಲ್ಲಿ ಆತ ಅದನ್ನು ಬೆಂಕಿಯಲ್ಲಿ ಎಸೆದಾಗ ಸುಟ್ಟು ಹೋಗಿರುವವು. (ಮುಗಿಯಿತು)

---

Edited, printed and published by M. N. Mahishi on behalf of the Loka Shikshana Trust, Samyukta Karnataka Press, Koppikar Road, Hubli-580 020 Phone: 64307. Rept: Bombay, V. Satyamurthy Phone: 5510502, Calcutta: H. Majumdar Phone: 46-42331 Madras: K. A. Subramanian Phone: 842201; New Delhi; V. K. Chopra Phone: 7114785.

*Registered with the Registrar of Newspapers for India under No. 3539/57*